# ವಚನ ಮುಖದಲ್ಲಿ ಶರಣ ದರ್ಶನ

ಪ್ರೊ. ಬ. ಗಿ. ಯಲ್ಲಟ್ಟಿ



ಪ್ರಕಾಶಕರು
ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ,
ಇಲಕಲ್ಲ.

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತಸ್ವಾಮಿಗಳು, ಚಿತ್ತರಗಿ-ಇಲಕಲ್ಲ ಇವರ
ಪಟ್ಟಾಭಿಷೇಕದ ರಜತ ಮಹೋತ್ಸವದ ಸಂಸ್ಮರಣೆಯ ಕಾಣಿಕೆ

---

ಚಿತ್ತರಗಿ ಶರಣ ಸಿದ್ಧಾಂತ ವಿದ್ಯಾಪೀಠ, ಇಲಕಲ್ಲದ ೭೪ನೇ ಪ್ರಕಟನೆ

# ವಚನಮುಖದಲ್ಲಿ
# ಶರಣ ದರ್ಶನ

ಲೇಖಕರು :

ಬ. ಗಿ. ಯಲ್ಲಟ್ಟಿ ಎಂ.ಎ.




೧೯೯೭

ಪ್ರಕಾಶಕರು :

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ

ಇಲಕಲ್ಲ-೫೮೭ ೧೨೫ (ಜಿ: ಬಾಗಲಕೋಟ)

"VACHANAMUKHADALLI SHARANA DARSHANA"
Written by: B. G. Yallatti, M.A.,
"Basava Nilaya" BANAHATTI. (Tq: Jamakhandi. Dt: Bijapur)

Published by: Chittaragi Shri Vijaya Mahanteshwara
Dharma Pracharaka Mandal, ILKAL–587 125
Dist: Bagalkot.

Printed by: Allama Mudranalaya, Basaveshwar Nagar,
GADAG–582 101.

Pages: 200 + xii

First Edition: Aug. 1997 Price: 60–00 Copies: 1000




ಲೇಖಕರು: ಬ. ಗಿ. ಯಲ್ಲಟ್ಟಿ ಎಂ. ಎ.
"ಬಸವ ನಿಲಯ" ಬನಹಟ್ಟಿ. (ತಾ: ಜಮಖಂಡಿ ಜಿ: ವಿಜಾಪುರ)

ಪ್ರಥಮ ಆವೃತ್ತಿ: ಆಗಷ್ಟ ೧೯೯೭

ಬೆಲೆ: ರೂ. ೬೦-೦೦

ಪ್ರತಿಗಳು: ೧೦೦೦



ಮುದ್ರಣ :
ಅಲ್ಲಮ ಮುದ್ರಣಾಲಯ,
ಬಸವೇಶ್ವರ ನಗರ (ಶಹಪೂರಪೇಟೆ) ಗದಗ. ☎ ೨೬೫೩೧
ಪ್ರೊ. ಪಿ. ಆರ್. ಜಂಗಮನಿ ಬಿ.ಎ., ಬಿ.ಕಾಂ. (ಎಲ್‌ಎಲ್.ಬಿ.)

# ಸ ಮ ರ್ಪ ಣೆ

ಚಿತ್ತರಗಿ ಶ್ರೀ ವಿಜಯ ಮಹಾಂತೇಶ ಪೀಠದಲಿ
ಬಸವಕ್ರಾಂತಿಗೆ ಮತ್ತೆ ಉಸಿರು ತುಂಬಿದ ತಂದೆ
ಶರಣು ಶರಣಾರ್ಥಿ ನಿಮಗೆ !

ಸೆರೆಸಿಂದಿ ವ್ಯಸನಗಳ ಹುಚ್ಚು ಬಿಡಿಸಿ
ಬಸವ ವಚನಾಮೃತದ ಹುಚ್ಚು ಹಿಡಿಸಿ
ಉದ್ಧರಿಸಿದಪ್ಪಗಳೆ ಶರಣಾರ್ಥಿ ನಿಮಗೆ !

ಅಂಧ ಕಂದಾಚಾರ ಕಳೆಕಸವ ಕಿತ್ತೆಸೆದು
ಶರಣ ಸಂಸ್ಕೃತಿ ಬಿತ್ತಿ ಬೆಳೆದಂಥ ಶಿವ ಫಲವ
ಉಣಿಸಿ ತಣಿಸಿದ ಗುರುವೆ ಶರಣಾರ್ಥಿ ನಿಮಗೆ !

ವಿಜಯ ಮಹಾಂತಪ್ಪಗಳ ಪ್ರತಿರೂಪ ನೀವಾಗಿ
ಬಸವ ಜ್ಯೋತಿಯ ಬೆಳಗಿ, ಜನಮನದ ಕತ್ತಲೆಗೆ
ಬೆಳಕು ಮಾಡಿದ ಮಹಿಮ ಶರಣಾರ್ಥಿ ನಿಮಗೆ !

ನಿಮ್ಮ ಕರುಣಾ ಜಲದಿ ಬಂದ ಈ ಕೃತಿ ಸುಮವ
ನಿಮ್ಮ ಸೊಮ್ಮಿಗೆ ಸಲಿಸಿ ಧನ್ಯನಾದೆನು ಇಂದು
ಹರಸಿ ಓ ಚರಮೂರ್ತಿ ಶರಣಾರ್ಥಿ ನಿಮಗೆ !

— ಬ. ಗಿ. ಯಲ್ಲಟ್ಟಿ

:: ಶ್ರೀಗುರು ಬಸವಲಿಂಗಾಯ ನಮಃ ::

ಶ್ರೀಮನ್ನಿರಂಜನ ಜಗದ್ಗುರು

## ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು

ಶ್ರೀ ಜ. ತೋಂಟದಾರ್ಯ ಸಂಸ್ಥಾನಮಠ, **ಡಂಬಳ – ಗದಗ.**

# ಶುಭ ಹಾರೈಕೆ

"ವಚನಮುಖದಲ್ಲಿ ಶರಣ ದರ್ಶನ" ಪ್ರೊ. ಬ. ಗಿ. ಯಲ್ಲಟ್ಟಿಯವರ ಈ ಕೃತಿ, ಹೆಸರೇ ಸೂಚಿಸುವಂತೆ ವಚನ ಹಾಗೂ ಶರಣರ ಬದುಕನ್ನು ಕುರಿತು ಕೆಲ ಒಳನೋಟಗಳನ್ನು ಒದಗಿಸುತ್ತದೆ. "ಮುಖ, ಮನಸ್ಸಿನ ಕೈಗನ್ನಡಿ"ಯೆನ್ನುವಂತೆ ಈ ಲೇಖಕರು ಇಲ್ಲಿಯ ಕೆಲವು ಲೇಖನಗಳಲ್ಲಿ ವಚನಮುಖದ ಮೂಲಕ ಶರಣ ತತ್ವವನ್ನು ಅರಿಯುವ ಪ್ರಯತ್ನ ಮಾಡಿದ್ದಾರೆ. "ಬಸವಣ್ಣನವರ ವಚನಗಳ ವಿಶೇಷತೆ"ಯಿಂದ ಪ್ರಾರಂಭಿಸಿ, ವಚನಸಾಹಿತ್ಯ ಅಂದು–ಇಂದುಗಳ ವರೆಗೆ 'ಮೇದಾರ ಕೇತಯ್ಯನ ಜೀವನ ತತ್ವ'ದಿಂದಾದಿಯಾಗಿ'ಭಾವ ಬಯಲು ಮಹಾಂತ ಜೋಳಿಗೆ'ಯ ವರೆಗೆ ಇವರ ಲೇಖನಗಳ ಹರವು ಇದೆ. ಒಬ್ಬ ಪ್ರತಿಭಾವಂತ ಲೇಖಕ ಹೇಗೆ ಇತರರಿಗಿಂತ ಭಿನ್ನವಾಗಿ ಚಿಂತಿಸಬಲ್ಲ; ತನ್ನದೇ ಆದ ಆದರ್ಶವನ್ನು ಕಾಣಬಲ್ಲ ಎಂಬುದನ್ನು ಇವರ ಲೇಖನಗಳಲ್ಲಿ ಕಾಣಬಹುದು. ವಚನಸಾಹಿತ್ಯ, ಶರಣಧರ್ಮ, ಹೇಗೆ ಇಂದಿಗೂ ಪ್ರಸ್ತುತ ಎನ್ನುವುದನ್ನು ನಿರಾಡಂಬರ ಭಾಷೆಯಲ್ಲಿ ಜನಸಾಮಾನ್ಯರಿಗೂ ಮುಟ್ಟುವಂತೆ ಚಿತ್ರಿಸುವಲ್ಲಿ ಪ್ರೊ. ಬ. ಗಿ. ಯಲ್ಲಟ್ಟಿಯವರು ಸಫಲರಾಗಿದ್ದಾರೆ. ಇವರ ವಿಸ್ತಾರವಾದ ಓದು ಆಳವಾದ ಚಿಂತನ ಪುಸ್ತಕಕ್ಕೆ ಹೆಚ್ಚಿನ ಮೌಲ್ಯವನ್ನು ತಂದಿವೆ.

॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳು

## ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ, ಇಳಕಲ್ಲ.

## — ಅನುಭಾವ ವಾಣಿ —

ಅರಿವು-ಆಚಾರ-ಅನುಭಾವಗಳನ್ನು ಅಂಗವಿಸಿಕೊಂಡು, ಮಾನವತ್ವದಿಂದ ಮಹಾಮಾನವತ್ವಕ್ಕೆ ಅಂದರೆ ಶರಣತ್ವಕ್ಕೆ ಏರಿರುವ ಹಿರಿಯ ಅನುಭಾವಿ, ಶರಣ, ಬಸವಭಕ್ತ, ಶ್ರೀ ಬ. ಗಿ. ಯಲ್ಲಟ್ಟಿಯವರು "ವಚನಮುಖದಲ್ಲಿ ಶರಣ ದರ್ಶನ" ಎಂಬ ಗ್ರಂಥ ರಚಿಸಿದ್ದಾರೆ.

ಈ ಗ್ರಂಥದ ಹೆಸರೇ ಹೇಳುವಂತೆ 'ವಚನಗಳಲ್ಲಿ ಶರಣರ ದರ್ಶನ'ವನ್ನು ಈ ಶರಣಜೀವಿ ಯಲ್ಲಟ್ಟಿಯವರು ನಮಗೆಲ್ಲಾ ಮಾಡಿಸಿದ್ದಾರೆ. ಶ್ರೀಯುತರ ಈ ಪುಸ್ತಕದಲ್ಲಿ ೨೧ ಲೇಖನಗಳಿವೆ. ಒಂದೊಂದು ಲೇಖನವೂ ಶ್ರೀ ಯಲ್ಲಟ್ಟಿ ಶರಣರ ಪಕ್ವ ಹೃದಯದ, ಪರಿಶುದ್ಧ ಮನಸ್ಸಿನ, ಬಸವತತ್ತ್ವ ಕಳಕಳಿಯ ಪರಿಚಯ ಮೂಡಿಸುತ್ತದೆ.

'ವಚನ' ಇದು ಬರಿ ಅಕ್ಷರಗಳ ಜೋಡಣೆಯಲ್ಲ, ಬರಿ ಮಾತೂ ಅಲ್ಲ. ಅರಿವು-ಆಚರಣೆಯಲ್ಲಿ ಬಂದಾಗ, ಆಚರಣೆಯಿಂದ ಅನುಭವವಾದಾಗ ಅನುಭವವೇ-ಅನುಭಾವವಾಗಿ ಹೊರಹೊಮ್ಮಿದ ಶರಣ ಹೃದಯದ ನುಡಿಗಡಣವೇ ವಚನಗಳಾಗಿವೆ. 'ವಚನ' ಈ ಪದದ ಅಕ್ಷರಗಳನ್ನು ವಿಶ್ಲೇಷಿಸಿದಾಗ- 'ವ' ಎಂದರೆ ವಚಿಸು, 'ಚ' ಎಂದರೆ ಚರಿಸು, 'ನ' ಎಂದರೆ ನಯನಿಸು ಎಂದು ಅನುಭಾವವಿರುವುದು ತಿಳಿದು ಬರುತ್ತದೆ. ಆದ್ದರಿಂದ ಶರಣನು ವಚಿಸಿದ್ದು, ಶರಣನು ರಚಿಸಿದ್ದು, ಶರಣನು ನಯನಿಸಿದ್ದು, ಈ ಒಟ್ಟು ಅನುಭಾವದ ವಾಣಿಯೇ 'ವಚನ'ವಾಗಿವೆ.

ಇಂತಹ ಬಸವಾದಿ ಶರಣರ ವಚನಗಳನ್ನು ಅನುಭಾವ ಮಾಡುತ್ತಾ ಆ ವಚನಗಳ ಮುಖದಲ್ಲಿ ಶರಣರ ದರ್ಶನ ಅಂದರೆ ಶರಣರ ತತ್ತ್ವಂಗಳ ದರ್ಶನ ಮಾಡಿಸುತ್ತಾರೆ ಶರಣ ಬ. ಗಿ. ಯಲ್ಲಟ್ಟಿಯವರು. ಶ್ರೀಯುತರ ಈ ಬಿಡಿ-ಬಿಡಿ ಲೇಖನಗಳಲ್ಲಿ ವೈವಿಧ್ಯತೆ ಇದೆ, ಜೊತೆಗೆ ಬಸವತತ್ತ್ವದ ಏಕತಾನತೆ ಇದೆ. ಶಿವಶರಣರ ಜೀವನ-ಸಾಧನೆ-ಸಿದ್ಧಾಂತಗಳ ದರ್ಶನವಿದೆ.

ಶರಣ ಬ. ಗಿ. ಯಲ್ಲಟ್ಟಿಯವರಂತಹ ಅನುಭಾವಿಗಳಿಂದ ಇನ್ನೂ ಅನೇಕ ಗ್ರಂಥಗಳು ಹೊರಬರುವಂತಾಗಲಿ, ವಿಶ್ವಗುರು ಬಸವಣ್ಣನವರ, ಚಿತ್ತರಗಿ ಶ್ರೀ ವಿಜಯಮಹಾಂತ ಶಿವಯೋಗಿಗಳವರ ಕರುಣೆ ನಿರಂತರವಾಗಿರಲಿ ಎಂದು ಹೃದಯಾರೆ ಶುಭ ಹಾರೈಸುತ್ತೇವೆ.

ಶರಣು-ಶರಣಾರ್ಥಿಗಳು.

# ಪ್ರಕಾಶಕರ ನುಡಿ

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠವು ಬಸವತತ್ತ್ವ-ಧರ್ಮ-ಪರಂಪರೆ-ಸಂಸ್ಕೃತಿಯನ್ನು ಜೀವಂತವಾಗಿರಿಸಿರುವ, ಅನುಷ್ಠಾನಗ್ಯಯುತ್ತ ಬಂದಿರುವ ಪೀಠವಾಗಿದೆ.

ಈ ಚಿತ್ತರಗಿ ಪೀಠದ ೧೬ನೇ ಮಠಾಧಿಪತಿಗಳಾಗಿದ್ದ ಪೂಜ್ಯ ಶ್ರೀ ಮ.ನಿ.ಪ್ರ. ವಿಜಯಮಹಾಂತ ಶಿವಯೋಗಿಗಳು ಚಿತ್ತರಗಿ ಚಿಜ್ಯೋತಿ ಎಂದು ಪ್ರಖ್ಯಾತರಾದವರು. ಧರ್ಮಪಿತ ಬಸವಣ್ಣನವರ ವಚನಗಳನ್ನು ಅಪ್ಪನವರ ವಚನಗಳೆಂದು ಮಂತ್ರ ಸ್ವರೂಪವಾಗಿ ಪಾರಾಯಣಮಾಡಿ, ನುಡಿದಂತೆ ನಡೆದವರು, ನಡೆದಂತೆ ನುಡಿದವರು, ನುಡಿಯೊಳಗೆ ನಡೆಯ ಪೂರೈಸಿದವರು.

ಇಂತಹ ಬಸವ ತತ್ತ್ವಾನುಷ್ಠಾನದ ಪರಂಪರೆಯ ಚಿತ್ತರಗಿ ಪೀಠದ ಚಿಜ್ಯೋತಿಯ ಕಾರುಣ್ಯದ ಬಸವಜ್ಯೋತಿಯಾಗಿ ಈಗಿರುವ ೧೯ನೆಯ ಪೀಠಾಧಿಪತಿಗಳಾಗಿರುವ ಪೂಜ್ಯಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳೂ ಸಹ 'ಕಲ್ಯಾಣದಪ್ಪಗಳವರ ವಚನ'ಗಳನ್ನು ಉಸಿರು, ಪ್ರಾಣ. ಆತ್ಮವಾಗಿಸಿಕೊಂಡು ಬಾಳುತ್ತಿದ್ದಾರೆ. ಬಸವತತ್ತ್ವಾನುಷ್ಠಾನದ ಕ್ರಿಯಾಶೀಲ ಜಂಗಮಜ್ಯೋತಿಯಾಗಿದ್ದಾರೆ.

ಇಂತಹ ಪೂಜ್ಯ ಶಿವಯೋಗಿಗಳ ಮಾರ್ಗದರ್ಶನದಲ್ಲಿ 'ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ, ಇಲಕಲ್ಲ ಇವರಿಂದ ಶರಣ ಸಿದ್ಧಾಂತ ವಿದ್ಯಾಪೀಠದ ೭೪ನೇ ಪ್ರಕಟನೆಯಾಗಿ "ವಚನಮುಖದಲ್ಲಿ ಶರಣ ದರ್ಶನ" ಎಂಬ ಗ್ರಂಥವು ಪ್ರಕಾಶನಗೊಳ್ಳುತ್ತಿದೆ.

ಈ ಗ್ರಂಥದ ಲೇಖಕರು ಶರಣ ಬ. ಗಿ. ಯಲ್ಲಟ್ಟಿಯವರು. ಶ್ರೀಯುತರು ವಚನ ಚಿಂತನಶೀಲರೂ, ಅನುಭಾವಿಗಳೂ ಆಗಿದ್ದಾರೆ, ಚಿತ್ತರಗಿ ಪೀಠದ ಅಭಿಮಾನಿಗಳೂ ಆಗಿದ್ದಾರೆ. ಇಂತಹ ಹಿರಿಯ ಶರಣಜೀವಿಗಳ ಗ್ರಂಥವನ್ನು ಶ್ರೀ ವಿಜಯಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ ಇಲಕಲ್ಲದಿಂದ ಪ್ರಕಾಶಪಡಿಸಲು ಹೆಮ್ಮೆಯೆನಿಸುತ್ತದೆ.

ಶರಣ ಬ. ಗಿ. ಯಲ್ಲಟ್ಟಿಯವರಿಂದ ಬಸವಾದಿ ಶರಣರ ಕುರಿತು ಇನ್ನೂ ಅನೇಕ ಗ್ರಂಥಗಳು ಬರೆಯಲ್ಪಡಲಿ, ನಾಡಿನ ಜನತೆಯ ಹೃದಯ ಬೆಳಗುವಂತಾಗಲಿ ಎಂದು ಹೃದಯಾರೆ ಆಶಿಸುತ್ತೇವೆ.

**ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ**
**ಧರ್ಮಪ್ರಸಾರಕ ಮಂಡಲ, ಇಲಕಲ್ಲ.**

## ಶ್ರೀ ಶಿವಕುಮಾರ ಸ್ವಾಮಿಗಳು
### ಶಿವಯೋಗಾಶ್ರಮ
### ಮಡಿಕೇಶಿರೂರ – ಬಿದರಕುಂದಿ.

# ಸದಾಶಯ

ಈ ನಾಡಿನ ಹಿರಿಯ ಶರಣಸಾಹಿತಿಗಳಾದ ಶ್ರೀ ಬ. ಗಿ. ಯಲ್ಲಟ್ಟಿ ಅವರ 'ವಚನಮುಖದಲ್ಲಿ ಶರಣದರ್ಶನ' ಸಮಗ್ರವಾಗಿ ಪರಿಶೀಲಿಸಲಾಯಿತು. ಈ ಹೊತ್ತಿಗೆಯಲ್ಲಿ ವಚನಸಾಹಿತ್ಯವನ್ನು ಕುರಿತಂತೆ ಇಪ್ಪತ್ತೊಂದು ಲೇಖನಗಳಿವೆ. ಒಂದೊಂದು ಲೇಖನವೂ ತನ್ನಷ್ಟಕ್ಕೆ ತಾನು ಸ್ವತಂತ್ರವಾಗಿದ್ದು ಶರಣರ ಸಾಧನೆಯ ವಿವಿಧ ಮುಖಗಳನ್ನು ಪರಿಚಯಿಸುತ್ತದೆ.

ಆರಂಭದ ಲೇಖನವು "ವಚನಮುಖದಲ್ಲಿ ಶರಣದರ್ಶನ" ಶರಣರ ಕರ್ತೃತ್ವ, ವ್ಯಕ್ತಿತ್ವ ಮತ್ತು ಅವರ ಸಾಧನೆ ಸಿದ್ಧಿಗಳ ಬಗ್ಗೆ ಮನೋಜ್ಞವಾಗಿ ಚಿತ್ರಿಸುತ್ತದೆ. ಬಸವಣ್ಣನವರ ವಚನಗಳ ವಿಶೇಷತೆ ಅವುಗಳ ಸೊಗಸು, ಸೌಂದರ್ಯ, ಸುಭಗತೆ ಇವುಗಳ ಬಗ್ಗೆ ತಮ್ಮ ಎರಡನೆಯ ಲೇಖನದಲ್ಲಿ ಬರೆಯುತ್ತಾ, ಅಣ್ಣನವರ ವಚನಗಳು ಕಾಲಾತೀತ, ದೇಶಾತೀತ, ಮತಾತೀತ ಎಂಬುದಾಗಿ ಹೇಳುತ್ತಾರೆ. ಅಲ್ಲದೇ ಆ ವಚನಗಳ ಪರಿಣಾಮ ಚಿರಂತನವಾದುದೆಂದು ನಮ್ಮ ಗಮನ ಸೆಳೆಯುತ್ತಾರೆ. ಸಮಾಜದ ಕಟ್ಟಕಡೆಯ ವ್ಯಕ್ತಿಯ ಉದ್ಧಾರವೇ ನಿಜವಾದ ಸಮಾಜೋದ್ಧಾರವೆಂದು ನಂಬಿದ ಶರಣರು ನೈತಿಕ ನೆಲೆಗಟ್ಟಿನ ಮೇಲೆ ತತ್ವಾಧಾರಿತ ಸ್ವಯಂಪೂರ್ಣ ಸಮಾಜವನ್ನು ನಿರ್ಮಿಸಲು ತಮ್ಮ ಬದುಕನ್ನೇ ಅರ್ಪಿಸಿದರು. ಶರಣರು ಕಟ್ಟಿದಂತ ಸ್ವಯಂಪೂರ್ಣ ಸಮಾಜದ ಬಗ್ಗೆ ಮೂರನೆಯ ಲೇಖನವಿದೆ. ಮುಂದಿನದು ಮೇದಾರ ಕೇತಯ್ಯ ಶರಣರ ಜೀವನ ತತ್ವವನ್ನು ಕುರಿತುದಾಗಿದೆ ಇವರದು ಬಹಿರಂಗದಲ್ಲಿ ಬಿದಿರಿನ ಕಾಯಕ, ಅಂತರಂಗದಲ್ಲಿ ಅರಿವಿನ ಕಾಯಕ. ಅಂತರಂಗ–ಬಹಿರಂಗಗಳೆರಡರಲ್ಲೂ ಬೆಳಕಿನ ಬದುಕನ್ನು ಸಾಗಿಸಿದವರು ಇವರು. ಇದೊಂದು ಸುಂದರ ವ್ಯಕ್ತಿಚಿತ್ರಣ. ಅಕ್ಕನ ವಚನಗಳಲ್ಲಿ ಬರುವ ಅನುಭಾವವೂ, ರಸಾನುಭವವೂ ಮಾತಿಗೆ ಮೀರಿದ್ದು. ಅಕ್ಕನ ವ್ಯಕ್ತಿತ್ವವಂತೂ ವರ್ಣನಾತೀತ.

"ಅಜಕಲ್ಪಕೋಟಿ ವರುಷದವರೆಲ್ಲರೂ ಹಿರಿಯರೆ ? ಹುತ್ತೇರಿ ಚಿತ್ತಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ ? ನಡು ಮುರಿದು, ತಲೆ ನಡುಗಿ, ನೆರೆತರೆ ಹೆಚ್ಚಿ, ಮತಿಗೆಟ್ಟು ಒಂದನಾಡ ಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ ?

ಅಸುವರಿದು, ಘನವ ಬೆರಸಿ, ಹಿರಿದು ಭೇದವ ಮರೆದು, ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು.

ಅಕ್ಕನ ವಚನಗಳನ್ನು ಷಟಸ್ಥಲ ಚಕ್ರವರ್ತಿ ಶ್ರೀ ಚನ್ನಬಸವಣ್ಣನವರೇ ತೂಗಿನೋಡಿ ಹೀಗೆ ತಲೆಬಾಗಿದ್ದಾರೆ.

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ;
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ;
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ;
ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಯ್ಯನಲ್ಲಿ
ಮಹಾದೇವಿಯಕ್ಕಗಳ ಒಂದು ನಿರ್ವಚನ"

ಇದು ಅಕ್ಕನವರ ವಚನದ ಮಹಿಮೆಯನ್ನು ಎತ್ತಿ ತೋರಿಸುತ್ತದೆ. ವಿಶಿಷ್ಟವಾದ ಉದ್ದೇಶ ಸಾಧನೆಗಾಗಿ ಶರಣರು ಅನುಭವ ಮಂಟಪವನ್ನು ಕಟ್ಟಿದರು. ಅಲ್ಲಿ ಸಕಲ ಜೀವಾವಳಿಗೆ ಲೇಸನ್ನೇ ಬಯಸುವ ವಚನ ಸಾಹಿತ್ಯ ಮೂಡಿಬಂತು. ಇಂತಹ ಅನುಭವ ಮಂಟಪದ ಸಾಧನೆ ಮತ್ತು ಸಿದ್ಧಾಂತದ ಬಗ್ಗೆ ಆರನೆಯ ಲೇಖನದಲ್ಲಿ ಬರೆದಿದ್ದಾರೆ. ಶಿವತತ್ವವು ಸಾಹಿತ್ಯವಾಗುವದೊಂದು ಅಪೂರ್ವ ಘಟನೆ. ಉದಕವು ಮುತ್ತಾದಂತೆ. ಈ ಹಿನ್ನೆಲೆಯಲ್ಲಿ ಏಳನೆಯ ಲೇಖನ ಅಪ್ರತಿಮವಾಗಿದೆ. ದಯೆಯ ಹಿನ್ನೆಲೆಯಲ್ಲಿ ಶರಣರು 'ದಾಸೋಹ ಧರ್ಮ'ವನ್ನು ಜಗತ್ತಿಗೆ ಅನುಗ್ರಹಿಸಿದರು. ಈ ದಾಸೋಹಧರ್ಮದ ದರ್ಶನದ ಬಗ್ಗೆ ಎಂಟನೆಯ ಲೇಖನವಲ್ಲಿ ಬಹಳ ವಿಸ್ತಾರವಾಗಿ ವಿವರಿಸಿದ್ದಾರೆ. ಶರಣ ಸಾಹಿತ್ಯ ಪರಂಪರೆಯಲ್ಲಿ ಹದಿನೈದನೆಯ ಶತಮಾನ ಬಹಳ ಅಪೂರ್ವವಾದುದು. ಈ ಕಾಲದಲ್ಲಿ ತೋಂಟದ ಸಿದ್ಧಲಿಂಗ ಯತಿಗಳು, ಸ್ವತಂತ್ರ ಸಿದ್ಧಲಿಂಗೇಶ್ವರರು ಮತ್ತು ಘನಲಿಂಗಿದೇವರು ಮುಖ್ಯರಾಗಿ ಕಾಣುತ್ತಾರೆ. ಇವರಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರ ಮತ್ತು ಘನಲಿಂಗಿದೇವರನ್ನು ಕುರಿತು ಅವರ ಕೃತಿಗಳನ್ನು ಒಂಭತ್ತನೆಯ ಲೇಖನದಲ್ಲಿ ಬರೆಯುತ್ತಾರೆ. ವಚನಕಾರರಲ್ಲಿಯೇ ಅತ್ಯಂತ ವಿಶಿಷ್ಟವಾದ ವ್ಯಕ್ತಿತ್ವವುಳ್ಳವರು ಶ್ರೀ ಕಾಡಸಿದ್ಧೇಶ್ವರರು. ಇವರು ಕಂದಾಚಾರ,ಡಂಭಾಚಾರ. ಅನಾಚಾರ ಇವುಗಳನ್ನು ನೇರವಾಗಿ, ನಿಷ್ಠುರವಾಗಿ ಸ್ಪಷ್ಟವಾಗಿ ಮಂಡಿಸಿದ್ದಾರೆ ಮತ್ತು ಖಂಡಿಸಿದ್ದಾರೆ. ಇವರ ವಚನಗಳ ಸಾಮಾಜಿಕ ಅಧ್ಯಯನಕ್ಕಾಗಿ ಹತ್ತನೆಯ ಲೇಖನವು ಮೀಸಲಾಗಿದೆ. ಚಿತ್ತರಗಿ ಚಿಜ್ಯೋತಿ, ಮಹಾತಪಸ್ವಿ ವಿಜಯಮಹಾಂತ ಶಿವಯೋಗಿಗಳ ಲಿಂಗಲೀಲಾವಿಲಾಸದ ಬಗ್ಗೆ ಹನ್ನೊಂದನೆಯ ಲೇಖನವಿದೆ.

ದಾಸೋಹದ ಪರಂಪರೆಯಲ್ಲಿ ಕಲಬುರ್ಗಿಯ ಶ್ರೀ ಶರಣಬಸವೇಶ್ವರರು ಬಹಳ ಎದ್ದು ಕಾಣುತ್ತಾರೆ. ಹನ್ನೆರಡನೆಯ ಲೇಖನ ಇವರ ಎತ್ತರ-ಬಿತ್ತರಗಳನ್ನು

ಸುಂದರವಾಗಿ ಚಿತ್ರಿಸುತ್ತದೆ. ವೀರಶೈವರಿಗೆ ತಮ್ಮ ಇಷ್ಟ ದೈವದ ಬಗ್ಗೆ ನಿಷ್ಠೆಯಿಲ್ಲ. ಅಷ್ಟೇ ಅಲ್ಲ, ಸ್ಪಷ್ಟ ಕಲ್ಪನೆಯೂ ಇಲ್ಲ. ಈ ಇಷ್ಟಲಿಂಗ–ಇದು ಶ್ರೇಷ್ಠಲಿಂಗ–ಇದೇ ವೀರಶೈವರ ಪರಮದೈವ–ಎಂಬುದಾಗಿ ಹದಿಮೂರನೆಯ ಲೇಖನದಲ್ಲಿ ಹೇಳುತ್ತಾರೆ. ಲಿಂಗೈಕ್ಯ ಶ್ರೀ ಚನ್ನವೀರ ಶಿವಯೋಗಿಗಳ 'ಯೋಗ ಸಿದ್ಧಾಂತ'ದ ಬಗ್ಗೆ ಒಂದು ಲೇಖನ, ಜ್ಞಾನಗುಮ್ಮಟ ಹಳಕಟ್ಟಿಯವರ ಬಗ್ಗೆ, ಈಶ್ವರ ಸಣಕಲ್ಲ ಅವರ ಕಾವ್ಯ ಧೋರಣೆಯ ಬಗ್ಗೆ, ವೈಜ್ಞಾನಿಕತೆ ಮತ್ತು ಆಧ್ಯಾತ್ಮಿಕತೆ ಬಗ್ಗೆ, ಆಧುನಿಕ ವಚನಗಳಲ್ಲಿ ಮೂಡಿರುವ ಯುಗಧ್ವನಿಯ ಬಗ್ಗೆ, ವಚನ ಸಾಹಿತ್ಯದ ಪಕ್ಷಿನೋಟದ ಬಗ್ಗೆ, ಮಹಾಂತ ಜೋಳಿಗೆಯ ಬಗ್ಗೆ, ಬಸವಣ್ಣನವರ ವಚನಗಳಲ್ಲಿ ಬರುವ ಎರಡು ವಿಭಿನ್ನ ಚಿತ್ರಗಳ ಬಗ್ಗೆ– ಹೀಗೆ ಇಪ್ಪತ್ತೊಂದು ಲೇಖನಗಳ ಅಪೂರ್ವ, ಅಪ್ರತಿಮ, ಸಂಗ್ರಹವಿದು.

ಇಂತಹ ಸಂಗ್ರಹವನ್ನು ಕೊಡಮಾಡಿದ ಶರಣ ಸಾಹಿತಿ ಶ್ರೀ ಬ. ಗಿ. ಯಲ್ಲಟ್ಟಿಯವರ ಸಾಹಿತ್ಯ ಸಾಧನೆಯನ್ನು ಮನಸಾರೆ ಅಭಿನಂದಿಸುತ್ತೇನೆ. ಅವರ ಲಿಂಗ ಹಸ್ತದಿಂದ ಇನ್ನೂ ಇಂತಹ ನೂರಾರು ಸಂಗ್ರಹಗಳು ಮೂಡಿಬರಲೆಂದು ಆಶಿಸುತ್ತೇನೆ.

ಎಲ್ಲರಿಗೂ ಶರಣಾರ್ಥಿಗಳು

— **ಶಿವಕುಮಾರ ಸ್ವಾಮೀಜಿ**

ಶಿವಯೋಗಾಶ್ರಮ,
ಮಡಿಕೇಶಿರೂರ – ಬಿದರಕುಂದಿ.

# ನಿವೇದನೆ

ಬಸವಾದಿ ವಚನಕಾರರ ವಚನಗಳ ಮಥಿತಾರ್ಥವನ್ನರಿತುಕೊಂಡಾಗ ನಮಗೊಂದು ಹೊಸಲೋಕದರ್ಶನವಾಗುವುದು. ನಡೆಗೂ, ನುಡಿಗೂ, ಆಚಾರಕ್ಕೂ ವಿಚಾರಕ್ಕೂ ಸಂದುಭೇದವಿಲ್ಲದ ಬದುಕು ಈ ವಚನಕಾರರದು. "ಅವರ ಸುಖವೆನ್ನ ಸುಖ, ಅವರ ದುಃಖ ವೆನ್ನದುಃಖ"ವೆಂದು ಅವರು ಕೇವಲ ಹೇಳಲಿಲ್ಲ, ಬರೆಯಲಿಲ್ಲ, ಹೇಳಿದಂತೆ ಬದುಕಿದರು, ಬದುಕಿಸಿದರು. ಬದುಕಿನಲ್ಲಿ ಅನುಭವದಿಂದ ಪಡೆದ ಅರಿವು, ಅವರ ವಚನವಾಗಿ ಮೂರ್ತಗೊಂಡವು !

**"ನಡೆಯಲರಿಯದೆ, ನುಡಿಯಲರಿಯದೆ**
**ಲಿಂಗವ ಪೂಜಿಸಿ ಫಲವೇನು ?** ಎಂದು

ತಮ್ಮನ್ನು ತಾವು ಕೇಳಿಕೊಂಡ ಪ್ರಶ್ನೆ ಜಗತ್ತಿಗೆ ಕೇಳಿದ ಪ್ರಶ್ನೆಯಾಗಿದೆ.

"ಅರಿದರೆ ಶರಣ, ಮರೆದರೆ ಮಾನವ" ಎಂಬ ನಿಲವನ್ನು ತಾಳಿದವರು ಶರಣರು. ಮಾನವೀಯತೆಯನ್ನು ಮರೆತು ಅನ್ಯರ ದುಃಖಕ್ಕೆ ಸ್ಪಂದಿಸಲಾರದವರು ಮಾನವರು. ಹಾಗೆ ಸ್ಪಂದಿಸಿ ಮಾನವೀಯತೆಯನ್ನು ತಳೆದವರು ಶರಣರು. ಇಂಥ ಶರಣರ ಬದುಕನ್ನು ಅರಿಯಬೇಕಾದರೆ, ವಚನಗಳನ್ನು ಆಳವಾಗಿ ಅಧ್ಯಯನ ಮಾಡುವುದು ಅಗತ್ಯವಾಗಿದೆ. ಈ ವಚನಗಳು ಹೊಸ ಜನಾಂಗದ ರಚನೆಗೆ ಹಾಡಿದ ಕ್ರಾಂತಿಯ ಗೀತೆಗಳು. ಈ ಕ್ರಾಂತಿಯ ರಚನೆಗಳೇ ಹೊಸ ಸಮಾಜದ ರಚನೆಗೆ ಆಕರಗಳು. ತರತಮವಿಲ್ಲದ ಸಮಾನ ಭೂಮಿಕೆಯ ಮೇಲೆ ಹೊಸಬಗೆಯ ಏಕೋಭಾವದ ಜನಾಂಗವನ್ನು ರೂಪಿಸಿದ ಈ ವಚನಕಾರರು ಮಾನವ ಕುಲದ ಅಭಿನಂದನೆಗೆ ಪಾತ್ರರು.

ಈ ನಿಟ್ಟಿನಲ್ಲಿ ಆಗಾಗ ಬರೆದ ಹಲವಾರು ಲೇಖನಗಳನ್ನೂ ಸಂಗ್ರಹಿಸಿ "ವಚನ ಮುಖದಲ್ಲಿ ಶರಣ ದರ್ಶನ" ಎಂಬ ಗ್ರಂಥವನ್ನು ಸಹೃದಯರ ಮುಂದಿರಿಸಿದ್ದೇನೆ. ಈ ಗ್ರಂಥ ಪ್ರಕಟವಾಗಲು ಪೂಜ್ಯಶ್ರೀ ಮಹಾಂತ ಶಿವಯೋಗಿಗಳೇ ಕಾರಣಕರ್ತರು. ಅವರ ಕರುಣೆ ಅಪಾರ. ಅವರ ಕರುಣೆಯ ಫಲವಾಗಿ ಈ ಮೊದಲು "ಮಹಾ ಮಾನವ" ಗ್ರಂಥ ಬೆಳಕಿಗೆ ಬರುವಂತಾಯಿತು. ಅವರ ಋಣವನ್ನು ಶಬ್ದ ಮುಖ ದಿಂದ ತೀರಿಸಲು ನಾನು ಅಸಮರ್ಥ. ಬಸವ ಕೊಟ್ಟ ಸಾಹಿತ್ಯವನ್ನು ಬಸವನ ಪ್ರತಿ ರೂಪವಾದ ಪೂಜ್ಯ ಅಪ್ಪನವರಿಗೆ ಅರ್ಪಿಸಿ ಧನ್ಯನಾಗುತ್ತೇನೆ. ಅವರಿಗೆ ಅನಂತ ಭಕ್ತಿಯ ನಮನಗಳನ್ನು ಸಲ್ಲಿಸಿ ಕೃತಾರ್ಥನಾಗುತ್ತೇನೆ.

ಈ ಗ್ರಂಥ ಪ್ರಕಟಣೆಯಲ್ಲಿ ನನ್ನ ಬಲಗೈಯಂತೆ ನೆರವು ನೀಡಿದ ಶರಣ ಮನೋಹರ ಮೈದರಗಿ ಅವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ಇನ್ನು ಬಿದರಕುಂದಿಯ ಪೂಜ್ಯ ಶಿವಕುಮಾರ ಸ್ವಾಮಿಗಳು ಈ ಗ್ರಂಥಕ್ಕೆ ಮುನ್ನುಡಿ ಬರೆದು ಕೊಟ್ಟು ನನ್ನನ್ನು ಆಶೀರ್ವದಿಸಿದ್ದಾರೆ. ಅವರಿಗೂ ಭಕ್ತಿಯ ಪ್ರಣಾಮಗಳು. ಇಲ್ಲಿಯ ಹಲವಾರು ಲೇಖನಗಳನ್ನು ಪ್ರಕಟಿಸಿದ 'ಬಸವ ಪಥ' 'ಬಸವ ಬೆಳಗು' ಮೊದಲಾದ ಪತ್ರಿಕೆಗಳ ಸಂಪಾದಕರಿಗೂ ನನ್ನ ಕೃತಜ್ಞತೆಗಳು. ಈ ದಿಶೆಯಲ್ಲಿ ನನಗೆ ಆಗಾಗ ನೆರವು ನೀಡಿದ ಗೆಳೆಯರಾದ ಪ್ರೊ. ಬಿ. ಆರ್. ಪೋಲೀಸಪಾಟೀಲ ಅವರಿಗೂ ಪ್ರೊ. ಸಿದ್ಧಣ್ಣ ಲಂಗೋಟಿ ಅವರಿಗೂ ವಂದನೆಗಳು. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಅಲ್ಲಮ ಮುದ್ರಣಾಲಯದವರಿಗೂ ಉಪಕೃತನಾಗಿದ್ದೇನೆ. ಕನ್ನಡದ ಸಾಹಿತ್ಯಾಸಕ್ತರು, ವಚನಾಭಿಮಾನಿಗಳು ಈ ಗ್ರಂಥವನ್ನೋದಿ ತಮ್ಪುಗಳಿದ್ದರೆ ತಿಳಿಸಿ. ಸರಿಯಿದ್ದರೆ ಒಪ್ಪಿಕೊಂಡು ತಿದ್ದಿಕೊಂಡು ಮುನ್ನಡೆಯುತ್ತೇನೆ.

ತಮ್ಮ ವಿಶ್ವಾಸಿ,
**ಬ. ಗಿ. ಯಲ್ಲಟ್ಟಿ**

"ಬಸವ ನಿಲಯ", ಬನಹಟ್ಟಿ.

# ಪರಿವಿಡಿ

ಮಹಾಂತ ಜೋಳಿಗೆಯ ಶಿವಶಿಲ್ಪಿ



ಪರಮಪೂಜ್ಯ
ಶ್ರೀ ಮ. ನಿ. ಪ್ರ. ಮಹಾಂತ ಶಿವಯೋಗಿಗಳವರು
ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ
ಚಿತ್ತರಗಿ – ಇಲಕಲ್ಲ.

೧.

# ವಚನಮುಖದಲ್ಲಿ ಶರಣ ದರ್ಶನ !

---

ಸಾಹಿತ್ಯ ಜನಜೀವನಕ್ಕೆ ಸ್ಪಂದಿಸಿ ಕಾಲಧ್ವನಿಯಾಗಿ ಮೂಡಿಬರುವಂಥದು. ಹಾಗೆ ಮೂಡಿ ಬರಬೇಕು, ಸಾಹಿತ್ಯದಲ್ಲಿ ವಚನ ಪ್ರಕಾರವೂ ಒಂದು. ಹನ್ನೆರಡನೆಯ ಶತಮಾನದಲ್ಲಿ ಸಮಗ್ರ ಜನಸಮುದಾಯವನ್ನು ಪುನರುಜ್ಜೀವನಗೊಳಿಸಿದ ಕ್ರಾಂತಿಯ ಉಸಿರಾಗಿ ಸ್ಫುರಿಸಿದ್ದು ವಚನಸಾಹಿತ್ಯ. ಹಾಗೆ ಮುಂದೆ ಇದು ಈ ಕ್ರಾಂತಿಗೆ ಪ್ರೇರಕ ಶಕ್ತಿಯಾದದ್ದೂ ಸತ್ಯ, ಬರೆಯಬೇಕೆಂಬ ಛಲದಿಂದ ಹುಟ್ಟಿದ್ದಲ್ಲ ಈ ವಚನ. ಆತ್ಮಮಥನದ ಆಳದಿಂದ ಮೂಡಿ ಬಂದುದಿದು. ಇದ್ದುದನ್ನು ರಸವತ್ತಾಗಿ ವಚನನೇತರ ಸಾಹಿತ್ಯ ಸೆರೆಹಿಡಿದರೆ, ಇದ್ದುದನ್ನು ನಿರ್ವಿಕಾರವಾಗಿ ನಿರಾಳವಾಗಿ ಚಿತ್ರಿಸಿ ಉದಾತ್ತತೆಯ ಶಿಖರಕ್ಕೇರುತ್ತದೆ ವಚನಸಾಹಿತ್ಯ ! ಕಾವ್ಯ ಅನುಭವವನ್ನು ರಸಾನುಭವವನ್ನಾಗಿ ಪವಾಡಗೊಳಿಸಿದರೆ, ವಚನ ಅನುಭವವನ್ನು ಅನುಭಾವವನ್ನಾಗಿ ಪ್ರಸಾದಗೊಳಿಸುತ್ತದೆ. ಇತರ ಸಾಹಿತ್ಯದ ಗಮನ ಇರವಿನತ್ತ ಸಾಗಿದರೆ, ವಚನದ ಗಮನ ಅರಿವಿನತ್ತ ಸಾಗುತ್ತದೆ. ಏಕೆಂದರೆ ಮಾತಿನಿಂದತ್ತತ್ತ ಈ ವಚನ !

ಆತ್ಮಚಾರಿತ್ರ್ಯ, ಆತ್ಮವಿಮರ್ಶೆ, ಆತ್ಮಸಂಸ್ಕಾರ ಇವುಗಳ ಆವಿಷ್ಕಾರಕ್ಕೊಳಗಾಗಿ ಪರಿಷ್ಕಾರಗೊಂಡು ಬಂದ ಆತ್ಮಾನುಭವ ಈ ವಚನ !

**"ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ**
**ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣಿಯ ಮಾಡಿ**
**ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹಯ್ಯಾ !"**

**"ಎನ್ನ ಕಾಯುವ ದಂಡಿಗೆಯ ಮಾಡಯ್ಯ**
**ಎನ್ನ ಶಿರವ ಸೋರೆಯ ಮಾಡಯ್ಯ**
**ಎನ್ನ ನರವ ತಂತಿಯ ಮಾಡಯ್ಯ**
**ಎನ್ನ ಬೆರಳ ಕಡ್ಡಿಯ ಮಾಡಯ್ಯ**
**ಬತ್ತೀಸರಾಗವ ಹಾಡಯ್ಯ**
**ಉರದಲೊತ್ತಿ ಬಾರಿಸು ಕೂಡಲಸಂಗಮದೇವಾ."**

ಹೀಗೆ ಆತ್ಮವಿಮರ್ಶೆಗೊಳಗಾಗಿ ಮೂಡಿಬಂದ ಅನೇಕ ವಚನಗಳನ್ನು ಉದಾಹರಿಸಬಹುದು.

ನಡೆಯಲ್ಲಿ ಹುಟ್ಟಿ ನುಡಿಯಾದುದು ವಚನ. ನುಡಿಯೊಳಗೆ ಲಿಂಗ ಬೆಳಕಾಡಿದರೆ ಅದು ವಚನ. ವಚನವೆಂದರೆ ಬರಿ ಮಾತು ಅಲ್ಲ. ಮಾತು ಲಿಂಗನಡೆಯಲ್ಲಿ ವಚನವಾಗಬಹುದು. ಆದರೆ ಆ ವಚನ ಮತ್ತೆ ಮಾತಾಗದು. ಸ್ವಾತಿಯ ಬಿಂದು ಮುತ್ತಾಗಬಹುದು. ಮತ್ತೆ ಆ ಮುತ್ತು ನೀರಾಗದು. ಪ್ರಾಮಾಣಿಕವಾಗಿ ಬದುಕಿದಂಥ ಬದುಕಿಗೆ ಪ್ರಮಾಣವಾಗಿ ಸ್ಫುರಿಸಿದ್ದು ವಚನ. ಅಂತಃಸಾಕ್ಷಿಗೆ ಒಪ್ಪಿತವಾಗಿ ಒಪ್ಪಾಗಿ ಜೀವನಕ್ಕೆ ಅಪ್ಯಾಯನವಾಗಿ ಮೂಡುವುದುಂಟು ವಚನ !

**"ನುಡಿದರೆ ಮುತ್ತಿನ ಹಾರದಂತಿರಬೇಕು**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು**
**ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು**
**ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು**
**ನುಡಿಯೊಳಗಾಗಿ ನಡೆಯದಿದ್ದರೆ**
**ಕೂಡಲ ಸಂಗಮದೇವನೆಂತೊಲಿವನಯ್ಯ ?"**

ಇದು ವಚನಕ್ಕೆ ಸೂಕ್ತ ವ್ಯಾಖ್ಯೆ !

ಹೀಗೆ ಆಡಿದ ಮಾತು ಊರ್ಧ್ವಮುಖವಾಗಿ ಸಾಗಿ ಲಿಂಗ ಮೆಚ್ಚುವಂತಾದರೆ ಅದು ವಚನ. ವಚನ ಸ್ವಯಂಜ್ಯೋತಿಯ ಪ್ರತೀಕ ! ಸ್ವತಃ ವಚನವಾಗಿ ಬದುಕಿದವರಿಂದ ಹೊಳೆದಿದ್ದು ವಚನ !! ಅರುಹಿನ ನಡೆ ನುಡಿಯಲ್ಲಿ ಲಿಂಗವ ದೇವರ ಕಾಣುವ ಪ್ರಕ್ರಿಯೆಯಿದು ವಚನದ ಆಶಯ.

**"ಲಕ್ಷ ಗಾವುದ ದಾರಿಯು ಹೋಗಿ**
**ಭಕ್ತನು ಭಕ್ತನ ಕಾಂಬುದು ಸದಾಚಾರ**
**ಅಲ್ಲಿ ಕೂಡಿ ದಾಸೋಹವ ಮಾಡಿದರೆ**
**ಕೂಡಿಕೊಂಡಿಪ್ಪನು ಕೂಡಲ ಸಂಗಮದೇವ !"**

ಧಾರ್ಮಿಕ ರಂಗದಲ್ಲಿ ಸೇವೆ ಭಕ್ತಿಯೆನಿಸಿ ಸೇವೆಗೈಯುತ ಭಕ್ತನೆನಿಸುತ್ತಾನೆ. ಸಾಮಾಜಿಕ ರಂಗದಲ್ಲಿ ಸೇವೆ ನಾಗರಿಕನ ಕರ್ತವ್ಯವೆನಿಸಿ, ಸೇವಿಸುವಾತ ನಾಗರಿಕನೆನಿಸುತ್ತಾನೆ. ಎರಡೂ ಕ್ಷೇತ್ರಗಳಿಗೂ ಅನ್ವಯಿಸುವಂಥದು ಈ ವಚನ.

ಸೇವೆಯಲ್ಲಿಯೆ ಸಾರ್ಥಕ ಜೀವನವಿದೆ. ಸೇವೆಗಾಗಿ ಬೇಕಾದಷ್ಟು ದೂರ ಹೋಗಬಹುದು. ಅನನ್ಯಭಾವದಿಂದ ಒಬ್ಬರು ಇನ್ನೊಬ್ಬರನ್ನು ಕಾಣುವುದೊಂದು ಸದಾಚಾರ. ಅಲ್ಲಿ ಜೀವನದ ಅನೇಕ ಮುಖಗಳನ್ನು ಕುರಿತು ಚರ್ವಿತ ಚರ್ವಣ ಮಾಡುವುದು ಸೇವೆಯ ಒಂದು ಅಂಗ. ನಿಮ್ಮ ಅನುಭವವನ್ನು ನಾನು, ನನ್ನ ಅನುಭವವನ್ನು ನೀವು ಆಲಿಸುವುದು, ಒಪ್ಪಿತವಾದರೆ ಸ್ವೀಕರಿಸುವುದು. ಕೊಡುಕೊಳ್ಳುವ ಹದುಳವೆ ದಾಸೋಹ. ಈ ಕೊಡುಕೊಳ್ಳುವ ದಾಸೋಹದಲ್ಲಿಯೆ ಮಾನವ

ಧರ್ಮವಿದೆ. ಮಹಾಘನ ಸಂಗಮದೇವನಿದ್ದಾನೆ. ದಾಸೋಹವೆಂದರೆ ನಮ್ಮ ನಮ್ಮಲ್ಲಿ ಹಂಚಿಕೊಳ್ಳುವುದು. ಕರ್ತಾರನು ನಮಗಿತ್ತ ಶಕ್ತಿಯಿಂದ ಸಾಧನೆಯಿಂದ ಸಕಲ ಜೀವ ಕುಲದ ಸೇವೆ ಮಾಡುವುದು ! ಇದು ದಾನವಲ್ಲ. ಮಾಡಿದೆನೆಂಬ ಮಮಕಾರವಿಲ್ಲ ಇಲ್ಲಿ. ಉಪಕಾರ ಮನೋಧರ್ಮವೂ ಇಲ್ಲಿಲ್ಲ. ಮಾಡುವವರಲ್ಲಿ ಮಾಡಿಸಿಕೊಂಬವರಲ್ಲಿ ಸಂದು ಭೇದವಿಲ್ಲ !!

ದಾಸೋಹದ ಆಶಯ ಪರಿವರ್ತನ, ಪ್ರಸಾದೀಕರಣ.

**"ಉಂಬ ಬಟ್ಟಲು ಬೇರೆ ಕಂಚಲ್ಲ ನೋಡುವ ದರ್ಪಣ ಬೇರೆ ಕಂಚಲ್ಲ.**
**ಭಾಂಡ ಒಂದೆ ಭಾಜನ ಒಂದೆ. ಬೆಳಗೆ ಕನ್ನಡಿ ಎನಿಸಿತ್ತಯ್ಯಾ!**
**ಅರಿದರೆ ಶರಣ ಮರೆದರೆ ಮಾನವ**
**ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ."**

ಕಂಚನ್ನು ಸಂಸ್ಕಾರಕ್ಕೊಳಪಡಿಸಿದರೆ, ಉಣ್ಣುವ ಬಟ್ಟಲಾಗುತ್ತದೆ, ನೋಡುವ ಕನ್ನಡಿಯಾಗುತ್ತದೆ. ಅದರಂತೆ ಮನಸ್ಸನ್ನು ಸಂಸ್ಕಾರಕ್ಕೊಳಪಡಿಸಿದರೆ ಅಥವಾ ಬೆಳಗಿದರೆ ಉಣ್ಣುವ [ಊಟದ ಬಟ್ಟಲಲ್ಲ] ಪ್ರಸಾದ ಬಟ್ಟಲಾಗುತ್ತದೆ, ಆತ್ಮ ದರ್ಶನದ ಕನ್ನಡಿಯಾಗುತ್ತದೆ. ಅಂತಿಮ ಫಲಶ್ರುತಿ ಅರಿವು. ಅರಿತು ಬಾಳಿದರೆ ಆತ ಶರಣ, ಮರೆತು ಬಾಳಿದರೆ ಆತ ಬರೀ ಮನುಷ್ಯ.

ಇಲ್ಲಿ ಕಂಚು ಪ್ರಕೃತಿ, ಬಟ್ಟಲು-ಕನ್ನಡಿ-ಪ್ರಸಾದ-ಅಂದರೆ ಪ್ರಕೃತಿ ಭಾವದಿಂದ ಪ್ರಸಾದಭಾವಕ್ಕೆ ಪರಿವರ್ತನಗೊಳಿಸುವುದೇ ವಚನದ [ವಚನಕಾರರ] ಆಶಯವಾಗಿದೆ !

**ಸಾಧನೆ ಸಿದ್ಧಿ :**

ಆಶಯ ಆಚಾರವಾಗಬೇಕೆಂಬುದೇ ವಚನದ ಉದ್ದೇಶ.

**"ನಡೆಯಲರಿಯದೆ ನುಡಿಯಲರಿಯದೆ ಲಿಂಗವ ಪೂಜಿಸಿ ಫಲವೇನು ?**
**ಅವರ ಸುಖವೆನ್ನಸುಖ ಅವರ ದುಃಖವೆನ್ನದುಃಖ**
**ಕೂಡಲಸಂಗನ ಶರಣರ ಮನ ನೊಂದರೆ ಆನು ಬೆಂದೆನಯ್ಯ !"**
**ಅರಿವುಳ್ಳ ನಡೆ ನುಡಿಯಲ್ಲಿ ಲಿಂಗವಿದೆ. ಅರಿವಿಲ್ಲದೆ**
**ಮಾಡಿದ ಪೂಜೆ ಪೂಜೆಯಲ್ಲ, ಪೂಜಿ [ಸೊನ್ನೆ] !**
**ಅವರ ಸುಖವೆ ತನ್ನ ಸುಖ ಅವರ ದುಃಖವೆ ತನ್ನ ದುಃಖ**
**ಇದನ್ನು ತಿಳಿದು ನಡೆಯುವುದೆ ಅರಿವು, ಅರಿವೇ ಒಂದು ಪೂಜೆ!**

ಅವರು ಎಂದರೆ, ಬಸವಣ್ಣನ ದೃಷ್ಟಿಯಲ್ಲಿ ಸಮುದಾಯ. ಈಗ ನಾವು ಹೇಳುವ ಸಮುದಾಯಪ್ರಜ್ಞೆಯನ್ನೂ ಅಂದು ವಚನಕಾರರು ಗಣಾಚಾರವೆಂದಿ

ದ್ದಾರೆ. ಇಲ್ಲಿ ಎಲ್ಲರನ್ನೂ ಶಿವಭಾವದಿಂದ ಕಾಣುವ ಶಿವಾಚಾರವಿದೆ. ಏಕೋಭಾವ ದಿಂದ ಅಪ್ಪಿಕೊಳ್ಳುವ ಗಣಾಚಾರವಿದೆ.

ಅದಕ್ಕಾಗಿ ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ ಅನ್ನದೊಳಗೊಂದಗುಳ–ಹೆಚ್ಚಿನದೇನನ್ನೂ ಬಯಸಲಿಲ್ಲ ಬಸವಣ್ಣ. ನಾವು ಹೆಚ್ಚು ಬಳಸಿದರೆ ಸಕಲ ಜೀವಕುಲಕ್ಕೆ ಕೊರತೆಯಾಗುತ್ತದೆ. ಈ ಜಂಗಮ ಭಾವದಿಂದಲೇ ಬಸವಣ್ಣ ಜಂಗಮವಾಗುತ್ತಾನೆ. ಈ ರೀತಿ ವಚನ ಬಸವಣ್ಣನನ್ನು ರೂಪಿಸಿದ್ದು, ಬಸವಣ್ಣ [ಗಣಾಚಾರ ಪ್ರಜ್ಞೆಯಿಂದ] ವಚನವನ್ನು ಸೃಷ್ಟಿಸಿದ್ದು !

ಶರಣರು ಬದುಕಿದ್ದು ಬರೆದದ್ದು ಅನುಭವ ಮಂಟಪದ ವಿಮರ್ಶೆಗೆ ಒಳಗಾಗಬೇಕಾದುದೊಂದು ವೈಶಿಷ್ಟ್ಯ. ಅಲ್ಲಿ ಬರಲಾರದ ಜನನಿಲ್ಲ. ಬರೆಯಲಾರದ ಜೀವಿಯಿಲ್ಲ, ಹೆಣ್ಣು ಗಂಡು, ಅಜ್ಞ ಪ್ರಾಜ್ಞ, ವರ್ಗ ವರ್ಣ ಯಾವ–ಭೇದಕ್ಕೂ ಅಲ್ಲಿ ಅವಕಾಶವಿಲ್ಲ. ಮುಕ್ತ ಅವಕಾಶ, ಮುಕ್ತ ಅಭಿವ್ಯಕ್ತಿ. ಅನುಭವ ಮಂಟಪದ ಒಪ್ಪಿಗೆಯ ಮುದ್ರೆ ಬಿದ್ದಮೇಲೆ ವಚನವಾಗಿ ವಿಶಿಷ್ಟ ರೂಪತಾಳಿ ಬರುವಂತಾದುದೊಂದು ವಿಶೇಷತೆ !

ವಚನಕಾರರು ಚಿಂತನ ಮಾಡದ ವಿಷಯವಿಲ್ಲ, ಪದವಿರಿಸದ ಕ್ಷೇತ್ರವಿಲ್ಲ. ಬಾಯಿಲ್ಲದವರಿಗೆ ಬಾಯಿಕೊಟ್ಟರು. ಉಸಿರಿಲ್ಲದವರಿಗೆ ಉಸಿರು ಕೊಟ್ಟರು. ಸತ್ತಂತೆ ಬದುಕಿದವರಿಗೆ ಹೊಸ ಬದುಕು ಕೊಟ್ಟರು. ಇನ್ನೊಂದು ವಿಶೇಷ ಸಾಧನೆಯೆಂದರೆ ಭಾರತದ ಬೇರೆ ಬೇರೆ ನಾಡಿನಿಂದ ಬಂದವರು, ಕನ್ನಡವರಿಯದವರು ಅನುಭವಪರವಾದ ವಚನಗಳನ್ನು ರಚಿಸಿದ್ದನ್ನು ನೋಡಿದರೆ ಅಲ್ಲೊಂದು ಕಮ್ಮಟ ಮಾದರಿಯಲ್ಲಿ ಭಾಷಾಜ್ಞಾನವೀಯುವ ವಿದ್ಯಾಪೀಠವೊಂದರ ವ್ಯವಸ್ಥೆ ಇರಲೇಬೇಕು.

ಬರಿ ಮಾತುಗಾರಿಕೆಯಲ್ಲಿ ಹೊತ್ತುಗಳೆಯುವ ಬದುಕು ಶರಣರದಲ್ಲ. ಕಾಯ ಕಷ್ಟದಿಂದ ದುಡಿಯುವುದು, ದುಡಿದ ಫಲವನ್ನು ತನಗೂ ಸಮಾಜಕ್ಕೂ (ಜಂಗಮಕ್ಕೂ) ವಿನಿಯೋಗಿಸುವುದು.

೧. ಕಾಯಕವಳಿದ ಠಾವಿನಲ್ಲಿ ಜೀವನದ ಎಡೆಯಾಟವುಂಟೆ ?

೨. ಕೃಷಿಯ ಮಾಡದೆ ಹಸಿವು ಹರಿವ ಪರಿಯಿನ್ನೆಂತೊ ?

ಎಂದು ತಮ್ಮನ್ನೂ ತಾವು ಪ್ರಶ್ನಿಸಿಕೊಳ್ಳುತ್ತಾರೆ. ಜಗತ್ತಿಗೂ ಪ್ರಶ್ನೆ ಮಾಡುತ್ತಾರೆ. ಕೊಟ್ಟ ಕುದುರೆಯನ್ನೇರಿ ಗುರಿ ಮುಟ್ಟಿದ ಧೀರರು ಶರಣರು. ಈ ಧೀರತೆ ದೊರೆತದ್ದು ವಚನಕ್ರಾಂತಿಯಿಂದ !

ಸತ್ಯಶುದ್ಧವಾಗಿ ದುಡಿದದ್ದು ಕಾಯಕವಾದರೆ, ದುಡಿದ ಫಲವನ್ನು ತನಗುಚಿತವಾದಷ್ಟನ್ನು ಇರಿಸಿಕೊಂಡು, ಉಳಿದದ್ದನ್ನು ಜೀವಕುಲ ಜಂಗಮಕ್ಕೆ ಅರ್ಪಿಸಿದ್ದು ದಾಸೋಹವಾಯಿತು, ಹೀಗಾಗಿ ಕಸುಬು ಕೈಗಾರಿಕೆಗಳಿಗೊಂದು ಸ್ಥಾನ

ಬಂತು, ಎಲ್ಲ ಕಸುಬುದಾರರಿಗೊಂದು ಸ್ಥಾನಮಾನ ಬಂತು ! ಹೀಗೆ ಔದ್ಯೋಗಿಕ ಕ್ರಾಂತಿಯಾಗಿ ವ್ಯಕ್ತಿ ತನ್ನ ಕಾಲ ಮೇಲೆ ತಾನು ನಿಲ್ಲುವಂತಾದರೆ, ಸಮಷ್ಟಿ(ಸಮಾಜ) ಆರ್ಥಿಕ ವೃದ್ಧಿಯಿಂದ ಸುಭದ್ರವಾಗುವಂತಾಯಿತು. ರಾಜ್ಯ ಸುಖೀರಾಜ್ಯವಾಗಿ ಪರಿಣಮಿಸುವಂತಾಯಿತು.

ಎಲ್ಲರಲ್ಲಿ ಶಿವಚೇತನ ಕಾಣುವ ಲಿಂಗಾಚಾರದಿಂದ ಸಮಾನತೆ, ಎಲ್ಲರನ್ನು ಶಿವ ಭಾವದಿಂದ ನೋಡುವ ಶಿವಾಚಾರದಿಂದ ಸಹಯೋಗ, ಎಲ್ಲರನ್ನೂ ವಿಶ್ವಕುಟುಂಬ ವಾಗಿ ಪರಿಗಣಿಸುವ ಗಣಾಚಾರದಿಂದ ಭಾವೈಕ್ಯತೆ, ಕಿಂಕರಭಾವದಿಂದ ಸೇವೆ ಮಾಡುವ, ಭೃತ್ಯಾಚಾರದಿಂದ ಸದುವಿನಯ ಮೊದಲಾದ ಮನೋಧರ್ಮ ನೀತಿ ಯಿಂದ ಸಾಂಸ್ಕೃತಿಕ ಕ್ರಾಂತಿ ಹೊಳೆಪಿಟ್ಟಂತಾಯಿತು. ಜನತೆಯ ಮಾತಿನಲ್ಲಿಯೆ ಜನತೆಗೊಂದು ಧ್ವನಿ ನೀಡಿ ಜಾಗೃತಗೊಳಿಸಿದ ವಚನ ಸೃಷ್ಟಿಯಿಂದಾಗಿ ಕನ್ನಡ ಸಾಹಿತ್ಯ ಲೋಕದಲ್ಲೊಂದು ಸಾಹಿತ್ಯಕ ಕ್ರಾಂತಿ ಮೊಳಗುವಂತಾಯಿತು.

**ಸರ್ವಕಾಲಕ್ಕೂ ಪ್ರಸ್ತುತ :**

**"ಗುರುವಚನವಲ್ಲದೆ ಲಿಂಗವೆಂದೆನಿಸದು**
**ಗುರುವಚನವಲ್ಲದೆ ನಿತ್ಯವೆಂದೆನಿಸದು**
**ಗುರುವಚನವಲ್ಲದೆ ನೇಮವೆಂದೆನಿಸದು**
**ತಲೆಯಿಲ್ಲದ ಅಟ್ಟೆಗೆ ಪಟ್ಟವ ಕಟ್ಟುವ**
**ಉಭಯಭ್ರಷ್ಟರ ಮೆಚ್ಚುವನೆ ಕೂಡಲಸಂಗಮದೇವ ?"**

ಈ ವಚನವನ್ನು ಒಳಹೊಕ್ಕು ನೋಡಿದರೆ, ಅಂದು ಪ್ರಸ್ತುತವಾದ ವಚನ ಇಂದೂ ಸಹ ಪ್ರಸ್ತುತವಾಗಿದೆ ಎಂಬುದು ಮನದಟ್ಟಾಗುವುದು. ಇಲ್ಲಿ ವಚನಪದದ ಅರ್ಥವ್ಯಾಪ್ತಿಯನ್ನು ಗಮನಿಸಬೇಕು. ವಚನವೆಂದರೆ ಬೋಧೆ, ಅರಿವು, ಮಾರ್ಗ ದರ್ಶನ. ಈ ಅರಿವುಳ್ಳವನೇ ಗುರು, ಗುರುಬೋಧೆಯಿಂದ ಪರಿಶುದ್ಧವಾಗ ಬಲ್ಲಾತನೇ ಶಿಷ್ಯ. ಈ ಇಬ್ಬರ ಮೇಳವಿದ್ದರೆ ಲಿಂಗ–ನಿತ್ಯ–ನೇಮ ಎಲ್ಲವೂ ಉಂಟು. ಈ ಮೇಳ ತಾಳಗೆಟ್ಟರೆ ತಲೆಯಿಲ್ಲದ ಅಟ್ಟೆಗೆ ಪಟ್ಟಕಟ್ಟಿದಂತೆ. ತಲೆಯಿಲ್ಲದ ಅಟ್ಟೆಗೆ [ಮುಂಡಕ್ಕೆ] ಪಟ್ಟ ಕಟ್ಟುವುದೂ ಒಂದೆ, ಹೆಣಕ್ಕೆ ಪಟ್ಟಕಟ್ಟುವುದೂ ಒಂದೆ. ತಲೆ ಯೆಂದರೆ ಪರಿಜ್ಞಾನ, ಪಕ್ವತೆ– ಪರಿಜ್ಞಾನವಿಲ್ಲದ ಗುರು, ಬುದ್ಧಿಯಿರದ ಶಿಷ್ಯ– ಇವರಿಬ್ಬರಿಂದ ಯಾರಿಗೆ ಪ್ರಯೋಜನ ? ಈ ರೀತಿ, ತಲೆಯಿಲ್ಲದ ಅಟ್ಟೆಗೆ ಪಟ್ಟ ಕಟ್ಟುವ ಅಟ್ಟಹಾಸವನ್ನು ಇಂದು ಸಾಮಾಜಿಕ, ರಾಜಕೀಯ, ಸಾಹಿತ್ಯಿಕ, ಧಾರ್ಮಿಕ ಮುಂತಾದ ಕ್ಷೇತ್ರಗಳಲ್ಲಿ ನೋಡಬಹುದು. ಪರಸ್ಪರ ಗುಣಗಾನ ಪ್ರವೀಣರಾದ ಇವರು ಆಚಾರಹೀನರಾದುದರಿಂದ ಉಭಯಭ್ರಷ್ಟರು. ಈ ಉಭಯಭ್ರಷ್ಟರನ್ನು ದೇವರು ಮೆಚ್ಚುವುದಿಲ್ಲ, ಬಲ್ಲವರೂ ಮೆಚ್ಚುವುದಿಲ್ಲ. ಪರಿಣಾಮವೆಂದರೆ ಇಂದು ನಿತ್ಯ ಹೊಗೆಯಾಡುತ್ತಿರುವ ಅಂತಃಕಲಹ, ಕೋಲಾಹಲ, ಅಸಮಾಧಾನ, ಅಶಾಂತಿ

ಹೀಗೆ ವಚನಕಾರರ ವಚನ, ಸರ್ವಕಾಲಕ್ಕೂ ಪ್ರಸ್ತುತವಾಗಿ ಕತ್ತಲೆಗೆ ಬೆಳಕನ್ನು ನೀಡುವಂಥದು. ಇಂಥ ಅನೇಕ ವಚನಗಳನ್ನು ಉದಾಹರಿಸಬಹುದು. ಹೀಗೆ ಎಲ್ಲ ವಿಷಯಗಳಿಗೂ ಎಲ್ಲರಿಗೂ ಶ್ರುತಿಯಾಗಿ, ಜೀವನಕ್ಕೆ ಗತಿಯಾಗಿ ಇಂದಿನ ಬಾಳಿನ ಧ್ವನಿಯಾಗಿ ಜೀವಂತವಾಗಿದೆ !

ವಚನ ಬರಿ ಬುದ್ಧಿಯ ಕಸರತ್ತಲ್ಲ! ಅನುಭಾವ ಪಡೆದ ಅಮೃತಬಿಂದು. ವಚನಸಾಹಿತ್ಯದ ಗುರಿ ಅಸ್ತಿ, ಸ್ವಸ್ತಿ, ಶಾಂತಿ. ಎಲ್ಲರೂ ಸುಖದಿಂದ ಬದುಕಬೇಕು, ಎಲ್ಲರಿಗೂ ಒಳ್ಳಿತಾಗಬೇಕು. ಒಟ್ಟಾರೆ, ವಚನದ ತಾಯಿಬೇರು ಸತ್ಯಶುದ್ಧ ಆಚಾರ, ವಚನದ ನಿಷ್ಪತ್ತಿಫಲ ಸಕಲಜೀವಕುಲದ ಕಲ್ಯಾಣ !!!

ಹನ್ನೆರಡನೆಯ ಶತಮಾನದಲ್ಲಿ ಪ್ರಾರಂಭವಾದ ಸಮಗ್ರಕ್ರಾಂತಿಯ ಮುಖವಾಣಿಯಾದ ವಚನಸೃಷ್ಟಿ ಯಾವುದೋ ಒಂದು ಮುಖದಲ್ಲಿ ಮುಂದುವರಿದು, ಇಂದಿಗೂ ಬಹುಮುಖವಾಗಿ ಬೀಸುಬಿಟ್ಟು ಬೆಳೆಯುತ್ತಿರುವ ಐತಿಹಾಸಿಕ ಸಂಗತಿ ಹೆಮ್ಮೆಪಡುವಂಥದಾಗಿದೆ. ಸುಮಾರು ಇಪ್ಪತ್ತೈದು ಸಾವಿರಕ್ಕೂ ಮೇಲ್ಪಟ್ಟು ವಚನಗಳು ೨೦ನೆಯ ಶತಮಾನದಲ್ಲಿ ಪ್ರಕಟವಾಗಿವೆಯೆಂದು ಮತ್ತು ನೂರಕ್ಕೂ ಮೇಲ್ಪಟ್ಟು ವಚನಕಾರರಿರುವರೆಂದೂ ತಿಳಿದು ಬರುತ್ತದೆ. ಪುರಾತನರ ಅಂದರೆ ಬಸವಾದಿ ಶರಣರ ವಚನಗಳಲ್ಲಿ ಆಚಾರ ನಿಷ್ಠೆ ಇರುವುದು ಮುಖ್ಯ ಅಂಶವಾದರೆ, ಇಂದಿನವರ ವಚನಗಳಲ್ಲಿ ವೈಚಾರಿಕನಿಷ್ಠೆಗೆ ಪ್ರಾಶಸ್ತ್ಯವಿರುವುದು ಮುಖ್ಯ ಲಕ್ಷಣವಾಗಿದೆ. ಕಾಲ ಹೇಗೊ, ಅದರ ಉಸಿರಾದ ಸಾಹಿತ್ಯವೂ ಹಾಗೆಯೇ ! ಈ ಮಾತು ವಚನಸಾಹಿತ್ಯಕ್ಕೂ ಅನ್ವಯಿಸುತ್ತದೆ.

**"ಅಣುರೇಣು ಮಧ್ಯದ ಪ್ರಣವದಾಧಾರ**
**ಭುವನಾಧೀಶನೊಬ್ಬನೆಯಯ್ಯ**
**ಇದೆ ಪರಿಪೂರ್ಣವೆಂದೆನ್ನದನ್ಯ ದೈವವ ಸ್ಮರಿಸುವ**
**ಭವಿಯನೆಂತು ಭಕ್ತನೆಂಬೆನ್ನೈ ರಾಮನಾಥ ?**
**ಅರ್ಥವುಂಟೆಂದು ಅಹಂಕರಿಸಿ ಮಾಡುವನ ಭಕ್ತಿ**
**ತೊತ್ತಿನ ಕೂಟ, ತೊರೆಯನ ಮೇಳದಂತೆ,**
**ತನು–ಮನ–ಧನದಲ್ಲಿ ವಂಚನೆಯುಳ್ಳ**
**ಪ್ರಪಂಚಿಯ ಮನೆಯ ಕೂಳ**
**ಶುನಕನ ಬಾಯ ಎಲುವ ಪ್ರತಿಶುನಕ ತಿಂದಂತೆ ಕಾಣಾ ರಾಮನಾಥ"**

**— ಜೇಡರ ದಾಸಿಮಯ್ಯ**

ಯಾರು ನಿಜ ಶರಣರು, ಯಾರು ಅಲ್ಲ ಎಂಬುದಕ್ಕೆ ಅವರು ಬದುಕಿದಂಥ ಚಾರಿತ್ರ್ಯಶುದ್ಧಿಯೆ ಪ್ರಮಾಣ. ಈ ಚಾರಿತ್ರ್ಯಶುದ್ಧಿಯ ಪ್ರಮಾಣವೆ ವಚನವಾದು

ದುಂಟು. ವಚನ ವ್ಯಕ್ತಿಯ ಪ್ರಮಾಣಿಕತೆಗೆ ಒರೆಗಲ್ಲು ! ಹೀಗಾಗಿ ಅವರು ರಚಿಸಿದ ವಚನವೆ ಶರಣತ್ವಕ್ಕೆ ನಿಜ ಮೌಲ್ಯಮಾಪನ ಅಥವಾ ಅವರ ಬಗೆಗೆ ಅಲ್ಲಮ ಪ್ರಭುವಿನಂಥ ನಿಜಜ್ಞಾನಿಗಳ ವಚನ ಉಲ್ಲೇಖವೆ ಪ್ರಮಾಣ !

ಅದು ಬಿಟ್ಟು ಕುಚೋದ್ಯತನದಿಂದ ಶರಣರ ಶರಣತ್ವಕ್ಕೆ ಇಲ್ಲದ ಅಪಾರ್ಥ ಕಲ್ಪಿಸಿ, ಏನೇನೋ ಬರೆಯುವ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವೆಂದು ಆತ್ಮ ಸಮರ್ಥನೆ ಮಾಡಿಕೊಳ್ಳುವವರೂ ಉಂಟು. ಇಂಥವರು ಶರಣರ ಶರಣತ್ವಕ್ಕೆ ಮಸಿ ಒಳಿದರೆ, ಅವರ ಹೊರಮೈ ಕಪ್ಪಾಗಬಹುದಲ್ಲದೆ ಒಳಮೈ ಕಪ್ಪಾಗದು ! ಆದ್ದರಿಂದ, ವಚನಕ್ಕೆ ಅಪಾರ ಅರ್ಥವುಂಟು, ಆತ್ಮಸಂಸ್ಕಾರಕ್ಕೆ ಒಳಗಾಗಿ ಮಾತು ವಚನ ವಾದುದುಂಟು. 'ವಚನ' ಸತ್ವಭರಿತವಾದುದು, ತತ್ತ್ವಪೂರ್ಣವಾದುದು. ಅಂದ ಮೇಲೆ, ಶರಣರ ಶರಣತ್ವವನ್ನು ವಚನಮುಖದಲ್ಲಿ ಕಾಣಬೇಕಲ್ಲದೆ, ಹೊರಗಣ ಲಾಂಛನದಿಂದಲ್ಲ. ಒಟ್ಟಂದದಲ್ಲಿ ವಚನಮುಖದಲ್ಲಿ ಶರಣ ದರ್ಶನವು ಉಂಟು !!

## ೨

# ಬಸವಣ್ಣನವರ ವಚನಗಳ ವಿಶೇಷತೆ :
# ಚಿರಂತನ ಪರಿಣಾಮ !

---

ಅನುಭಾವಿಗಳ ಅನುಭವ ಪದಗಳಾಗಲಿ ದಾಸರ ಹಾಡು ಕೀರ್ತನೆಗಳಾಗಲಿ, ಶರಣರ ವಚನಗಳಾಗಲಿ- ನಮ್ಮ ಜೀವನದಲ್ಲಿ ಒಂದು ದಾರಿ ಕಾಣುವುದಕ್ಕಲ್ಲದೆ ಸುಖದುಃಖದಿಂದ ಪಲಾಯನ ಮಾಡುವುದಕ್ಕಲ್ಲ. ಕಷ್ಟ-ಕಾರ್ಪಣ್ಯಗಳಿಗೆ ಅಂಜಿ ಜೀವನವನ್ನು ಬಿಸಾಕುವುದಕ್ಕಲ್ಲ; ಬಂದುದನ್ನು ಪ್ರಸಾದೀಕರಿಸಿ ಸ್ವೀಕರಿಸುವುದಕ್ಕೆ !

ಈ ದೃಷ್ಟಿಯಿಂದ ಬಸವಾದಿ ಪ್ರಮಥರ ವಚನಗಳ ಅಧ್ಯಯನ ಅನುಭಾವ ಗೋಷ್ಠಿ ನಡೆಯಬೇಕಾಗಿದೆ. ಇಂದಿನ ನಮ್ಮ ಸಾಂಸಾರಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ನಡೆದಂಥ ನಿತ್ಯವೂ ನಡೆಯುತ್ತಿರುವ ವಿಪರ್ಯಾಸಗಳಿಗೆ ಶಸ್ತ್ರಕ್ರಿಯೆ ಮಾಡಬಲ್ಲ ನೈಪುಣ್ಯವೆಂಬುದು ಈ ವಚನಗಳಲ್ಲಿ ಕಂಡುಬರುವುದೊ ಹೇಗೆ ? ಇಂದಿನ ಕಲಹ, ಕೋಲಾಹಲ, ಅಶಾಂತಿಗೆ ಒಂದು ಶಾಂತಿ ಮಂತ್ರ ಅಲ್ಲಿರುವುದುಂಟೆ? ಆ ನಿಟ್ಟಿನಲ್ಲಿ ನಾವಿಂದು ಅಧ್ಯಯನ ಮಾಡುವುದು ಅಗತ್ಯವಾಗಿದೆ. ಯಾರೂ ಮಾಡಿಲ್ಲವೆಂದಲ್ಲ, ಅದು ಇನ್ನೂ ಮುಂದುವರಿಯಬೇಕಾಗಿದೆ.

ಅಂಥ ಶಸ್ತ್ರಕ್ರಿಯೆಯನ್ನು ಮಾಡಿ, ಯಶಸ್ಸು ಸಂಪಾದಿಸಿ ಆ ವಿದ್ಯೆಯನ್ನು ಮಾನವ ಕುಲಕ್ಕೆ ಬಿಟ್ಟುಹೋದವರೆಂದರೆ ಬಸವಣ್ಣನವರು. ಬಸವಣ್ಣನವರು ಈ ವಿದ್ಯೆಯನ್ನು ಹೇಗೆ ಕರಗತ ಮಾಡಿಕೊಂಡಿರಬಹುದು ? ಭಕ್ತಿಮಾರ್ಗದಿಂದ ಭಕ್ತಿಯನ್ನು (ಸೇವೆಯನ್ನು) ಜಂಗಮಭಾವಕ್ಕೆ ವಿಸ್ತರಿಸಿರುವುದರಿಂದ ಅಂದರೆ ಜೀವ ಕುಲ ವಿಸ್ತಾರದ ಸೇವೆಗಾಗಿ ಭಕ್ತಿಯನ್ನು ದುಡಿಸಿಕೊಳ್ಳಲು ಸಮರ್ಥರಾದುದರಿಂದ ಬಸವಣ್ಣನವರು ವಿವಿಧ ವರ್ಗದ ಜನರೊಂದಿಗೆ ಸಂಪರ್ಕವಿರಿಸಿಕೊಂಡವರು. ಅರಮನೆ ಯವರನ್ನು ಅರಿತಂತೆ ಕಿರುಮನೆಯವರನ್ನೂ ಅರಿತುಕೊಂಡವರು. ಆನೆಯನೇರಿ ಕೊಂಡು ಹೋಗಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳದವರನ್ನು ಕಂಡು ಮರುಕಪಟ್ಟವರು. ಕುದುರೆ ಸತ್ತಿಗೆಯವರ ಕಂಡು ಹೊರಳಿ ಬಿದ್ದು ಕಾಲು ಹಿಡಿಯುವವರ ಕಂಡು ಜಿಗುಪ್ಸೆಪಟ್ಟವರು. ತುಳಿತಕ್ಕೊಳಗಾದವರ ಚಿತ್ರಹಿಂಸೆ ಕಂಡು ಅತ್ತುಕರೆದವರು. ಕಂಬನಿಯೊರಿಸಿ ಎತ್ತಿಕೊಂಡವರು, ಮಂತ್ರಿಯಾಗಿ ರಾಜಕೀಯದಲ್ಲಿಯ ಕಪಟ ನಾಟಕ ವನ್ನು ನೋಡಿ ಎಚ್ಚರಗೊಂಡವರು. ಹೀಗೆ ಬಸವಣ್ಣನವರ ಅನುಭವ- ಎಲ್ಲ ಪ್ರಕಾರದ ಜೀವಿಗಳಿಗೆ ಸ್ಪಂದಿಸಿ ಮೂಡಿ ಬಂದುದಾಗಿದೆ. ಈ ಅನುಭವ- ಅವರ

ಉದಾತ್ತೀಕರಣ ಧೋರಣೆ ಹಾಗು ಮಾನವೀಯ ಆಚರಣೆಯಿಂದಾಗಿ ಅನುಭಾವ ವಾಗಿದೆ ! ಆ ಅನುಭಾವ ಅವರ ವಚನಗಳಲ್ಲಿ ಅಭಿವ್ಯಕ್ತವಾಗಿದೆ. ಅಂಥ ಅನುಭಾವ ದಿಂದ ನಾವು ಕತ್ತಲೆಗೆ ಬೆಳಕನ್ನು ಹಿಡಿಯಬಹುದಾಗಿದೆ !

ವೀರಶೈವ ಸಮಯಾಚಾರಕ್ಕೆ ಸಂವಿಧಾನವಾಗಿರುವಂಥ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ–ಇವುಗಳ ಬಗೆಗೆ ಎಷ್ಟು ಚಿಂತನ ಮಂಥನ ಮಾಡಿದರೂ ಕಡಿಮೆಯೆ. ಜೀವಾತ್ಮ ಪರಮಾತ್ಮನಾಗುವಲ್ಲಿ ಆರೋಹಣಕ್ಕಾಗಿ ಇರುವ ಸೋಪಾನ ಗಳು. ಆತ್ಮೋನ್ನತಿ ಹಾಗು ಲೋಕೋನ್ನತಿ ಸಾಧಿಸುವಲ್ಲಿ ಬಸವಣ್ಣನಂಥವರಿಗಿವು ದಿಕ್‌ಸೂಚಿ ಸೂತ್ರಗಳು. ಆದರೆ ಬಸವಣ್ಣ ಆರೋಹಿಸಿದ ಎತ್ತರವನ್ನು ನೆನೆದರೆ, ಆಶ್ಚರ್ಯವೆನಿಸುತ್ತದೆ. ಅವರು ನಡೆದದ್ದು ಇದೇ ಸೋಪಾನದಲ್ಲಿ, ಇವೇ ಸೂತ್ರ ಗಳನ್ನು ಅನುಸರಿಸಿ. ಈಗವರು ಇವುಗಳಾಚೆ ಹೋಗಿ ಯಾರಿಗೂ ಸಿಲುಕದ ಮಟ್ಟದಲ್ಲಿ ವಿರಾಜಿಸುತ್ತಿದ್ದಾರೆ. ಅವರಲ್ಲಿ ತುಡಿಯುತ್ತಿದ್ದ ಮಾನವ ಹಿತಾಕಾಂಕ್ಷೆಯೇ ತಾನೊಂದು ಸೋಪಾನವಾಗಿ ಅವರಿಗಾಗಿ ನಿರ್ಮಾಣಗೊಂಡಿರಬಹುದೆಂದು ಹೇಳಿದರೆ ತಪ್ಪಲ್ಲ.

ಬಸವಣ್ಣ ಇವುಗಳನ್ನು ಮಿಕ್ಕಿ ಮೀರಿ ಹೋಗಲು ಶಕ್ತನಾದ ಕಾರಣ ಸಕಲ ಜೀವಾತ್ಮರ ಲೇಸ ಬಯಸಲು ಸಮರ್ಥರಾಗುತ್ತಾರೆ. ಬಸವಣ್ಣ ಬರಿ ತಮ್ಮ ಆತ್ಮ ವಿಕಾಸದಿಂದ ತೃಪ್ತಿ ಹೊಂದುವ ಸಣ್ಣ ಜೀವಿಯಲ್ಲ, ಸಕಲ ಚರಾಚರ ವಿಕಾಸದಿಂದ ಮಾತ್ರ ತೃಪ್ತಿ ಹೊಂದುವ ಮಹಾ ಜೀವ ! ಆಕಾಶ ಬಹು ವಿಸ್ತಾರ ಹಾಗು ಗಹನವೆಂದು ಹೇಳುತ್ತಾರೆ. ಆದರೆ, ಅದಕ್ಕೂ ವಿಸ್ತಾರವಾದುದು ಮಾನವನ ಅಂತಃಕರಣ ಎಂಬುದನ್ನು ಮರೆಯಲಾಗದು. ಅಂತಃಕರಣ ವಿಸ್ತಾರವಾದಷ್ಟು ಮನುಷ್ಯ ಸಾಧಿಸುವ ಲೋಕಕಲ್ಯಾಣ ಕಾರ್ಯವೂ ವಿಸ್ತಾರವಾದುದುಂಟು !

ಈ ನಿಟ್ಟಿನಲ್ಲಿ ನೋಡಿದರೆ ಬಸವಣ್ಣನವರ ವಚನಗಳು ಕಾಲಾತೀತ, ದೇಶಾತೀತ, ಮತಾತೀತವಾಗಿವೆ ಎಂಬಲ್ಲಿ ಸಂದೇಹವಿಲ್ಲ. ವಚನವೆಂದರೆ ಬರಿ ಮಾತು ಅಲ್ಲ. ಬಸವಣ್ಣನವರೆ ವಚನವಾಗಿ ಬದುಕಿದ್ದಾರೆ, ಅಂತರಂಗ ಬಹಿರಂಗ ಶುದ್ಧಿಯನ್ನು ಸಾಧಿಸಿದವರ ಆಚಾರವೆ (ಆಚರಣೆಯೆ) ಶಬ್ದ ಶರೀರ ಹೊತ್ತು ವಚನ ರೂಪ ತಾಳಿ ಬಂದುದುಂಟು ! ಅವರ ಅನುಭಾವ ಎಂದಿಗೂ ಆರದ ನಂದಾದೀಪ !!

ಇಲ್ಲಿಯವರೆಗೆ ವಿವರಿಸಿದ ಹೇಳಿಕೆಗೆ ಬಸವಣ್ಣನವರ ವಚನಗಳೇ ಆಧಾರವಾಗಿವೆ. ಅಂಥ ಕೆಲ ವಚನಗಳಿಂದ ನಾವು ಸತ್ಯಾಸತ್ಯತೆಯನ್ನು ತೂಗಿ ನೋಡಬಹುದು.

**"ನಡೆಯಲರಿಯದೆ ನುಡಿಯಲರಿಯದೆ**
**ಲಿಂಗವ ಪೂಜಿಸಿ ಫಲವೇನು ?**
**ಅವರಸುಖವೆನ್ನಸುಖ, ಅವರ ದುಃಖವೆನ್ನದುಃಖ,**
**ಕೂಡಲ ಸಂಗನ ಶರಣರ ಮನ ನೊಂದರೆ**
**ಅನು ಬೆಂದೆನಯ್ಯಾ !"** (ಬ.ವ. ೪೦೮)

ಬಸವಣ್ಣನವರು ಬೆಳೆದು ನಿಂತ ಮಟ್ಟವನ್ನು ಇಲ್ಲಿ ಗುರುತಿಸಬಹುದು; ಅವರ ಮನಸಿನ ಮಹೋನ್ನತಿಯನ್ನು ನೋಡಬಹುದು. ಬಸವಣ್ಣನವರ ದೃಷ್ಟಿಯಲ್ಲಿ ಎಲ್ಲರೂ ಶರಣರು. ಅಲ್ಲಿ ಇಂಥ ಜಾತಿಗೇ ಪಟ್ಟವಿಲ್ಲ. ಇಂಥ ಲಿಂಗಕ್ಕೇ ಮಣೆ ಹಾಕುವಂತಿಲ್ಲ. ಜಾತಿಯೇ ಇಲ್ಲವೆಂದ ಮೇಲೆ ಪಟ್ಟವೆಲ್ಲಿಯದು ? ಸಮಾನ ಭೂಮಿಕೆಯ ಮೇಲೆ ಸರ್ವರೂ ವಿರಾಜಿಸಬೇಕು ಎನ್ನುವುದು ಬಸವಣ್ಣನವರ ನಿಲುವು ! ಅದಕ್ಕಾಗಿ ಎಲ್ಲರ ಸುಖವೆ ತಮ್ಮ ಸುಖವೆಂದು ಎಲ್ಲರ ದುಃಖವೇ ತಮ್ಮ ದುಃಖವೆಂದು ಹೇಳುತ್ತಾರೆ. ಅವರು ನೊಂದರೆ ತಾವೂ ನೋಯುತ್ತಾರೆ, ಈ ವಿಚಾರದಂತೆ ತಾನು ನುಡಿಯದಿದ್ದರೆ, ಹಾಗೆ ತಿಳಿದು ನಡೆಯದಿದ್ದರೆ ಲಿಂಗವನ್ನು ಎಷ್ಟು ವಿಧವಾಗಿ ಪೂಜಿಸಿದರೆ ಏನು ಫಲ ? ಎಂದು ತಮಗೆ ತಾವೇ ಪ್ರಶ್ನಿಸಿಕೊಳ್ಳುತ್ತಾರೆ. ಈ ಪ್ರಶ್ನೆ ನನಗೂ ಬಂತು, ನಿಮಗೂ ಬಂತು, ಲೋಕಕ್ಕೂ ಬಂತು! ಬಸವಣ್ಣನವರಂತೆ ಹೀಗೆ ತಿಳಿದು ನಡೆದರೆ ಇಂದಿನ ಕ್ಷೋಭೆ ಅಶಾಂತಿಗೆ ಅವಕಾಶವೆಲ್ಲಿ?

**"ಹೊನ್ನಿನೊಳಗೊಂದೊರೆಯ**
**ಸೀರೆಯೊಳಗೊಂದೆಳೆಯ ಅನ್ನದೊಳಗೊಂದಗುಳ**
**ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ**
**ನಿಮ್ಮಾಣೆ ನಿಮ್ಮ ಪುರಾತನರಾಣೆ !**
**ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ**
**ಕೂಡಲ ಸಂಗಮದೇವಾ" (ಬ. ವ. ೪೩೫)**

ಸರ್ವರ ದುಃಖ ದೂರವಾಗಿ ಸರ್ವರಿಗೆ ಸುಖವಾಗಲೆಂದು ಆಶಿಸಿ, ಈ ವಿಚಾರ ವ್ಯಕ್ತಪಡಿಸಿದ್ದಾರೆ. ಸ್ವತಃ ರಾಜ್ಯದ ಭಾಂಡಾರಿಯಾಗಿ ಬೊಕ್ಕಸಕ್ಕೆ ಒಡೆಯನಾದರೂ ಹೆಚ್ಚಿನದನ್ನು ಬಯಸದ ಬಸವಣ್ಣನವರ ಮಾನವೀಯತೆಗೆ ಈ ವಚನ ಕನ್ನಡಿಯಾಗಿದೆ. ತಾವು ದುಡಿದ ಫಲ ಲೋಕಸೇವೆ ಮಾಡುವಂಥ ಶರಣರಿಗೇ ಸಲ್ಲುವಂಥದು. ಇಂದು ನಾಳೆ, ಮಡದಿ ಮಕ್ಕಳಿಗೆ ಬೇಕೆಂದು ಕುದಿಯುವ, ಸಂಗ್ರಹ ಬುದ್ಧಿಯ ಇಂದಿನ ಕಾಲಕ್ಕೆ ಹೋಲಿಸಿ ನೋಡಿದರೆ ಕಳವಳವಾಗುತ್ತದೆ.

ಬಸವಣ್ಣನವರಲ್ಲಿಯ ಮಾನವೀಯತೆಯು ಸಕಲ ಮಾನವರನ್ನು ತನ್ನಂತೆ ಕಾಣಬೇಕೆಂಬ ಪ್ರಜ್ಞೆಯನ್ನು ಅವರಿಗೆ ನೀಡಿದೆ. ಈ ಸಾಮೂಹಿಕ ಪ್ರಜ್ಞೆಗೆ ಸುತ್ತಲೂ ದೃಷ್ಟಿ. ಒಂದಿಷ್ಟು ಅನ್ನವನ್ನು ಹಾಗು ಕುಟುಕನ್ನು ಕಂಡರೆ ಕಾಗೆ ಕೋಳಿಗಳು ತಮ್ಮ ಬಳಗವನ್ನು ಕರೆದು ಕೂಡಿಕೊಂಡು ತಿನ್ನುತ್ತವೆ. ಈ ಗಣಾಚಾರ ಅಥವಾ ಜಂಗಮಭಾವ ಮನುಷ್ಯನಿಗೇಕೆ ಇಲ್ಲವೆಂದು ಅವರು ಚಿಂತಿಸುತ್ತಾರೆ. ಆ ಚಿಂತನವೆ ಈ ವಚನವಾಗಿ ರೂಪತಾಳಿದೆ.

**"ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಬಳಗವನು ?**
**ಕೋಳಿ ಒಂದು ಕುಟುಕ ಕಂಡರೆ ಕೂಗಿ ಕರೆಯದೆ**
**ತನ್ನ ಕುಲವನೆಲ್ಲವ ?**
**ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ**
**ಕಾಗೆ ಕೋಳಿಯಿಂದ ಕರಕಷ್ಟ ಕೂಡಲ ಸಂಗಮದೇವಾ"**
**(ಬ. ವ. ೪೩೭)**

ಶಿವಭಕ್ತನಾದವನಿಗೆ ಎಲ್ಲರಲ್ಲಿ ಶಿವನನ್ನು ಕಾಣುವ ಶಿವದೃಷ್ಟಿಬೇಕು. ತನ್ನಂಥ ಭಕ್ತರಲ್ಲಿ ಶಿವನನ್ನು ಕಾಣದ ಇವರು ಉಳಿದವರಲ್ಲಿ ಹೇಗೆ ಕಾಣಬಲ್ಲರು? ಇಂಥ ಭಕ್ತಿಪಕ್ಷವನ್ನು ಬೆಳೆಸಿಕೊಳ್ಳದಿದ್ದರೆ ಅಲ್ಪಬುದ್ಧಿಯ ಕಾಗೆ ಕೋಳಿಗಳಿಗಿಂತ ಬುದ್ಧಿ ಜೀವಿಯೆನಿಸಿದ ಮನುಷ್ಯ ಕನಿಷ್ಠನೆನಿಸುತ್ತಾನೆ. ಹಾಗೆ ಹಂಚಿಕೊಂಡು ತಿನ್ನುವ ಗಣಾಚಾರವುಳ್ಳ ಬಸವಣ್ಣನವರು ತಮಗಾಗಿ ಏನನ್ನೂ ಹೆಚ್ಚಿಗೆ ಬಯಸುವುದಿಲ್ಲ!

**"ಗುರುವಚನವಲ್ಲದೆ ಲಿಂಗವೆಂದೆನಿಸದು**
**ಗುರುವಚನವಲ್ಲದೆ ನಿತ್ಯವೆಂದೆನಿಸದು**
**ಗುರುವಚನವಲ್ಲದೆ ನೇಮವೆಂದೆನಿಸದು**
**ತಲೆಯಿಲ್ಲದ ಅಟ್ಟೆಗೆ ಪಟ್ಟವಕಟ್ಟುವ**
**ಉಭಯ ಭ್ರಷ್ಟರ ಮೆಚ್ಚುವನೆ ನಮ್ಮ**
**ಕೂಡಲ ಸಂಗಮದೇವ?" (ಬ. ವ. ೭೨)**

ನಮ್ಮಲ್ಲಿಯೆ ಲಿಂಗವಿದೆ. ಸಕಲ ಕಾರಣಕರ್ತ ಚೈತನ್ಯವಿದೆ. ಗುರುವು ತಿಳಿಸಿ ಕೊಡಲಾರದೆ ನಮಗೆ ವೇದ್ಯವಾಗದು. ಚಾರಿತ್ರ್ಯಶುದ್ಧಿಯುಳ್ಳವನೆ ಗುರು. ಅರುಹನ್ನು ಜಾಗೃತಗೊಳಿಸಬಲ್ಲ ಭೋಧೆಯೆ ಗುರುವಚನ! ಅಂಥ ಗುರು ತಿಳಿಸಿ ಕೊಡಬೇಕು, ನಮಗೆ ಲಿಂಗದರ್ಶನವಾಗಬೇಕು. ಹಾಗೆಯೆ, ಗುರುವಚನ ಪಾಲಿಸದೆ, ಶಾಶ್ವತ ಸತ್ಯದ ಸಾಕ್ಷಾತ್ಕಾರವಾಗದು. ಹಾಗೆಯೇ ಯಾವ ನೇಮವೂ ಫಲಕಾರಿಯಾಗದು.

ಮೊದಲಿನ ಮೂರು ಚರಣಗಳಿಗೂ ಕೆಳಗಿನ ಮೂರು ಚರಣಗಳಿಗೂ ಸಂಬಂಧವಿಲ್ಲವೆನಿಸಿದರೂ, ಒಂದು ಸಂಬಂಧವಿದೆ. "ಇಂದು, ಗುರುಮಾರ್ಗದರ್ಶನ ವಿಲ್ಲದೆ ಎಲ್ಲರೂ ಪ್ರವೀಣರೆನಿಸುತ್ತಾರೆ. ಅಥವಾ ಅಂಥ ಸಮರ್ಥ ಗುರುವಿಲ್ಲ ವೆಂದರೂ ಅಡ್ಡಿಯಿಲ್ಲ. ಇದ್ದರೂ ಅವರ ಮಾತು ಕಿವಿಗೆ ಬೀಳುವುದಿಲ್ಲ. ಮನದೊಳಗೆ ಇಳಿಯುವುದಿಲ್ಲ. ಪರಸ್ಪರ ಸ್ವಹಿತಾಪೇಕ್ಷೆ ಅಥವಾ ಸ್ವಾರ್ಥವೆ ಗುರು ಶಿಷ್ಯರನ್ನು ಸೃಷ್ಟಿ ಮಾಡುತ್ತದೆ. ತಲೆಯಿಲ್ಲದ ಗುರು, ತಲೆಯಿಲ್ಲದ ಶಿಷ್ಯರು. ಪರಿಣತಿಯಿಲ್ಲದ ಗುರು, ತೂಗಿ ನೋಡುವ ಪ್ರಜ್ಞೆಯಿಲ್ಲದ ಶಿಷ್ಯರು. ನೀವೇ ಗುರು, ನೀವೇ ಶಿಷ್ಯರು ಎಂಬ ಪರಸ್ಪರ–ಗುಣಗಾನದಿಂದ ಪ್ರಯೋಜನವೇನು? ತಲೆಯಿಲ್ಲದ ಮುಂಡಕ್ಕೆ (ಅಟ್ಟೆಗೆ) ಪಟ್ಟವ ಕಟ್ಟುವುದು ಹೇಗೆ? ಅಂಥ ಹೆಣಕ್ಕೆ

ಪಟ್ಟ ಕಟ್ಟಬಹುದೆ ? ಅಹುದು. ಅದೀಗ ಸಾಮಾಜಿಕ, ರಾಜಕೀಯ. ಧಾರ್ಮಿಕ ರಂಗಗಳಲ್ಲಿ ನಡೆದಿದೆ. ಇವರಿಬ್ಬರೂ ಉಭಯಭ್ರಷ್ಟರು. ಸಮಾಜ ಹಾಗೂ ದೇಶ ವನ್ನು ಅಧೋಗತಿಗೆ ಒಯ್ಯುವವರು. ಇಂಥವರನ್ನು ತಿರಸ್ಕರಿಸುವ ಕೆಲಸವೂ ಇಂದು ನಡೆಯುತ್ತಿದೆ, ಅಥವಾ ಆ ಕಾಲವೂ ದೂರವಿಲ್ಲವೆಂದು ಅನಿಸುತ್ತದೆ.

ಬಸವಣ್ಣನವರ ಪ್ರಜ್ಞೆಗೆ ಸುತ್ತಲೂ ದೃಷ್ಟಿ ಇದೆ ಎನ್ನುವುದಕ್ಕೆ ಅನೇಕ ವಚನಗಳನ್ನು ಉದಾಹರಿಸಬಹುದು:

**"ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?**
**ಹೊಸ್ತಿಲಲ್ಲಿ ಹುಲ್ಲುಹುಟ್ಟಿ, ಮನೆಯೊಳಗೆ ರಜ ತುಂಬಿ,**
**ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?**
**ತನುವಿನೊಳಗೆ ಹುಸಿತುಂಬಿ ಮನದೊಳಗೆ ವಿಷಯ ತುಂಬಿ**
**ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲಸಂಗಮದೇವ!**

**(ಬ. ವ. ೯೭)**

ಮನೆ, ಸಮಾಜ, ದೇಶ, ತನು, ಮನ-ಎಲ್ಲವುಗಳ ಮೇಲೆ 'ಕ್ಷ' ಕಿರಣ ಬೀರುತ್ತ ಲಿದೆ ಈ ವಚನ. ಹೊಸ್ತಿಲಲ್ಲಿ ಹುಲ್ಲು, ಒಳಗೆ ಕಸಕಡ್ಡಿ ಮನೆಯೊಡೆಯನಿದ್ದಾನೊ ಇಲ್ಲವೊ ಎಂದು ಯಾರಿಗಾದರೂ ಆಶ್ಚರ್ಯ ಹುಟ್ಟುತ್ತದೆ. ಸಮಾಜ ಹಾಗೂ ದೇಶದ ಒಳಹೊರಗೆ ನೋಡಿದರೆ ಮೋಸ, ಅವ್ಯವಹಾರ, ಅನ್ಯಾಯ ತುಂಬಿದೆ. ಹೇಳುವ ಕೇಳುವ ಹಿರಿಯನೆಂಬವ ಯಾರೂ ಇಲ್ಲವೆನಿಸುತ್ತದೆ. ಇದ್ದರೂ ಮನೆಯೊಡೆಯನ ಮತ್ತು ಹೊಣೆಹೊತ್ತ ಹಿರಿಯನ ಮಾತು ನಡೆಯಲಿಕ್ಕಿಲ್ಲ. ತಾನು ನೀತಿವಂತನಾಗಿರ ದಿದ್ದರೆ ಯಾರು ಮನ್ನಣೆ ನೀಡುತ್ತಾರೆ ?

ಮನೆ ದೇಶಗಳ ಸ್ಥಿತಿಗತಿ ಹೀಗಾದರೆ ಮನುಷ್ಯನ ತನು-ಮನ ಶುದ್ಧವಾಗಿವೆಯೆ? ಕೇಳಬೇಡ. ನುಡಿವ ನಾಲಿಗೆ ಹುಸಿ, ನೋಡುವ ಕಣ್ಣು ಹುಸಿ, ಮನದೊಳಗೆಲ್ಲ ವಿಷಯ, ವಿಷಮ ವಿಚಾರ ! ಅಂದಮೇಲೆ ಅಲ್ಲಿಯೂ ಮನದೊಡೆಯನಿಲ್ಲ, ಪರಮಾತ್ಮನಿಂದ ಬಂದ ಜೀವಾತ್ಮನಲ್ಲಿ ಆ ಪರಮಾತ್ಮನಿಗೇ ಎಡೆಯಿಲ್ಲ ! ಇದನ್ನೆಲ್ಲ ನೋಡಿ ಬಸವಣ್ಣನಂಥ ಮಹಾನುಭಾವರಿಗೆ ಎಷ್ಟು ನೋವಾಗಿರಬೇಕು !! ಬಸವಣ್ಣ ನವರು ಅಂದು ನೋಡಿದ ಸ್ಥಿತಿಗೂ ಇಂದು ನಾವು ನೋಡುತ್ತಿರುವ ಸ್ಥಿತಿಗೂ ಏನು ಅಂತರವಿದೆ? ಕಂಡದ್ದನ್ನು ಹೇಳಿರುವುದರಲ್ಲಿ ಏನು ವಿಶೇಷವಿದೆ? ಎಂಬ ಪ್ರಶ್ನೆಯೂ ಹುಟ್ಟಬಹುದು. ಈ ಪ್ರಶ್ನೆಗೆ ಅಲ್ಲಿಯೇ ಉತ್ತರವಿದೆ. ಕಾಣುವ ಕಣ್ಣುಬೇಕು. ಮನೆಯೊಡೆಯ ಮುಖಂಡ ದೇಶವಾಳುವ ದೊರೆ ನೀತಿವಂತ ಪ್ರಜ್ಞಾವಂತ ಸಚ್ಚಾರಿತ್ರ್ಯ ವಂತರಾಗಿರಬೇಕು. ಅಂದರೆ ಮನೆ, ಸಮಾಜ, ದೇಶ, ಸುವ್ಯವಸ್ಥಿತವಾಗಿದ್ದು ಶಾಂತಿ ಯನ್ನು ಕಾಣಬಹುದು. ಮನಸ್ಸು ಸ್ವಚ್ಛವಾಗಿದ್ದರೆ ಸರ್ವೇಶನಲ್ಲಿ ಒಂದುನೆಲೆಸಬಹುದು!

ಒಬ್ಬ ದಕ್ಷ ಒಡೆಯನಿರದಿದ್ದರೆ, ಪರಿಣಮಿಸುವ ಸ್ಥಿತಿಯನ್ನು ನೆನೆಯಲೂ ಬಾರದು. ಆನೆಯನೇರಿಕೊಂಡು ಅಧಿಕಾರದ ಮದದಲ್ಲಿ ಹೋಗುವವರು

ತಮ್ಮನ್ನೆದುರಿಸುವ ಬಂಟನಾರೂ ಇಲ್ಲವೆಂದು ಭ್ರಮಿಸುತ್ತಾರೆ. 'ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯಂತೆ' ತಮಗೆ ಅಳಿವೆಂಬುದಿಲ್ಲವೆಂದು ಹಾರಾಡುತ್ತಾರೆ. ತಮ್ಮ ಕರ್ಮ ಮಾಯಾ ಮಂಜರವಾಗಿ ಕೊಲಬಹುದೆಂಬ ವಿಚಾರ ಅಹಂಕಾರಕ್ಕೆ ಹೊಳೆಯುವುದು ಹೇಗೆ ? ಶೂಲವನೇರುವ ಸಮಯದಲ್ಲೂ ಹಾಲು ತುಪ್ಪವ ಬಯಸುವ ಮನುಷ್ಯನ ಆಶೆ ಆಮಿಷಕ್ಕೆ ಇತಿಮಿತಿಯೆಂಬುದಿಲ್ಲ! ಬಸವಣ್ಣನವರಾದರೂ 'ನೀ ನಿಕ್ಕಿದ ಬೀಯದಲ್ಲಿ' (ಕೊಟ್ಟಂಥ ಕೊಡುಗೆಯಲ್ಲಿ) ವಂಚನೆಯಿಲ್ಲದೆ ತೃಪ್ತರಾಗಿ ಬದುಕ ಬಯಸುತ್ತಾರೆ. ಅವರಿಗೂ ಇವರಿಗೂ ಹೋಲಿಸಿ ನೋಡಿದಾಗ ಬಸವಣ್ಣನವರು ಏರಿದ ಎತ್ತರ ಸಾಧಿಸಿದ ಸತ್ವ ಅರ್ಥವಾಗುತ್ತದೆ. "ಶರಣರ ಬರವೆಮಗೆ ಪ್ರಾಣ ಜೀವಾಳವಯ್ಯಾ" ಎಂದು ಬಂದವರನ್ನೆಲ್ಲ ಅಪ್ಪಿಕೊಳ್ಳುವ ತನ್ನಂತೆ ಪ್ರತಿಬಸವರನ್ನಾಗಿ ರೂಪಿಸುವ ಬಸವಣ್ಣ ಒಂದು ಧ್ರುವವಾದರೆ "ಏನಿ ಬಂದಿರಿ, ಹದುಳವಿದ್ದಿರಾ ?" ಎಂದು ಮನೆಗೆ, ಕಚೇರಿಗೆ ಬಂದವರನ್ನು ವಿಚಾರಿಸುವ ಸೌಜನ್ಯವಿಲ್ಲದವರು ಒಂದು ಧ್ರುವ ! ಒಬ್ಬರು ಅತಿಮಾನಸವುಳ್ಳ ಮಹಾಮಾನವ, ಇನ್ನೊಬ್ಬರು ಮಾನವೀಯತೆಯ ಸ್ತರದಿಂದಲೆ ಅಹಂಕಾರದಲ್ಲಿ ಕುಸಿದು ಕುಪ್ಪಳಿಸಿದವರು !

"ಅರಸನ ಕಂಡು ತನ್ನ ಪುರುಷನ ಮರೆದರೆ ಮರನೇರಿ ಕೈಬಿಟ್ಟಂತೆ !"

(ಬ. ವ. ೪೨೫)

ಅಹುದು. ಸ್ಥಾನಮಾನದ ಮೋಹಕ್ಕೊಳಗಾಗಿ ತನ್ನೊಡೆಯನನ್ನೂ, ಆತ ತನಗೊಪ್ಪಿಸಿದ ಕರ್ತವ್ಯ (ಕಾಯಕ) ವನ್ನೂ ಮರೆತರೆ' ಆತ ಇಹಲೋಕಕ್ಕೂ ದೂರ, ಪರಲೋಕಕ್ಕೂ ದೂರ, ಜನತೆಯಿಂದಲೂ ದೂರ, ದೇವರಿಂದಲೂ ದೂರ! ಬಸವಣ್ಣನವರಂತೆ ಭಕ್ತಿ ಸುಭಾಷೆಯನ್ನು ನುಡಿದು, ನುಡಿದಂತೆ ನಡೆದು ಕೃತಾರ್ಥರೆನಿಸುವ ಸೇವಾ ಮನೋಧರ್ಮಿಗಳು ಎಷ್ಟು ಜನ ಈಗ ? ಒಮ್ಮನವಾದರೆ ನುಡಿಯುವ ಇಮ್ಮನವಾದರೆ ನುಡಿಯದ ಹಾಗು ತ್ರಾಸು ಹಿಡಿದು ತೂಗಿ ಕಾಣಿಯ ಗೆಲ್ಲದ ಅರ್ಧ ಕಾಣಿಯ ಸೋಲದ ಅಂಥ ವರ್ತಕರೆಲ್ಲಿ ? ವರ್ತನೆಯುಳ್ಳವರೆಲ್ಲ? ಇಲ್ಲವೆಂದೆ ಇಂದು ಈ ಗತಿ !

ಬಸವಣ್ಣನವರು ಹೇಗೊ ಹಾಗೆ ಅವರೊಂದಿಗಿರುವ ಶರಣರು ಸಂತೃಪ್ತ ಜೀವಿಗಳು : ಅವರು

**"ಮನೆ ನೋಡಾ ಬಡವರು, ಮನ ನೋಡಾ ಘನ !**
**ಸೋಂಕಿನಲ್ಲಿ ಸುಖಿ ಸರ್ವಾಂಗ ಕಲಿಗಳು**
**ಪಸರಕ್ಕನುವಿಲ್ಲ, ಬಂದ ತತ್ಕಾಲಕ್ಕುಂಟು**
**ಕೂಡಲ ಸಂಗನ ಶರಣರು ಸ್ವತಂತ್ರಧೀರರು !" (ಬ.ವ. ೩೨೫)**

ಮನೆಗಿಂತ ಮನಸು ದೊಡ್ಡದಿದ್ದರೆ ಅಲ್ಲಿ ಸುಖವುಂಟು. ಈಗ ಕಾಯಕ ಮಾಡುವುದು, ಬಂದ ಫಲದಿಂದ ಜಂಗಮದಾಸೋಹ ಮಾಡುವುದು, ಅದರಲ್ಲಿ ಶಿವನನ್ನು ಕಾಣುವುದು, ಹೀಗೆ ಶರಣರಲ್ಲಿ ಏನಿಲ್ಲದಿದ್ದರೂ ಎಲ್ಲವುಳ್ಳವರು. ಬದುಕುವುದಕ್ಕೆ ಹಣಕ್ಕಿಂತ ಗುಣಬೇಕು. ಆ ಗುಣದಲ್ಲಿ ಸುಖ ಕಾಣಬೇಕು.

ತಾನು ಪ್ರಾಮಾಣಿಕವಾಗಿ ದುಡಿದು, ಬದುಕಿ, ಸಮಾಜವೂ ದೇಶವೂ ಸುಖವಾಗಿ ಬದುಕಲಿ ಎಂದು ಘನಮನವುಳ್ಳವರು ಅಂದು ಕೆಲವರಾದರೂ ಇದ್ದರು, ಇಂದು ಯಾರೂ ಇಲ್ಲವೆಂದರೂ ಅಡ್ಡಿಯಿಲ್ಲ !

**"ಮೇಲಾಗಲೊಲ್ಲೆನು ಕೀಳಾಗಲಲ್ಲದೆ**
**ಕೀಳಿಂಗಲ್ಲದೆ ಹಯನು ಕರೆವುದೆ ?"** (ಬ. ವ. ೩೫೯)

ಕೆಳಬಾಗಿ ಸಮಾಧಾನದಿಂದ ಕರೆದಲ್ಲದೆ ಹಸು ಹಾಲು ಕೊಡದು. ತಾನು ಹಸುವಿನೊಡೆಯನಾಗಿ ಕೀಳಾಗಲೇಕೆ ಮೇಲಾಗುವೆ ಎಂದು ಹಮ್ಮಿನಲ್ಲಿ ಹಿಂಡಲು ಹೋದರೆ ಆಕಳು ಒದೆವುದಲ್ಲದೆ ಹಾಲು ಕೊಡದು ! ಇಷ್ಟಾರ್ಥವನ್ನು ಸಾಧಿಸಿ ಕೊಳ್ಳುವ ಈ ಸಾಮಾನ್ಯ ಸೂತ್ರ ಬಸವಣ್ಣ ಅರಿತಂತೆ ಇಂದು ನಾವು ಅರಿತುಕೊಂಡಿಲ್ಲ, ಅರಿತರೂ ಆಚರಣೆಯಲ್ಲಿ ತಂದಿಲ್ಲ. ನಮ್ಮ ಅಹಂಕಾರ ನಮ್ಮನ್ನು ತಿಂದರೆ ಯಾರೇನು ಮಾಡುವುದು !

**"ಅಪ್ಪನು ನಮ್ಮ ಮಾದರ ಚನ್ನಯ್ಯ**
**ಬೊಪ್ಪನು ನಮ್ಮ ಡೋಹರ ಕಕ್ಕಯ್ಯ**
**ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯಾ!"** (ಬ. ವ ೩೪೭)

ಯಾವ ಜನಾಂಗವನ್ನು ಗೌಣವಾಗಿ ಕಾಣುತ್ತಿದ್ದರೋ ಅಂಥವರನ್ನು ಅಪ್ಪ, ಬೊಪ್ಪ, ನಮ್ಮಯ್ಯ ಎಂದು ಬಾಯ್ತುಂಬಿ ನುಡಿಯುವ ಬಸವಣ್ಣ ಬದುಕಿ ಬಾಳಿದ ಇಂಬನ್ನು ಸರ್ವಾತ್ಮರನ್ನೂ ಅಪ್ಪಿಕೊಳ್ಳುವ ಅವಿನಾಭಾವದ ಬಾಂಧವ್ಯ ಭಾವದ ತುಂಬುಳತನವನ್ನು ನಾವು ಸಹಜವಾಗಿ ಗುರುತಿಸಬಹುದು. ಇವರೆಲ್ಲ ಶರಣರಾಗಿ ಬಾಳಿದ್ದು, ಬೆಳಗಿದ್ದು ನಮಗಿಂದು ಆಶ್ಚರ್ಯವೆನಿಸುತ್ತದೆ. ಆದರೆ ಬಸವಣ್ಣನಂಥ ಒಬ್ಬರೇ ಒಬ್ಬ ಮಹಾಜೀವಿ ಮಹಾ ಅಂತಃಕರುಣಿ ಇದ್ದರೆ, ಯಾವುದು ಸಾಧ್ಯವಿಲ್ಲ ?

ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ – ಇವು ಹೆಚ್ಚಾಗಿ ಆಧ್ಯಾತ್ಮಿಕ ಆರೋಹಣಕ್ಕೆ ನಿಯೋಜಿಸಲಾದ ವಿಶಿಷ್ಟ ಸೂತ್ರಗಳು, ಬಸವಣ್ಣನವರಿಗೆ ತಾನೊಬ್ಬನೆ ಅತ್ಯುನ್ನತ ಆತ್ಮೋನ್ನತಿಗೇರಿ (ಐಕ್ಯಸ್ಥಲವೇರಿ) ತೃಪ್ತಿ ಪಡುವುದು ಬೇಕಾಗಿರಲಿಲ್ಲ. ಐಕ್ಯಸ್ಥಲದಿಂದ ಮತ್ತೆ ಭಕ್ತಸ್ಥಲಕ್ಕೆ ಬಂದು, ಜನಜಂಗುಳಿಯ ಸೇವೆ ಕೈಕೊಂಡು ಧನ್ಯವಾಗುವ ಬಯಕೆ ಅವರದು. ಜನಸಮುದಾಯವೆ ಅವರಿಗೆ ಜಂಗಮ. ಸಮುದಾಯ ಸೇವೆಯೆ ಜಂಗಮ ದಾಸೋಹ. ಈ ಉದ್ದೇಶಕ್ಕಾಗಿ ಅವರು ಷಟ್‌ಸ್ಥಲ–ಅಷ್ಟಾವರಣ–ಪಂಚಾಚಾರಗಳ ಮಾರ್ಗವನ್ನು ಕ್ರಮಿಸಿ, ಅದರಾಚೆ ಹೋಗಿ, ತಮ್ಮ ಇಷ್ಟಾರ್ಥವನ್ನು ಪೂರ್ತಿಗೊಳಿಸಿಕೊಂಡರೆನ್ನಬಹುದು. ದಯವೇ ಧರ್ಮದ ಮೂಲವೆಂಬ ತುಡಿತವೇ ಮಾನವೀಯ ಮಾರ್ಗವಾಗಿ ಅವರಿಗಾಗಿ ರೂಪಗೊಂಡಿ ತೆಂದರೂ ಸರಿಯೇ ! ಅತ್ತ ಆಧ್ಯಾತ್ಮಿಕತೆಯನ್ನೂ ಬಿಡಲಿಲ್ಲ, ಇತ್ತ ಲೌಕಿಕತೆಯನ್ನೂ

ಬಿಡಲಿಲ್ಲ. ಆಧ್ಯಾತ್ಮಿಕತೆಯನ್ನೂ ಲೌಕಿಕತೆಯ ಸೇವೆಗಾಗಿ ಬಳಸಿಕೊಂಡರು. ಲೌಕಿಕತೆಯನ್ನೂ ಆಧ್ಯಾತ್ಮಿಕತೆಯ ಎತ್ತರಕ್ಕೆ ಒಯ್ದರು. ಈ ಎರಡನ್ನೂ ಏಕ ಕಾಲಕ್ಕೆ ಸಾಧಿಸಿದ್ದು ಬಸವಣ್ಣನವರ ಕ್ರಾಂತಿಯ ಯಶಸ್ಸಿಗೆ ಮೂಲಮಂತ್ರ! ಈ ಅಸಾಧ್ಯವನ್ನು ಸಾಧ್ಯಗೊಳಿಸುವಲ್ಲಿಯೇ ಬಸವಣ್ಣನವರ ಅಸಾಧಾರಣ ಶಕ್ತಿಯಿದೆ. ಕಾಲಲ್ಲಿ ಗುಂಡು, ಕೊರಳಲ್ಲಿ ಬೆಂಡು ಕಟ್ಟಿಕೊಂಡು ಈಜಿ ದಡ ಮುಟ್ಟಿದ ಸಾಹಸಿ ಬಸವಣ್ಣ! ಇಷ್ಟಾಗಿಯೂ ಬಾಗಿದ ತಲೆಯ ಮುಗಿದ ಕೈಯಾದವರು! ಬಸವಣ್ಣ ನವರಂತೆ ಮಾನವಕಲ್ಯಾಣ ಸಾಧಿಸುವ ತುಡಿತ ಮಿಡಿತವುಳ್ಳವರು ಆ ಕಾಲದಲ್ಲಿಯೂ ಅಷ್ಟೊಂದು ಜನ ಕಂಡು ಬರುವುದಿಲ್ಲ. ಬಹುಶಃ ಸಕಲ ಶರಣರು ಕಾಯಕ ದಾಸೋಹದಲ್ಲಿ ಜೀವನದ ಕೃತಾರ್ಥತೆಯನ್ನೂ ಕಂಡುಕೊಂಡದ್ದು ಜಗತ್ತಿನಲ್ಲಿಯೆ ಹೊಸದು. ಪಾತಾಳದಲ್ಲಿದ್ದವರು ಮುಗಿಲೆತ್ತರ ಬೆಳೆದದ್ದು ಕಡಿಮೆ ಸಾಧನೆಯೇನಲ್ಲ. ಈ ಎಲ್ಲರ ಹಿನ್ನೆಲೆಯ ಶಕ್ತಿಯಾಗಿ ಬೆನ್ನೆಲುವಾಗಿ ನಿಂತವರು ಬಸವಣ್ಣನವರು. ಭಕ್ತಿಯಿಂದಲೇ ಬೆಳೆದು ಜಂಗಮವಾದವರು ಬಸವಣ್ಣನವರು. ಜನಸೇವೆಯಲ್ಲಿಯೇ ಶಿವನನ್ನು ಕಂಡು ಶಿವನಾಗಿ ಬೆಳಗಿದವರು. ಜಂಗಮಮುಖದಲ್ಲಿ ಲಿಂಗವ ಕಾಣುವು ದೆಂದರೆ ಇದುವೆ. ಈ ಬಹುಮುಖ ಸಾಧನೆ ಕಂಡುಬರುವುದು ಅವರ ವಚನ ಗಳಲ್ಲಿ. ಬಸವಣ್ಣ ಬಿಟ್ಟು ಹೋದ ಬೆಳಕನ್ನು ಉಪಯೋಗಿಸಿಕೊಂಡರೆ ಉಂಟು, ಇಲ್ಲದಿದ್ದರೆ ಇಲ್ಲ! ಬಸವಣ್ಣನವರ ವಚನಗಳ ವಿಶೇಷತೆಯೆಂದರೆ–ಚಿರಂತನತೆ, ಚಿರಂತನ ಪರಿಣಾಮ!!

ಆದ್ದರಿಂದ ಷಟ್‌ಸ್ಥಲ ಶಾಸ್ತ್ರಾಧ್ಯಯನಕ್ಕೆ ಹೆಚ್ಚು ಒತ್ತುಕೊಟ್ಟು ನಮ್ಮ ಬುದ್ಧಿ ಶಕ್ತಿಯನ್ನು ಕೇಂದ್ರೀಕರಿಸುವುದಕ್ಕಿಂತ ಮಾನವ ಜನಾಂಗದ ಮೇಲೆ ಚಿರಂತನ ಪರಿಣಾಮ ಬೀರುವಂಥ ಜನಸಾಮಾನ್ಯರ ಉತ್ಕರ್ಷಕ್ಕೆ ಪೂರಕವಾಗುವಂಥ ಬಸವ ವಚನಗಳತ್ತ ಗಮನ ಹರಿಸುವುದು ಹೆಚ್ಚು ಫಲಪ್ರದವೆನಿಸಬಹುದು! ಷಟ್‌ಸ್ಥಲ ವಿಚಾರ ಬೇಡವೆಂದಲ್ಲ, ಅದು ತತ್ವಜಿಜ್ಞಾಸುಗಳಿಗೆ ಮೀಸಲಾಗಿರಲಿ.

**"ತಿರುಕರೆನ್ನದಿರಿಂ ಭೋ ಎನ್ನ ತಂದೆಗಳನು**
**ತಿರುಕರೆನ್ನದಿರಿಂ ಭೋ ಎನ್ನ ಬಂಧುಗಳನು**
**ತಿರುಕರೆನ್ನದಿರಿಂ ಭೋ ಎನ್ನ ದೇವರನು**
**ತಿರುಕರೆನ್ನದಿರಿಂ ಭೋ ಎನ್ನ ಒಡೆಯರನು" (ಬ. ವ. ೧೧೫೨)**

ಜನಸಾಮಾನ್ಯರನ್ನು ಬಸವಣ್ಣನವರು ಎಷ್ಟು ಉದಾತ್ತವಾಗಿ ಕಂಡಿದ್ದಾರೆ! ಆಪತ್ಕಾಲದಲ್ಲಿ ಭೀಮ ತನ್ನ ತಾಯಿ ಬಂಧುಗಳನ್ನು ಹೆಗಲಮೇಲೆ ಹೊತ್ತುಕೊಂಡು ಹೋಗಿ ಪಾರು ಮಾಡಿದನಂತೆ. ಆದರೆ ಮಾನವ ಕ್ರೌರ್ಯಕ್ಕೆ ಗುರಿಯಾದವರನ್ನು ಮೇಲೆತ್ತಿ ಹಿಡಿದು, ಬಸವಣ್ಣ ಶರಣರನ್ನಾಗಿ ಮಾಡಿದ್ದು ಅವರ ಮನೋವೈಶಾಲ್ಯಕ್ಕೆ ಸಾಕ್ಷಿಯಾಗಿದೆ. ಭೀಮ ತನ್ನ ಬಂಧುಗಳನ್ನು ರಕ್ಷಿಸಿದ್ದು ತನ್ನವರೆಂಬ ಮಾಯೆ

ಮಮತೆಯಿಂದ ಬಸವಣ್ಣ ಜನಕೋಟಿಯನ್ನು ಉದ್ಧರಿಸಿದ್ದು ಯಾವ ಅಂಟುನಂಟು ಇಲ್ಲದೆ ಮಾನವೀಯ ಅಂತಃಕರಣದಿಂದ !

ಅದಕ್ಕಾಗಿ ಇಂದಿನ ಸಂದಿಗ್ಧ ಕಾಲಕ್ಕನುಗುಣವಾಗಿ. ಅಳುವಲ್ಲದ, ನಗುವಲ್ಲದ, ಸುಭಿಕ್ಷವಲ್ಲದ, ದುರ್ಭಿಕ್ಷವಲ್ಲದ,ಬದುಕೂ ಅಲ್ಲದ,ಸಾವೂ ಅಲ್ಲದ,ಚಿಂತಾಜನಕ ವ್ಯವಸ್ಥೆಯಲ್ಲಿ ನರಳುತ್ತಿರುವ ಮೂಕಜನರ ನೋವಿನತ್ತ ಮಾನವೀಯ ದೃಷ್ಟಿಯನ್ನು ಹೊರಳಿಸುವುದು ಲೇಸು ! ಇದು ಇಂದಿನ ಕಾಲದ ಅಗತ್ಯವೂ ಆಗಿದೆ. ಈ ಕಾಲದ ಅಗತ್ಯಕ್ಕೆ ಉತ್ತರವೀಯಬಲ್ಲ, ನೊಂದವರ ನೋವ ನಿವಾರಿಸಬಲ್ಲ ಪರಿಹಾರ ಬಸವ ವಚನಗಳಲ್ಲಿ ಸಿಕ್ಕುವುದೆಂಬ ಭರವಸೆಯಿದೆ. ಬಸವ ವಚನ ವಿಚಾರವೊಂದು ಅಕ್ಷಯ ಪಾತ್ರೆ, ಪರುಷಮಣಿ ! ತೆರೆದ ಕಣ್ಣು ಬೇಕು, ಹಾತೊರೆಯುವ ಮಾನವೀಯ ಸಕ್ರಿಯ ಪ್ರಯತ್ನ ಬೇಕು !! ಬಸವ ವಚನಗಳಲ್ಲಿ ಈ ಕಾಲದ ನೋವಿಗೊಂದು ಉತ್ತರವಿದೆ. ಈ ದೃಷ್ಟಿಯಿಂದ ಈ ಲೇಖನದಲ್ಲಿ ಬಸವ ವಚನಗಳನ್ನು ಮಾತ್ರ ಎತ್ತಿಕೊಳ್ಳಲಾಗಿದೆ.

ನೊಂದವರ ನೋವ ನಿವಾರಿಸಬಲ್ಲ ಬಸವಣ್ಣನವರ ಕರುಳು ನೋಯುವಂತೆ ನಡೆದುಕೊಳ್ಳುವ ಜನರು ಆಗಲೂ ಇದ್ದರು, ಈಗಲೂ ಇದ್ದಾರೆ. ಅಭಿವ್ಯಕ್ತಿ ಸ್ವಾತಂತ್ರ್ಯದ ಬಿರುಗಾಳಿಯ ಹುಚ್ಚಿನಲ್ಲಿ ಎಂಥೆಂಥವರೂ ಇಂದು ಕೊಚ್ಚಿ ಹೋಗುತ್ತಲಿದ್ದಾರೆ. ಹೀಗಾಗಿ ಬಸವಣ್ಣನವರ ಚಾರಿತ್ರ್ಯದ ಬಗೆಗೆ, ಅಂತ್ಯದ ಬಗೆಗೆ ಏನೇನೋ ಕನವರಿಸುತ್ತಿದ್ದಾರೆ, ಬರೆಯುತ್ತಿದ್ದಾರೆ. ಕನವರಿಸುವವರು ಕನವರಿಸಲಿ, ಬರೆಯುವವರು ಬರೆಯಲಿ, ಬಸವಣ್ಣನವರು ಮಾತ್ರ ನಿರಾಳವಾಗಿದ್ದಾರೆ. ಹೊಯಿದವರೆನ್ನ ಹೊರೆದವರೆಂದು, ಜರಿದವರೆನ್ನ ಜನ್ಮ ಬಂಧುಗಳೆಂದು–ಅಂದು ಸ್ಥಿತಪ್ರಜ್ಞರಾದಂತೆ ಇಂದು ಸಹ ಚೇತನಾತ್ಮ ರೂಪದಲ್ಲಿದ್ದ ಬಸವಣ್ಣನವರು ಸ್ಥಿತಪ್ರಜ್ಞರಾಗಿದ್ದಾರೆ.

ಇನ್ನು ಬಸವ ವಚನಾಂಕಿತ– 'ಕೂಡಲ ಸಂಗಮ'ವನ್ನಳಿಸಿ 'ಲಿಂಗ ದೇವ' ಎಂದು ಬರೆದಿದ್ದಾರೆ– ಮಾತೆ ಮಹಾದೇವಿಯವರು. ಬಸವಾಭಿಮಾನಿಗಳಾದ ಮಾತೆಯವರು ಹೀಗೇಕೆ ಮಾರ್ಪಾಟು ಮಾಡಿದರೊ ತಿಳಿಯದು. ಅವರ ಲೇಖನಿ ಹಾಗೆ ಮಾಡಿರಬಹುದು. ಆದರೆ ಅವರ ಅಂತಃಸಾಕ್ಷಿಗೆ ಇದು ಸಮ್ಮತವಾಗಿರಲಿಕ್ಕಿಲ್ಲ. 'ಕೂಡಲ ಸಂಗಮ' ಸ್ಥಾವರವೆಂದು ಅವರ ಗ್ರಹಿಕೆಯಾಗಿರಬಹುದು. ಆದರೆ, ಕೂಡಲ ಸಂಗಮ ಪದವು ವಾಚ್ಯಾರ್ಥದಲ್ಲಿ ಸ್ಥಾವರವೆನ್ನಿಸಬಹುದು. ಸೂಚ್ಯಾರ್ಥದಲ್ಲಿ ಜಂಗಮವಾಗಿದೆ. ಅಂಗಾರ್ಥ ಸ್ಥಾವರ, ಲಿಂಗಾರ್ಥ ಜಂಗಮ ! ಮಾತೆಯಂಥವರಿಗಿದು ಅರಿಯದ್ದಲ್ಲ. ಕೂಡಲವೆಂದರೆ ಕೂಡಿ ಒಂದಾಗುವುದು. ಸಂಗಮವೆಂದರೂ ಕೂಡಿ ಒಂದಾಗುವುದು. ಶಿವನಿಂದ ಬಂದ ಜೀವ ಶಿವನಲ್ಲಿ ಬೆರೆದು ಒಂದಾಗುವ ಭಾವ ಈ ಎರಡೂ ಪದಗಳಲ್ಲಿ ಉಂಟು. ಜೀವ ಭಾವ ಹೋಗಿ ಶಿವ ಭಾವ ಸ್ವರೂಪಿಯಾಗುವುದು ಜಂಗಮವಲ್ಲದೆ ಸ್ಥಾವರವಲ್ಲ ! ಲಿಂಗದಲ್ಲಿ ಉದಯವಾದ ಬಸವಣ್ಣ

ನವರು ಜಂಗಮಲಿಂಗದಲ್ಲಿ (ಕರಸ್ಥಲ ಲಿಂಗದಲ್ಲಿ) ಬೆರೆದು ಲಿಂಗವಾದರಲ್ಲದೆ. ಸ್ಥಾವರಲಿಂಗ ಬಿಚ್ಚಿ ಅದರಲ್ಲಿ ಬಯಲಾದರೆಂಬುದು ನಾಟಕೀಯ ದೃಶ್ಯ! ಅವರ ಅಂತ್ಯ ಆತ್ಮಹತ್ಯೆಯಲ್ಲಿ ಕೊನೆಯಾಯಿತೆಂಬುದು ತಿಳಿಗೇಡಿಯ ಕುಚೋದ್ಯತನವಲ್ಲದೆ ತಿಳಿದವರ ತೀರ್ಮಾನವೇನಲ್ಲ. ಅರಿವಿನ ತೀರ್ಮಾನದಲ್ಲಿ ತಥ್ಯವುಂಟು, ಸತ್ಯವುಂಟು, ಅರಿವಿಲ್ಲದಲ್ಲಿ ಯಾವುದೂ ಇಲ್ಲ.

ಷಟ್‌ಸ್ಥಲ ಸಿದ್ಧಿಪಡೆದ ಬಸವಣ್ಣನವರಿಗೆ ಬಯಸಿದಾಗ ಲಿಂಗದಲ್ಲಿ ಬಯಲಾಗುವ ಯೋಗಬಲವಿತ್ತೆಂಬುದನ್ನು ಮರೆಯಲಾಗದು! ಹೀಗೆ ಅವರ ಹುಟ್ಟು ಬದುಕು ಬಯಲುಗಳಲ್ಲಿಯೂ, ಬದುಕಿನ ಉಸಿರಾದ ವಚನಗಳಲ್ಲಿಯೂ ಒಂದು ಚಿರಂತನ ಪರಿಣಾಮವುಂಟು.

## ೩.

# ಶರಣರು ಕಟ್ಟಿದಂಥ ಸ್ವಯಂಪೂರ್ಣ ಸಮಾಜ

ಊರಿಗೊಂದು ಮನೆ ಕಟ್ಟಬೇಕೆನ್ನುತ್ತಾರೆ ಹಿರಿಯರು. ಹಿರಿಯರ ಹೇಳಿಕೆಯಲ್ಲಿ ಒಂದು ವಿಶೇಷ ಅರ್ಥವಿದೆ. ಇಂಥ ಮನೆ ಕಟ್ಟುವುದೆಂದರೆ ಕಲ್ಲು ಕಟ್ಟಿಗೆಯಿಂದಲ್ಲ, ಗಚ್ಚುಗಾರೆಯಿಂದಲ್ಲ, ಪ್ರೀತಿ ಬಾಂಧವ್ಯದಿಂದ. ಬಸವಣ್ಣ ಇಂಥ ಮನೆಯನ್ನು ಅಂದೇ ಕಟ್ಟಿ, ಮೂರ್ತಿಗೊಂಡು ಕ್ರಿಯಾರೂಪ ಕೊಟ್ಟಿದ್ದಾರೆ. ಆತ ಕಟ್ಟಿದ್ದು ಬರಿ ಊರಿಗೊಂದಲ್ಲ, ದಿಕ್ಕು ದೆಸೆಯ ತುಂಬ, ಕೇರಿ ಕೇರಿ ತುಂಬ, ಧರೆಯ ತುಂಬ. ನೆಲೆಯಿಲ್ಲದವರಿಗೆ ನೆಲೆ ಕಲ್ಪಿಸಿದ ಮನೆ, ಬೆಲೆಯಿಲ್ಲದವರಿಗೆ ಬೆಲೆ ತಂದುಕೊಟ್ಟ ಮನೆ.

ಸಕಲ ಜೀವಾತ್ಮರ ಲೇಸ ಬಯಸುವ ಬಸವಣ್ಣನ (ತತ್ವ) ಸದಿಚ್ಛೆ, ನಿಸರ್ಗದ ಸದಿಚ್ಛೆಯೂ ಆಗಿದೆ. ಈ ಸದಿಚ್ಛೆ ಕ್ರಿಯಾರೂಪ ತಾಳುವುದೇ ಒಂದು ಕ್ರಾಂತಿ. ಏಕೆಂದರೆ ಸಕಲರಿಗೆ ಲೇಸಾಗುವುದು ಕೆಲವರಿಗೆ ಪಥ್ಯವೆನಿಸಿದರೆ, ಕೆಲವರಿಗೆ ಅಪಥ್ಯ ವೆನಿಸುತ್ತದೆ. ನಿಸರ್ಗದ ಈ ಕ್ರಾಂತಿಯಿಂದಾಗಿ ಬದಲಾಗಿ ಬೋಳಾದ ಗಿಡ ಮರ ಮತ್ತೆ ಹಸಿರು ತುಂಬಿ ಹೂವು ಕಾಯಿ ಕಳೆದುಂಬಿ ನಿಲ್ಲುತ್ತವೆ. ಹಾಗೆಯೇ ಈ ಬಸವ ಕ್ರಾಂತಿಯಿಂದಾಗಿ ಉಸಿರು ಕಳಕೊಂಡವರು ಮತ್ತೆ ಉಸಿರು ಪಡೆಯುತ್ತಾರೆ. ಹೇಳ ಹೆಸರಿಲ್ಲದವರು ಹೆಸರು ಪಡೆಯುತ್ತಾರೆ. ಶರಣರೆಂಬುವರು ಬಸವ ಕ್ರಾಂತಿಯ ಸೃಷ್ಟಿ ಎನ್ನಬಹುದು ! ಅಮಾಯಕ, ಅಲಕ್ಷಿತ, ದಲಿತ, ದುರ್ಬಲರೆಂಬವರಿಂದಲೇ ಒಂದು ಹೊಸ ಸಮಾಜ ನಿರ್ಮಾಣವಾಗುವಂತೆ ಮಾಡಿದ್ದು ಬಸವಣ್ಣನ ಸದಿಚ್ಛೆಗೆ ಹಾಗೂ ಮುತ್ಸದ್ದಿತನಕ್ಕೆ ಸಾಕ್ಷಿಯಾಗಿದೆ. ನಿಷ್ಕಳಂಕ, ನಿರ್ಮೋಹ, ನಿರಾಳ ಚಾರಿತ್ರದಿಂದ ಹೀನ ಕುಲದವರಾದ ವ್ಯಾಸ, ಅಗಸ್ತ್ಯ, ದೂರ್ವಾಸ ಮೊದಲಾದವರು ಮಹಾಋಷಿಗಳಾಗ ಲಿಲ್ಲವೇ. ಅದೇ ರೀತಿ ಹರಳಯ್ಯ, ಕಕ್ಕಯ್ಯ, ಮಾದಾರ ಚನ್ನಯ್ಯ, ಅಂಬಿಗರ ಚೌಡಯ್ಯ ಮೊದಲಾದವರು ಸಚ್ಚಾರಿತ್ರ್ಯದಿಂದ ಶುದ್ಧ ಶರಣರಾಗಿ ಬೆಳಗಿದ್ದು, ಹೊಸ ಸಮಾಜ ಕಟ್ಟಲು ಸಾಧ್ಯವಾದುದು ಬಸವಕ್ರಾಂತಿಯಿಂದಾಗಿ !!

ಬಸವಾದಿ ಶರಣರು ಕಟ್ಟಿದ ಸಮಾಜದಲ್ಲಿವಿಪ್ರ ಮೊದಲು ಅಂತ್ಯಜ ಕಡೆಯಾಗಿ ದಾಸೀಪುತ್ರ ವೇಶ್ಯಾಪುತ್ರ ಹಾಗೂ ಎಲ್ಲ ಸ್ತ್ರೀ ಪುರುಷರು ಎಲ್ಲ ಮಾನವೀಯ ಹಕ್ಕು ಗಳಿಗೆ ಅರ್ಹತೆ ಪಡೆದವರಾಗುತ್ತಾರೆ. ಅಂಗದ ಮೇಲೆ ಲಿಂಗವುಳ್ಳವರೆಲ್ಲರೂ ಈ ಸಮಾನ ರೇಖೆಯಲ್ಲಿ ಬರುತ್ತಾರೆ. ಹಿಂದೆ ಯಾವುದೇ ಕುಲವಿರಲಿ, ಪೂರ್ವಾಶ್ರಮ ಕಳಕೊಂಡು ಶರಣ ಧರ್ಮದವರಾಗುತ್ತಾರೆ. ಆದರೆ ಅವರು ಹಿಂದಿನ ಉದ್ಯೋಗವನ್ನು

ಬಿಡಬೇಕೆಂದು ಕಟ್ಟುನಿಟ್ಟು ಇಲ್ಲ. ಎಲ್ಲ ಉದ್ಯೋಗಗಳಿಗೂ ಸಮಾನ ಮರ್ಯಾದೆ,ಎಲ್ಲ ಉದ್ಯೋಗದವರಿಗೂ ಸರಿ ಸಮಾನ ಗೌರವ ! ಯಾವುದೆ ಕಸಬು ಇರಲಿ, ಉದ್ಯೋಗ ವಿರಲಿ, ಸತ್ಯ ಶುದ್ಧ ಪ್ರಾಮಾಣಿಕ ದುಡಿತದಿಂದ ಅಸಂಗ್ರಹ ನೇಮಪಾಲನೆಯಿಂದ ಒಂದೇ ಹೆಸರನ್ನು ಪಡೆಯುತ್ತವೆ ಕಾಯಕವೆಂದು. ದುಡಿಮೆಯನ್ನು ಕಡ್ಡಾಯ ಗೊಳಿಸಿದ ಈ ಶರಣರು ಬದುಕಿಗೊಂದು ಸ್ವಾವಲಂಬ ಸುಭದ್ರ ಆಧಾರ ಕಲ್ಪಿಸಿ, ಸಮಾಜ ವಿಜ್ಞಾನಿಯೆನಿಸುತ್ತಾರೆ. ನುಡಿಯುವುದರಲ್ಲಿ, ನಡೆಯುವುದರಲ್ಲಿ, ದುಡಿ ಯುವುದರಲ್ಲಿ ಶುಭ್ರತೆ, ನೈತಿಕತೆ, ಸಾತ್ವಿಕತೆ, ಸತ್ಯಸಂಧತೆ, ಸಮಾನತೆಗಳನ್ನು ಕಟ್ಟುನಿಟ್ಟಾಗಿ ಆಚರಣೆಯಲ್ಲಿ ತಂದು ಮಾನವಜೀವನ ವಿಧಾನಕ್ಕೆ ಒಂದು ಹೊಸ ಅರ್ಥವನ್ನು ಕಲ್ಪಿಸುತ್ತಾರೆ. ಮಾನವ ಜನ್ಮವನ್ನು ಸಾರ್ಥಕಗೊಳಿಸುತ್ತಾರೆ.

ತಾನು ದುಡಿದದ್ದು ತನಗಷ್ಟೇ (ತನ್ನ ಕುಟುಂಬಕ್ಕೆ ಮಾತ್ರ) ಎಂದರೆ ಸ್ವಾರ್ಥ ವಾಗುತ್ತದೆ. ತಾನು ದುಡಿದ ಫಲದಲ್ಲಿ ತಕ್ಕಮಟ್ಟಿಗೆ ತನಗೆ ಆಧಾರವಾದ ಸಮಾಜಕ್ಕೂ ಸಂಸಾರಕ್ಕೂ ಸಲ್ಲಬೇಕು. ತೆರಿಗೆಯ ಮೂಲಕ ಸರಕಾರಕ್ಕೆ ಸಂದರೆ, ದಾಸೋಹದ (ಸೇವೆಯ) ಮೂಲಕ ಸಮಾಜಕ್ಕೆ ಸಲ್ಲಬೇಕು. ಹೀಗೆ ಕಾಯಕ ವ್ಯಕ್ತಿವಿಕಾಸವನ್ನು ಸಾಧಿಸಿದರೆ ದಾಸೋಹ, ಸಮಷ್ಟಿ (ಸಮೂಹ-ಸಮಸ್ತ ಸಮಾಜದ) ವಿಕಾಸವನ್ನು ಸಾಧಿಸುತ್ತದೆ. ಕಾಯಕ-ದಾಸೋಹ ಒಂದೇ ತತ್ವಕ್ಕೆ ಸಂಬಂಧಿಸಿದ ಎರಡು ಮುಖಗಳು. ಹೀಗೆ ಈ ಕಾಯಕ-ದಾಸೋಹ ತತ್ವ, ತಾತ್ವಿಕ ಜೀವನವನ್ನು ಸುವ್ಯವಸ್ಥಿತ, ಸುಸಂಸ್ಕೃತ, ಸ್ವಾವಲಂಬಿತ ಸಂತೃಪ್ತ ಬದುಕನ್ನಾಗಿ ರೂಪಿಸುತ್ತದೆ ಅಷ್ಟೇ ಅಲ್ಲ, ಪಾರಮಾರ್ಥಿಕ ಬದುಕಿಗೂ ಸೋಪಾನವಾಗಿ ಪರಿಣಮಿಸುತ್ತದೆ.

ದಲಿತ, ದುರ್ಲಕ್ಷಿತ, ಅಮಾಯಕ ಮೊದಲಾದ ಹಿಂದುಳಿದವರು ಮುಂದು ವರಿದವರಾಗಬೇಕೆಂದು ಇಂದಿನ ಸರಕಾರ ಅನೇಕ ಯೋಜನೆಗಳನ್ನು ಯೋಜಿಸಿ ಸವಲತ್ತು ಸೌಲಭ್ಯಗಳನ್ನು ಕಲ್ಪಿಸಿರುತ್ತದೆ. ಕೇವಲ ಆರ್ಥಿಕವಾಗಿ ಇಂದು ಇವರು ಮುಂದುವರಿಯಬೇಕು. ಸಂಸ್ಕಾರವಿಲ್ಲದ ಸವಲತ್ತು ಸಮಷ್ಟಿ ಜೀವನಕ್ಕೆ ಆಪತ್ತು ! ಈ ನಿಟ್ಟಿನಲ್ಲಿ ನಮ್ಮ ಸರಕಾರ ಅಷ್ಟೊಂದು ಗಮನಹರಿಸಿದಂತಿಲ್ಲ. ಆದರೆ, ಬಸವಣ್ಣ ಯೋಜಿಸಿದ ಸಮಾಜ ರಚನೆಯ ಪರಿಕಲ್ಪನೆಯೇ ಬೇರೆ. ಬದುಕಿನ ಬಹಿರಂಗ ವಿಕಾಸಕ್ಕೆ ದುಡಿದು ಪಡೆದ ದುಡ್ಡು ಭದ್ರತೆಯನ್ನು ಒದಗಿಸಿದರೆ, ಅಂತರಂಗ ವಿಕಾಸಕ್ಕೆ ನಡೆನುಡಿಯ ಸಂಸ್ಕಾರ ಭದ್ರತೆಯನ್ನು ಒದಗಿಸುತ್ತದೆ. ಈ ಉದ್ದೇಶದಿಂದ ಬಸವಾದಿ ಶರಣರು ಹುಟ್ಟುಹಾಕಿದ ಸಂಸ್ಕಾರ ಕೇಂದ್ರಗಳು ಎರಡು. ಒಂದು ದಾಸೋಹ ಮಹಾಮನೆ, ಇನ್ನೊಂದು ಅನುಭವ ಮಂಟಪ. ತ್ಯಾಗ ಮನೋಭಾವ ಹಾಗೂ ಸೇವಾನುಭವ ಪಡೆಯುವುದಕ್ಕೆ ದಾಸೋಹ ಮಹಾಮನೆ ಯಾದರೆ, ವಿದ್ಯಾನುಭವ, ಆತ್ಮಾನುಭವ, ಶಿವಾನುಭವ ಸಂಪಾದಿಸಿಕೊಳ್ಳುವುದಕ್ಕೆ

ಅನುಭವ ಮಂಟಪವಾಗುತ್ತದೆ. ಇವು ಸಂಸ್ಕಾರದ ಮಾಧ್ಯಮಗಳಾದಂತೆ ಆಂದೋಲನದ ಕ್ರಾಂತಿಯ ಮಾಧ್ಯಮಗಳಾಗಿ ಪರಿಣಮಿಸುತ್ತವೆ.

ಅದರಿಂದಾಗಿ ಮೇಲ್ವರ್ಗದವರು ಹರಿಹಾಯುತ್ತಾರೆ, ಉರಿಯುತ್ತಾರೆ, ಅಣಕವಾಡುತ್ತಾರೆ. ಆದರೆ ಅಂಥವರಿಗೆ ಬಸವಣ್ಣ ಕೊಟ್ಟ ಉತ್ತರ ಮಾರ್ಮಿಕವಾಗಿದೆ.

**"ತಿರುಕರೆನ್ನದಿರಿ ಭೋ ಎನ್ನ ತಂದೆಗಳನು**
**ತಿರುಕರೆನ್ನದಿರಿ ಭೋ ಎನ್ನ ಬಂಧುಗಳನು,**
**ತಿರುಕರೆನ್ನದಿರಿ ಭೋ ಎನ್ನ ದೇವರನು,**
**ತಿರುಕರೆನ್ನದಿರಿ ಭೋ ಎನ್ನ ಒಡೆಯರನು"**

ಎಂದು ಬಸವಣ್ಣ ನುಡಿದದ್ದು ಉಚಿತವಾಗಿದೆ. ಸೇರದವರಿಗೆ ಶರಣರು ತಿರುಕರೆಂದು ಎನಿಸಿದರೆ, ಬಸವಣ್ಣನಿಗೆ ಬಂಧು ತಂದೆಗಳಾಗಿ ಒಡೆಯ ದೇವರಾಗಿ ಪೂಜ್ಯರೆನಿಸುತ್ತಾರೆ. ದಾಸೋಹ ಮಹಾಮನೆಯೆಂಬುದು ಕೆಲಸಗೇಡಿಗಳಿಗೆ ಪುಕ್ಕಟೆ ಉಣಿಸುವ ಅನ್ನಛತ್ರವಲ್ಲ, ಎಲ್ಲರೂ ದುಡಿದು ಸಾಮೂಹಿಕವಾಗಿ ಹುಟ್ಟು ಹಾಕಿದಂಥ ಪ್ರಸಾದ ನಿಲಯುವದು, ಸೇವಾಮನೋಭಾವ ಬೆಳೆಸುವ ತರಬೇತಿ ಕೇಂದ್ರವದು. ಪ್ರಾಮಾಣಿಕವಾಗಿ ದುಡಿದು ಉಣ್ಣಬೇಕೆಂದು ಹೇಳಿದ ಬಸವಣ್ಣ ಪುಕ್ಕಟೆಯಾಗಿ ತಿನ್ನುಣಲು ಅವಕಾಶ ಕೊಡುವನು ಹೇಗೆ ? ತನ್ನ ತತ್ವಕ್ಕೆ ತಾನೇ ವಿರೋಧವಾಗಿ ಬಸವಣ್ಣ ನಡೆಯುವನು ಹೇಗೆ ? ಎಂದೋ ಆಗಿ ಹೋದ ಸಂಗತಿಗಳಿಗೆ ಇಲ್ಲದ ಅರ್ಥ ಹಚ್ಚಿ ಬಸವಣ್ಣನಿಗಾಗಲಿ ಶರಣರಿಗಾಗಲಿ ಅಪವಾದ ಕೊಡುವಲ್ಲಿ ಅರ್ಥವಿಲ್ಲ.

ಇಂಥ ಜಗತ್ತಿನ ಯಾವುದೇ ಭಾಗದಲ್ಲಿ ಎಂದೂ ಆಗದೆ ಇದ್ದ ಸುಧಾರಣೆಯ ಆಂದೋಲನ ೧೨ನೇ ಶತಮಾನದಲ್ಲಿ ಉದ್ಭವಿಸಿ ಮೇಲ್ವರ್ಗದವರಲ್ಲಿ ಬಿರುಗಾಳಿ ಎಬ್ಬಿಸಿದ್ದು ಸಹಜವೆ! ಅನ್ಯರ ದುಡಿಮೆಯ ಮೇಲೆ ಬದುಕುವ ಪರೋಪಜೀವಿಗಳಿಗೆ ಈ ಆಂದೋಲನ ಕುತ್ತಾಗಿ ಪರಿಣಮಿಸಿರಬೇಕು. ಅಂಥವರ ಕುತಂತ್ರದಿಂದಾಗಿ ಹಲವು ಕಾಲ ಈ ಹೊಸ ಆಂದೋಲನದ ಗತಿ ಪ್ರಗತಿಗೆ ಪೆಟ್ಟು ಬಿದ್ದಿರಬೇಕು. ಆದರೆ ಈ ಆಂದೋಲನ ಅಥವಾ ಬಸವಕ್ರಾಂತಿ ವಿಫಲವಾಯಿತೆಂದು ಅಪಸ್ವರವೆತ್ತುವುದರಲ್ಲಿ ಅರ್ಥವಿಲ್ಲ. ಈಗಲೂ ಬಸವಾದಿ ಶರಣರ ತತ್ವ ಜೀವಂತವಾಗಿದೆ. ಅದು ಬದುಕಿ ಬಾಳಿ (ಆಚರಿಸಿ) ಗಟ್ಟಿಗೊಳಿಸಿದ ತತ್ವ ಹೊರತಾಗಿ ಕಾಲ್ಪನಿಕವಾಗಿ ಕಟ್ಟಿದಂಥ ಪೊಳ್ಳು ತತ್ವವಲ್ಲ.

ಆದರೆ ಇಂದು ಅಂಥ ತತ್ವಾಧಾರಿತ ಸಮಾಜ ಎಲ್ಲಿ ಇದೆ ಎಂದು ಕೇಳಬಹುದು. ಅದಕ್ಕೆ ಉತ್ತರವಿಷ್ಟೆ, ಗಾಂಧೀ ತತ್ವ ಈ ಆಚರಣೆಯಲ್ಲಿ ಇಲ್ಲವೆಂದರೆ ಅದಕ್ಕೆ ಗಾಂಧೀ ಅನುಯಾಯಿಗಳು ತತ್ವನಿಷ್ಠವಾಗಿ ಪಾಲಿಸುತ್ತಿಲ್ಲವೆಂದು ಅರ್ಥ. ಆದರೆ, ಗಾಂಧೀ ತತ್ವ ಸತ್ವಹೀನವೆಂದಾಗಲಿ ನಿರರ್ಥಕವೆಂದಾಗಲಿ ಅರ್ಥವಲ್ಲ. ಹಾಗೆಯೆ, ಬಸವ ತತ್ವವನ್ನು

ಬಸವಾಭಿಮಾನಿಗಳು ಅನುಷ್ಠಾನದಲ್ಲಿ ತರಲು ಸೋಮಾರಿಗಳಾದ ಪಕ್ಷದಲ್ಲಿ ಅದು ಸತ್ವಹೀನವೆಂದಾಗಲಿ ಅನುಷ್ಠಾನಕ್ಕೆ ಅಸಾಧ್ಯವೆಂದಾಗಲಿ ಅರ್ಥವಲ್ಲ. ಕಡಲೆಯನ್ನು ತಿಂದು ಅರಗಿಸಿಕೊಳ್ಳಬೇಕಾದರೆ ಗಟ್ಟಿ ಹಲ್ಲುಬೇಕು, ಬಲಿಷ್ಠ ಪಾಚಕಾಂಗ ಬೇಕು. ಅದರಂತೆ, ಯಾವುದೆ ಸತ್ವಪೂರ್ಣ ತತ್ವವನ್ನು ಆಚರಿಸಬೇಕಾದರೆ, ಗಟ್ಟಿಮನಸ್ಸು ಬೇಕು. ಅಚಲ ಶ್ರದ್ಧೆ ಹಾಗೂ ನಿಶ್ಚಲ ನಿಷ್ಠೆಬೇಕು. ಯಾವ ತತ್ವಾಚರಣೆಗೆ ಬದ್ಧರಾಗಿ ಅಂದು ಶರಣರು ಜಾತ್ಯಾತೀತ ಸ್ವಯಂಪೂರ್ಣ, ಸಂತೃಪ್ತ ಸಮಾಜವನ್ನು ಕಟ್ಟಿದರೊ ಆ ಬಸವ ತತ್ವ ಕಾಲಾತೀತ, ಅಬಾಧಿತ, ಸ್ವೀಕಾರಯೋಗ್ಯ !!

೪.

# ಮೋದಾರ ಕೇತಯ್ಯನ ಜೀವನ ತತ್ವ

---

ಜಗತ್ತಿನ ಕ್ರಾಂತಿಯು ಇತಿಹಾಸದಲ್ಲಿಯು ಹನ್ನೆರಡನೆಯ ಶತಮಾನದಲ್ಲಿ ಜರುಗಿದ ಕಲ್ಯಾಣ ಕ್ರಾಂತಿಯುಃ ವಿನೂತನ ವಿಶಿಷ್ಟ ಕ್ರಾಂತಿಯಾಗಿದೆ. ಅಂದು ಮನುಷ್ಯರೆಂಬವರು ಮನುಷ್ಯರಿಂದ ಶೂದ್ರರಾಗಿ ಮನುಷ್ಯಲೋಕದಿಂದ ತಳ್ಳಲ್ಪಟ್ಟು, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸೌಕರ್ಯಗಳಿಂದ ವಂಚಿತರಾದ ಪರಿಣಾಮವಾಗಿ, ಬಹುಜನರ ತಳಮಳ–ಬಸವ ಮುಖದಲ್ಲಿ ಕ್ರಾಂತಿಯು ರೂಪತಾಳಿ ಅನೇಕ ಹೊಸ ತಿರುವುಗಳಿಗೆ ಕಾರಣವಾಗುತ್ತದೆ. ಮಲಗಿದವರು ಎಚ್ಚರಾಗುತ್ತಾರೆ ಬಹಿರಂಗದಲ್ಲಿ ಅಂತರಂಗದಲ್ಲಿ. ತಾವೂ ಈ ಲೋಕದಲ್ಲಿ ಬದುಕಲೆಂದು ಬಂದ ಮನುಷ್ಯರೆಂಬ ಅರಿವು ಅವರಲ್ಲಿ ಹುಟ್ಟುವುದೊಂದೇ ತಡ, ಅವರು ಮಾನವನಲ್ಲಿರುವ ಶಕ್ತಿ ಸರ್ವಸ್ವವನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಹಾಗೆ ಎಚ್ಚರಿದು ಮೈಕೊಡವಿಕೊಂಡು ಎದ್ದವರಲ್ಲಿ ಮೋದಾರ ಕೇತಯ್ಯನೂ ಒಬ್ಬ.

ಈ ರೀತಿ ಸಾರ್ವತ್ರಿಕ ಎಚ್ಚರ ಹುಟ್ಟಿಸುವಲ್ಲಿ ಬಸವಣ್ಣನವರ ಪಾತ್ರ ಮುಖ್ಯವಾದುದೆಂದು ಬೇರೆ ಹೇಳಬೇಕಾಗಿಲ್ಲ. ಬಸವಣ್ಣನವರ ಆಶಯ—ಈ ಜನರ ಸಾಮಾಜಿಕ ಆರ್ಥಿಕ ಮಟ್ಟವನ್ನು ಎತ್ತರಿಸುವುದಷ್ಟೆ ಆಗಿರಲಿಲ್ಲ. ಸಕಲರ ಅಂತರಂಗ ಬಹಿರಂಗ ಶುದ್ಧಿ ವೃದ್ಧಿಯಾಗಿ ಮಾನವ ಸ್ತರದಿಂದ ಶರಣಸ್ತರಕ್ಕೆ ಅವರು ಏರಬೇಕೆಂಬ ಸದಿಚ್ಛೆ ಬಸವಣ್ಣನದಾಗಿತ್ತು. ಆ ರೀತಿ ಮೈ ಕೊಡವಿಕೊಂಡು ಮೇಲೇಳುವುದಕ್ಕೆ ಅವರು ನೀಡಿದ ಮುಕ್ತ ಅವಕಾಶವೇ ಅಂದು ಬಹುವಿಧ ಕ್ರಾಂತಿಗೆ, ಬಹು ಜನರ ಬಹುಮುಖ ವಿಕಾಸಕ್ಕೆ ಕಾರಣವಾಗುತ್ತದೆ. ಆದರೂ

**"ಮಾಡುವಂತಿರಬೇಕು ಮಾಡದಂತಿರಬೇಕು**
**ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು"**

(ಬ. ವ. ೧೦೮೭)

ಇದು ಬಸವ ಧೋರಣೆ ಮತ್ತು ಪ್ರೇರಣೆ !

ನಿತ್ಯ ಅರುಣೋದಯದಲ್ಲಿ ಹುಲ್ಲು ಎಸಳಿನ ಮೇಲೆ ಪದ್ಮಪತ್ರಗಳ ಮೇಲೆ ಮಂಜುಹನಿ ಮುತ್ತಾಗಿ ಲಕಲಕಿಸಿ ಕಣ್ಮನ ಸೆಳೆಯುವುದುಂಟು. ಆ ಮುತ್ತು ಆಹ್ಲಾದವನ್ನು ಕೊಡಬಹುದಾದರೂ ನಿಜವಾದ ಮುತ್ತಲ್ಲವೆಂದು ಎಲ್ಲರಿಗೂ ಗೊತ್ತು, ಆದರೆ, ಬಸವಕ್ರಾಂತಿಯ ಅರುಣೋದಯದಲ್ಲಿ ಹನಿಹನಿ ಮುತ್ತಾದುದು ಸತ್ಯ,

ಹೊಳೆದದ್ದು ಸತ್ಯ. ಹಾಗೆ ಆವಾಗ ಬೆಳಗಿ ಬೆಳಕಾದ ನಿಜ ಮುತ್ತುಗಳೆಷ್ಟೋ, ಲೆಕ್ಕವಿಲ್ಲ ! ಅಂತಹ ಒಂದು ಮುತ್ತು ಮೇದಾರ ಕೇತಯ್ಯ.

ಭೀಮ ಕವಿಯ ಬಸವ ಪುರಾಣ ಮತ್ತು ಇತರ ಪುರಾಣಗಳು ಹಾಗೂ ಶೂನ್ಯ ಸಂಪಾದನೆ ಮೊದಲಾದ ಗ್ರಂಥಗಳಲ್ಲಿ ಮೇದಾರ ಕೇತಯ್ಯನ ಚರಿತ್ರೆ ಕುರಿತು ಪ್ರಸ್ತಾಪ ಬಂದಿರುತ್ತದೆ. ನಮಗೆ ಮುಖ್ಯವಾಗಿ ಆತನು ರಚಿಸಿದ ವಚನಗಳು, ಆತನ ಸಾಧನೆ ಸಿದ್ಧಿಗೆ ಪ್ರಮಾಣವಾಗಿವೆ. ಬೆಳಗಾವಿ ಜಿಲ್ಲೆಯ ಬಯಲುಹೊಂಗಲ ತಾಲೂಕಿನ ಬೇಲೂರು ಕೇತಯ್ಯನ ಗ್ರಾಮವೆಂದು ಕಂಡುಬರುತ್ತದೆ. ಯಾವ ಪ್ರಸಾರ ಮಾಧ್ಯಮ ಹಾಗೂ ಶೀಘ್ರ ಪ್ರವಾಸ ಸೌಕರ್ಯವಿಲ್ಲದ ಆ ಕಾಲದಲ್ಲಿ–ಬಸವದಾಸೋಹದ ಪುನರುಜ್ಜೀವನ ಪ್ರಭಾವಕ್ಕೊಳಗಾಗಿ ಗಾವುದ ಗಾವುದ ದಾರಿ ನಡೆದು ಕಲ್ಯಾಣಕ್ಕೆ ಬಂದ ಬಸವಾಸಕ್ತರಲ್ಲಿ ಮೇದಾರ ಕೇತಯ್ಯನೂ ಒಬ್ಬ.

ಮನುಷ್ಯ ಎಲ್ಲಿ ಹುಟ್ಟಿದ, ಬೆಳೆದ, ಗಳಿಸಿದ ಐಶ್ವರ್ಯವೆಷ್ಟು, ಪಡೆದ ಬಿರುದು ಬಾವಲಿ. ರಾರಾಜಿಸಿದ ಪದವಿಪಟ್ಟ ಎಂತಹವು ಎನ್ನುವುದರ ಮೇಲೆ ಮನುಷ್ಯನ ಘನತೆ ಗೌರವ ಅವಲಂಬಿಸಿಲ್ಲ. ಆದರೆ ತಾನು ಬದುಕಿದ ಅವಧಿಯಲ್ಲಿ ಆತ ಹೇಗೆ ಬದುಕಿದ, ಈ ಲೋಕದ ಜೀವಾತ್ಮರಿಗೆ ಯಾವ ಸೇವೆ ಸಲ್ಲಿಸಿದ, ಭೂಮಿಯ ಮೇಲೆ ಅಳಿಸಲಾಗದ ಎಂತಹ ಆದರ್ಶದ ಹೆಜ್ಜೆಯ ಹೆಗ್ಗುರುತುಗಳನ್ನು ಬಿಟ್ಟು ಹೋದ— ಮೊದಲಾದ ಕೃತಾರ್ಥ ಸಾಧನೆಗಳಿಂದ ಮನುಷ್ಯನ ಘನತ್ವ ಮತ್ತು ಶರಣತ್ವವನ್ನು ಗುರುತಿಸಬೇಕಾಗುವುದು. ಜಗತ್ತು ಸೃಷ್ಟಿಯಾದಂದಿನಿಂದ ಎಷ್ಟು ಜನ ಸಿರಿಗೆ ದೊರೆಯಾಗಿ, ಧರೆಗೆ ಒಡೆಯರಾಗಿ ತಮ್ಮ ಮಟ್ಟಿಗೆ ತಾವು ವೈಭವದಲ್ಲಿ ಮೆರೆದು ಹೋದವರಿದ್ದಾರೆ. ಆದರೆ ಅಂಥವರು ತಾವು ಆಶ್ರಯ ಪಡೆದ ಜಗತ್ತಿಗೆ ಏನನ್ನೂ ಕೊಡದೆ, ಮರೆವಿನ ಕತ್ತಲಲ್ಲಿ ಮುಳುಗಿ ಹೋಗಿದ್ದಾರೆ. ಎಲ್ಲರಿಗೂ ಒಪ್ಪುವಂಥ, ಎಲ್ಲರಿಗೂ ಸ್ವೀಕಾರಯೋಗ್ಯವಾಗುವಂಥ ಸಾವಿಲ್ಲದ ಬದುಕನ್ನು ಈ ಭೂಮಿಯ ಮೇಲೆ ಬಿಟ್ಟು ಹೋದ—ಕೇತಯ್ಯನಂಥ ಶರಣರು ನಮಗೆ ಇಂದಿಗೂ ಮಾನ್ಯರು, ಪೂಜ್ಯರು.

ಜೀವನವನ್ನು ಬದುಕುವ ರೀತಿಯಲ್ಲಿಯೆ ತತ್ವವಿದೆ. ಬದುಕು ಉಳಿಯುವಂತೆ ಬದುಕಿದ ಧ್ಯೇಯ ಧೋರಣೆಯೆ ಜೀವನ ತತ್ವ. ಬಾಳಿದ ರೂಪ ಸ್ವರೂಪ ಜೀವನ ತತ್ವ. ಮನುಷ್ಯನ ಜೀವನ ಶಾಶ್ವತವಲ್ಲ, ಜೀವನತತ್ವ ಶಾಶ್ವತ. ಜೀವನ ತತ್ವದಲ್ಲಿಯೆ ಮಾನವೀಯ ಮೌಲ್ಯವಿದೆ. ಹಾಗೇ ಮೇದಾರ ಕೇತಯ್ಯನಲ್ಲಿ ಒಂದು ಜೀವನ ತತ್ವವಿದೆಯೆ ? ಆ ತತ್ವಕ್ಕೊಂದು ಮೌಲ್ಯವಿದೆಯೆ? ಎಂಬ ಪ್ರಶ್ನೆಗೆ ಅವನ ವಚನಗಳೆ ಉತ್ತರಿಸುತ್ತಿವೆ ?

"ಒಂದು ಬಿದಿರಿಗೆ ಕವೆ ಮೂರು, ಆ ಕವೆಯೊಳಗೆ ಲಕ್ಷ ಸಿಬಿರು
ಮೂರು ಕವೆಯು ಕೊಚ್ಚಿಸಿ, ಲಕ್ಷ ಸಿಬಿರು ಬಿಡಿಸಿ
ಸೀಳಿದ ಬಿದಿರ ಹೊರೆ ಹೊರೆಯಲ್ಲಿ ನೆಯ್ದೊಡೆ
ತೊಟ್ಟಿಲ ಸಂದು ಕಾಣದಂತೆ
ನಾಲ್ಕು ಕಾಲನಿಕ್ಕಿ ಅಂಬ ಅಂದವಾದ ತೊಟ್ಟಿಲ ದಂಡೆಯನಿಕ್ಕಿ ಕಟ್ಟುವುದಕ್ಕೆ
ಶ್ರುತ ದೃಷ್ಟವೆಂಬೆರಡು ದಾರದಲ್ಲಿ ತೊಟ್ಟಿಲ ಕಟ್ಟಿ
ಗೌರೇಶ್ವರ ಲಿಂಗಕ್ಕೆ
ಹುಟ್ಟುಗೆಟ್ಟು ಹೋಗೋ ಎಂದು ಜೋಗುಳವಾಡಿದೆ"

ಕಾಯಕಾನುಭವದೊಂದಿಗೆ ಆತ್ಮಾನುಭವ ಬೆರೆತಂಥ ಕೇತಯ್ಯನ ವಚನದಿಂದ ಅವನ ಜೀವನತತ್ವವನ್ನರಿಯಬಹುದಾಗಿದೆ. ೧೨ ನೆಯ ಶತಮಾನದ ಶರಣರು ಕಾಯಕಯೋಗಿಗಳು. ಕಾಯಕದಲ್ಲಿ ಬದುಕನ್ನು ತೀಡಿ, ಬದುಕಿನಲ್ಲಿ ಕಾಯಕ ಒಂದುಗೂಡಿ, ಬದುಕ–ಕಾಯಕವನ್ನು ಲೌಕಿಕದಿಂದ–ಅಲೌಕಿಕಕ್ಕೆ ಎತ್ತರಿಸಿ, ಕಾಯಕವೆ ಜೀವನತತ್ವವನ್ನಾಗಿ ಬದುಕಿದ ಶರಣರಲ್ಲಿ ಕೇತಯ್ಯನೂ ಒಬ್ಬ. ಇಲ್ಲಿ ಆತ್ಮಾನುಭವ ಕಾವ್ಯದ ಬೆಡಗಿನಲ್ಲಿ ಒಪ್ಪುಗೊಂಡು ಸುಂದರ ವಚನವಾಗಿ ಮೂಡಿ ಅನುಭಾವವನ್ನು ಹೃದ್ಯವಾಗಿ ಹೇಳುವಲ್ಲಿ ಸಾರ್ಥಕವಾಗಿದೆ.

ಇಲ್ಲಿ ಬಿದಿರು, ಮೂರು ಕವೆ, ಲಕ್ಷ ಸಿಬಿರು–ಮೇದಾರ ಕಾಯಕಕ್ಕೆ ಸಂಬಂಧಿಸಿದ ವಸ್ತುಗಳು. ಈ ವಸ್ತುಗಳಿಂದ ಬುಟ್ಟಿಯನ್ನು ಹೆಣೆಯಬಹುದು, ತೊಟ್ಟಿಲನ್ನು ರಚಿಸಬಹುದು. ಇದು ಬದುಕುವುದಕ್ಕೆ ಅಗತ್ಯವಾದ ಕಾಯಕ. ಬಹಿರಂಗ ಬದುಕನ್ನಷ್ಟೇ ಅನುಲಕ್ಷಿಸಿ ಶರಣರು ಕಾಯಕವನ್ನು ಆಶ್ರಯಿಸಲಿಲ್ಲ. ಬಹಿರಂಗ ಬದುಕನ್ನು ಭದ್ರಗೊಳಿಸಿ ಅಂತರಂಗ ಬದುಕನ್ನು ಪರಿಶುದ್ಧಗೊಳಿಸಿ, ಅಲ್ಲಿ (ಪರಮಾತ್ಮನ ಚುಳುಕಾದ ರೂಪವೆನಿಸಿದ) ಆತ್ಮಲಿಂಗ ನೆಲೆಸುವುದಕ್ಕೆ ಯೋಗ್ಯವಾಗುವಂತೆ ನೋಡಿಕೊಳ್ಳುವುದು ಶರಣರು ಗೈವ ಕಾಯಕದ ಮಾಟವಾಗಿತ್ತು. ಈ ನಿಟ್ಟಿನಲ್ಲಿ ಈ ವಚನವನ್ನು ತೂಗಿ ನೋಡುವುದು ಅಗತ್ಯವಾಗಿದೆ.

ಬಿದಿರು ದೇಹವನ್ನು, ಮೂರುಕವೆ* ಮಲತ್ರಯಗಳನ್ನು, ಲಕ್ಷ ಸಿಬಿರು ಕಾಮ ಕ್ರೋಧಾದಿ ಆತಂಕ ಉಪಾಧಿಗಳನ್ನು ಸಂಕೇತಿಸುವ ಪದಗಳು. ಈ ದೇಹ ಬೆಳೆದಂತೆ ದೇಹಕ್ಕಂಟಿಕೊಂಡ ಮಲತ್ರಯಗಳೂ ಬೆಳೆಯುತ್ತವೆ. ಮೂರು ಕವೆಗಳನ್ನು ಕೊಚ್ಚಿಸುವುದೆಂದರೆ ಮಲತ್ರಯಗಳಿಂದ ಮುಕ್ತನಾಗುವುದು. ದೇಹ ದೇಗುಲವಾಗಬೇಕಾದರೆ ಈ ಪರಿಶುದ್ಧಿ ಅಗತ್ಯ. "ಲಕ್ಷ ಸಿಬಿರು" ಇಲ್ಲಿ ಲಕ್ಷ ಪದದಲ್ಲಿ ಶ್ಲೇಷ ಇದೆ. ಒಂದು ಸಂಖ್ಯೆ

* ೧. ಆಣವ ಮಲ : ಜೀವಾತ್ಮ ಬೇರೆ ಪರಮಾತ್ಮ ಬೇರೆ ಎಂಬ ಭ್ರಮೆ.
೨. ಮಾಯಾ ಮಲ : ತಾನೆ ಸರ್ವಜ್ಞ, ತನಗಾಗಿ ಎಲ್ಲ ಎಂಬ ಭ್ರಮೆ.
೩. ಕಾರ್ಮಿಕ ಮಲ : ಕೇಡು. ಪೀಡೆ ಕರ್ಮಫಲವೆಂಬ ಭ್ರಮೆ.

ಯನ್ನೂ, ಇನ್ನೊಂದು ಏಕಾಗ್ರತೆಯನ್ನು ಧ್ವನಿಸುತ್ತವೆ. ಸಿಬಿರನ್ನು ಬಿಡಿಸುವಾಗ ಲಕ್ಷ್ಯಬೇಕು. ಅದರಂತೆ ಉಪಾಧಿಗಳನ್ನು ನಿವಾರಿಸುವಾಗಲೂ ಲಕ್ಷ್ಯಬೇಕು. ಲಕ್ಷ್ಯ (ಏಕಾಗ್ರತೆ) ತಪ್ಪಿದರೆ, ಸಿಬಿರು ನೆಡುತ್ತದೆ, ಉಪಾಧಿ ಬಾಧಿಸುತ್ತವೆ.

ಅಂದವಾದ ತೊಟ್ಟಿಲ ಕಟ್ಟುವುದಕ್ಕೆ ನಾಲ್ಕು ಕಾಲು ಜೋಡಿಸುವುದೂ ಅಗತ್ಯ. ಚಿತ್ತ, ಬುದ್ಧಿ, ಅಹಂಕಾರ, ಮನ – ಈ ನಾಲ್ಕು ಅಂತಃಕರಣಗಳನ್ನು ಅಂಕಿತದೊಳಗಿಟ್ಟು, ಅರ್ಪಿತ, ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತಗಳನ್ನು ಅನುಷ್ಠಾನದಲ್ಲಿ ತಂದಲ್ಲದೆ ಏಕಾಗ್ರತೆ ಸಾಧ್ಯವಿಲ್ಲ. ಈ ದೇಹವೆಂಬ ತೊಟ್ಟಿಲಕ್ಕೆ ನಾಲ್ಕು ಅರ್ಪಿತಗಳೇ ನಾಲ್ಕು ಕಾಲುಗಳು, ಅನುಭವವೆಂಬ ದಾರ, ಅಂತಃಸಾಕ್ಷಿಯೆಂಬ ದಾರೆ–ಎರಡನ್ನು ಹುರಿಗೊಳಿಸಿ ತೊಟ್ಟಿಲ ಕಟ್ಟಿದಲ್ಲಿ ಭದ್ರವಾಗುತ್ತದೆ. ಹೀಗೆ ನಯ ನಾಜೂಕಿನಿಂದ ತೊಟ್ಟಿಲ ಕಟ್ಟಿ, ಅಲ್ಲಿ ಲಿಂಗಯ್ಯನನ್ನು (ಆತ್ಮಲಿಂಗವನ್ನು) ಮಲಗಿಸಿ ಜೋಗುಳ ಪಾಡಿ ತೂಗುವ ಕಲೆ ಮೇದಾರ ಕೇತಯ್ಯನಿಗಷ್ಟೇ ಗೊತ್ತು. ಇಲ್ಲಿ ಜೋಗುಳ ಪಾಡುವುದೆಂದರೆ ತನ್ನನ್ನು ತಾನು ಮರೆತು ನೆನೆಯುವುದು, ಧ್ಯಾನಿಸುವುದು. ಅಂದಾಗ ಜೀವಾತ್ಮ ಪರಮಾತ್ಮನಾಗುವುದು ಸಾಧ್ಯ. ಅದನ್ನೆ ಲಿಂಗಾಂಗ ಸಾಮರಸ್ಯವೆಂದು ಕರೆಯುವುದು. ಅಂಗ ಲಿಂಗವಾದ ಮೇಲೆ ಹುಟ್ಟು ಇಲ್ಲ, ಸಾವು ಇಲ್ಲ, ಹುಟ್ಟುಗೆಟ್ಟು ಹೋಗುವುದೆಂದರೆ ಇದೆ, ಕಾಯಕ ಮಾಡುವ ಮಾಟದಲ್ಲಿ ಹುಟ್ಟುಗೆಟ್ಟು ಹೋಗುವುದನ್ನು ಸಾಧಿಸಿರುವಲ್ಲಿ ಮೇದಾರ ಕೇತಯ್ಯನ ಜೀವನತತ್ವ ಅಡಕವಾಗಿದೆ.

ಕೇತಯ್ಯ ಮೊದಲಾದ ಶರಣರಿಗೆ ಕಾಯಕವೊಂದು ಬರಿ ಉಪಜೀವನಕ್ಕೆ ಸಾಧನೆಯಾಗಿರಲಿಲ್ಲ. ಬಹಿರಂಗವನ್ನು ಪೋಷಿಸುವ ಕಾಯಕವೂ ಅಹುದು, ಅಂತರಂಗವನ್ನು ಪೋಷಿಸುವ ಕಾಯಕವೂ ಅಹುದು. ಲೌಕಿಕ ಪಾರಮಾರ್ಥ ಎರಡನ್ನೂ, ತಾವು ಕೈಕೊಂಡ ಕಾಯಕದ ಮೂಲಕ, ಸಾಧಿಸುವ ಕಲೆ ಶರಣರಿಗೆ ಕರಗತವಾಗಿತ್ತು. ಹೀಗೆ ಎರಡನ್ನೂ ಸಾಧಿಸಿಕೊಂಬ ಬದುಕಿನ ಕಲೆಯಲ್ಲಿ ಮೇದಾರ ಕೇತಯ್ಯನ ಜೀವನ ತತ್ವ ತುಂಬಿಕೊಂಡಿದೆ.

**"ಇಂದ್ರಿಯಂಗಳ ಕೊಂದಿಹೆನೆಂದಡೆ ಅವು ಕಂದರ್ಪನ ಹಂಗು**  
**ಕಂದರ್ಪನ ಕೊಂದಿಹೆನೆಂದಡೆ ಅವು ಕಂಗಳ ಲಾಭ**  
**ಕಂಗಳ ಮುಚ್ಚಿಯಲ್ಲದೆ ಲಿಂಗವ ಕಾಣಬಾರದು !**  
**ಅದು ನಿರಂಗಗಲ್ಲದೆ**  
**ಜಗದ ಹಂಗಿನವರಿಗಿಲ್ಲ ಎಂದೆ ಗೌರೇಶ್ವರಾ".**

ಇಂದ್ರಿಯಗಳನ್ನು ಹತ್ತಿಕ್ಕಿ ಪಾರಮಾರ್ಥಕ್ಕೊಡೆಯನಾಗಬೇಕೆಂಬುದು ಒಂದು ವಾದವುಂಟು. ಶಿವಶರಣರ ವಾದ–ಹತ್ತಿಕ್ಕುವುದಲ್ಲ, ಪರಿವರ್ತಿಸುವುದು. ಯಾವುದನ್ನು ಕೊಂದರೂ ಅದು ಹಿಂಸೆ. ದಯವೇ ಮೂಲವೆನಿಸಿದ ಧರ್ಮಕ್ಕೆ ಹಿಂಸೆ ಸಲ್ಲದು. ಕಾಮನ ಹಂಗಿನಲ್ಲಿಯೇ ಹುಟ್ಟು ಪ್ರಾರಂಭವಾಗಿ ಬದುಕು ಬೆಳೆದು ಮುಕ್ತಾಯವಾಗು

ತ್ತದೆ. ಕಾಮನ ಕೊಲ್ಲಬೇಕೆಂದರೂ, ಕಾಮ ಮನಸಿಜ. ಕೊಲ್ಲುವುದಂತೂ ಸಲ್ಲದು. ನಿಗ್ರಹಿಸುವುದು ಅಥವಾ ಪರಿವರ್ತಿಸುವುದು. ನಿಗ್ರಹಿಸುವುದಕ್ಕಿಂತ ಪರಿವರ್ತಿಸುವುದು ಲೇಸು. ಕಣ್ಣು ತನ್ನ ಲಾಭದತ್ತ ಅಂದರೆ ವಿಷಯದತ್ತ ಹರಿಯುವುದು ಅದರ ಪ್ರಕೃತಿ ಗುಣ. ಹೀಗೆ ಕಣ್ಣು ಚಂಚಲವಾಗುವುದಕ್ಕೆ ಮನವೇ ಕಾರಣ. ವಿಷಯದತ್ತ ಹರಿಯುವ ಮನವನ್ನು ಲಿಂಗದತ್ತ ಹರಿಯುವಂತೆ ಮಾಡುವುದನ್ನೇ ಸಾಧಿಸಿಕೊಂಡದ್ದು ಶರಣರ ದೊಡ್ಡ ವಿಜಯ.

ಕಣ್ಣು ಮುಚ್ಚುವುದೆಂದರೆ ಮುಚ್ಚುವುದಕ್ಕೆ ತೆರೆಯುವುದಕ್ಕೆ ಕಾರಣವಾದ ಮನವನ್ನೆ ಮುಚ್ಚುವುದು. ಅಂದರೆ ಬಹಿರ್ಮುಖವಾದ ಮನವನ್ನು ಅಂತರ್ಮುಖಿ ಯಾಗುವಂತೆ ಮಾಡುವುದು. ಕಣ್ಣಿಗೆ ಪ್ರಚೋದನೆ ನೀಡುವ ಮನ ಅಂತರ್ಮುಖವಾದ ಮೇಲೆ, ಕಣ್ಣೂ ಅಂತರ್ಮುಖ ಹೊಂದುವುದು. ಮನದ ಹಿಂದೆ ಮನವಾಗಿ ಚಲಿಸು ವಾತ ಲಿಂಗ, ಕಣ್ಣ ಹಿಂದೆ ಕಣ್ಣಾಗಿ ತೇಜವಿತ್ತವ ಲಿಂಗ. ಅಂತರ್ಮುಖವಾಗುವು ದೆಂದರೆ ಹಿಂದಿರುವ ಲಿಂಗದಲ್ಲಿ ಸಂಗ ಬೆಳೆಸುವುದು. ಹೀಗೆ ಲಿಂಗಸಂಗ ಮಾಡಿದ ಮೇಲೆ ಮನವೂ ಲಿಂಗ, ಕಣ್ಣೂ ಲಿಂಗ, ತಾನೂ ಲಿಂಗ, ಅಂಗ ಗುಣ ಕಳಚಿ ನಿರಂಗನಾಗುವ ಕಲೆ ಕೇತಯ್ಯನಂಥ ಶರಣರಿಗೆ ಮಾತ್ರ ಸಾಧ್ಯ. ಈ ರೀತಿ ನಿರಂಗನಾಗಿ ಲಿಂಗವಾಗಿ ಕೇತಯ್ಯ ನಿಂತದ್ದು ಕಾಯಕದ ಮೂಲಕ. ಈ ಬಗೆಯ ಕಾಯಕ ಸಿದ್ಧಿಯಲ್ಲಿ ಜೀವನ ತತ್ವ ಅಡಕವಾಗಿದೆ.

**"ಅರಿವಿನ ಕುಳವನರಿಯೆ ಮರಹಿನಕೆರನನರಿಯೆ**
**ಅರಿವು ಮರೆಹಳಿದ ಗೌರೇಶ್ವರ ಲಿಂಗಕ್ಕೆ**
**ಅರಿವೇ ಅರ್ಪಿತ ಮರವೇ ಅನರ್ಪಿತ**
**ಮೊರನ ಹೆಣೆವ ಗೌರ ನಾನೆತ್ತ ಬಲ್ಲೆನಯ್ಯಾ"**

ಇದೂ ಒಂದು ಕೇತಯ್ಯನ ಮಹತ್ವದ ವಚನ. ದೇಹವನ್ನು ದುಡಿಸಿಕೊಳ್ಳುವುದು ದುಡಿಮೆ. ದುಡಿಮೆಯ ಫಲ ದುಡ್ಡು. ಸತ್ಯ ಶುದ್ಧಿಯನ್ನು ದುಡಿಸಿಕೊಳ್ಳುವುದು ಕಾಯಕ. ಕಾಯಕದ ಫಲ ಅರಿವು ಆನಂದ! ಮೊದಮೊದಲು ಕಾಯಕದ ದಾರಿ ಸಿಕ್ಕದು, ಕಾಯಕ ಸಾಧಿಸಿದರೆ ಅರಿವಿಗೆ ದಾರಿ ಸಿಕ್ಕಂತೆ. ಈ ಮರ್ಮವರಿಯದೆ ಕೇತಯ್ಯನೂ ಮೊದಮೊದಲು ಕಷ್ಟಕ್ಕೆ ಗುರಿಯಾಗಿರಬೇಕು. ಆದರೆ ಶ್ರದ್ಧೆ ನಿಷ್ಠೆಯಾಗಿ, ನಿಷ್ಠೆ ಅವಧಾನವಾದ ಮೇಲೆ ಯಾವುದೂ ಅಸಾಧ್ಯವಲ್ಲ. ಹೀಗೆ ಒಮ್ಮೆ ಕೇತಯ್ಯ ಮರಹನ್ನು ಹಿಂದಿಕ್ಕಿ ಅರಿವಿಗೊಡೆಯನಾಗುತ್ತಾನೆ. ಅರಿವನ್ನು ಮರಹನ್ನೂ ಮೀರಿ ನಿಲ್ಲುತ್ತಾನೆ. ಅರಿವು-ಮರಹು ಅಳಿದು ಉಳಿದದ್ದು ಲಿಂಗವೆಂಬುದನ್ನು ಅರಿಯುತ್ತಾನೆ. ಹೀಗೆ ಅರಿವು ಮರಹಳಿದು, ತಾನೂ ಲಿಂಗವಾಗುತ್ತಾನೆ. ಅರಿವಿನಿಂದ ಮಾಡಿದ ಭಕ್ತಿ ಲಿಂಗಕ್ಕೆ ಅರ್ಪಿತ, ಮರಹಿನಿಂದ ಮಾಡಿದ್ದು (ಮನಸಿಲ್ಲದೆ ಮಾಡಿದ್ದು)

ಅನರ್ಪಿತ–ಎಂಬ ರಹಸ್ಯವನ್ನು ತಾನು ತಿಳಿಯಲಾರೆನೆಂದು ಹೇಳಿ ಲೋಕಕ್ಕೆ ತಿಳಿಸು ತ್ತಾನೆ. ತಿಳಿದವರು ತಿಳಿದೆನೆಂದು ಹೇಳುವುದಿಲ್ಲ. ತಿಳಿದೆನೆಂದು ಹೇಳುವವರು ತಿಳಿದಿರುವುದಿಲ್ಲ.

"ಎನ್ನ ಚಿತ್ತಕ್ಕೆ ಆಚಾರಲಿಂಗವಾದಾತ ಬಸವಣ್ಣ
ಎನ್ನ ಬುದ್ಧಿಗೆ ಗುರುಲಿಂಗವಾದಾತ ಬಸವಣ್ಣ
ಎನ್ನ ಅಹಂಕಾರಕ್ಕೆ ಶಿವಲಿಂಗವಾದಾತ ಬಸವಣ್ಣ
ಎನ್ನ ಮನಕ್ಕೆ ಜಂಗಮಲಿಂಗವಾದಾತ ಬಸವಣ್ಣ
ಎನ್ನ ಜ್ಞಾನಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ
ಎನ್ನ ಭಾವಕ್ಕೆ ಮಹಾಲಿಂಗವಾದಾತ ಬಸವಣ್ಣ
ಎನ್ನ ಸ್ಥೂಲ ತನುವಿಂಗೆ ಇಷ್ಟಲಿಂಗವಾದಾತ ಬಸವಣ್ಣ
ಎನ್ನ ಸೂಕ್ಷ್ಮ ತನುವಿಂಗೆ ಪ್ರಾಣಲಿಂಗವಾದಾತ ಬಸವಣ್ಣ
ಎನ್ನ ಕಾರಣ ತನುವಿಂಗೆ ಭಾವಲಿಂಗವಾದಾತ ಬಸವಣ್ಣ
ಇಂತೆಂದರಿದೆನಾಗಿ ಗೌರೇಶ್ವರ ಲಿಂಗದಲ್ಲಿ ಸುಖಿಯಾದೆನು"

ಸಂಗನಬಸವಣ್ಣನೆ ಗುರುವೆನಗೆ, ಸಂಗನಬಸವಣ್ಣನೆ ಪರವೆನಗೆ ಎಂದು ಮೋದಾರ ಕೇತಯ್ಯ ತನ್ನ ಇನ್ನೊಂದು ವಚನದಲ್ಲಿ ಹೇಳಿಕೊಂಡಿದ್ದಾನೆ. ಗುರುವಾದ ಬಸವಣ್ಣನೆ ಒಂದೊಂದು ಅಂಗಕ್ಕೆ ಒಂದೊಂದು ಲಿಂಗವಾಗಿ. ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿತ್‌ಶಕ್ತಿ – ಮೊದಲಾದ ಶಕ್ತಿಯನ್ನು ಕೊಟ್ಟ ವಿವರ ಈ ವಚನದಲ್ಲಿ ಉಲ್ಲೇಖವಾಗಿದೆ. ಷಟ್‌ಸ್ಥಲದಲ್ಲಿ ಒಂದೊಂದೆ ಮೆಟ್ಟಿಲೇರಿ ಐಕ್ಯಸ್ಥಲವನ್ನು ಮುಟ್ಟುವುದಕ್ಕೆ ಈ ಶಕ್ತಿಸಂಚಯ ಅಗತ್ಯ ವೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಬಸವಣ್ಣನೆ ತನ್ನ ಅಧ್ಯಾತ್ಮ ವಿಕಾಸಕ್ಕೆ ಗುರು ವಾದುದನ್ನು ಎರಡು ಮೂರು ವಚನಗಳಲ್ಲಿ ಕೇತಯ್ಯ ಹೇಳಿಕೊಂಡಿರುವುದನ್ನು ನೋಡಿದರೆ ಅವನ ಪ್ರಾಮಾಣಿಕತೆಯ ಬಗೆಗೆ ಮನದಟ್ಟಾಗುತ್ತದೆ.

ಬಿದಿರು ಕಡಿಯುವಾಗ ಒಮ್ಮೆ ಜಾರಿ ಬಿದ್ದು, ಬಿದಿರಿನ ತುದಿ ಎದೆಯಲ್ಲಿ ನಟ್ಟು ಕೇತಯ್ಯ ಪ್ರಾಣ ನೀಗಿರುವ ಸಂಗತಿ ತಿಳಿದೊಡನೆ ಬಸವಣ್ಣನೂ ಪ್ರಾಣ ನೀಗಿದ ಕತೆ ಹಲವು ಕಾವ್ಯಗಳಲ್ಲಿ ಬರುತ್ತದೆ. ಈ ಪವಾಡ ಏನೇ ಇರಲಿ, ಕೇತಯ್ಯನಿಗೆ ಬಸವಣ್ಣ ಪ್ರಾಣಲಿಂಗಸ್ವರೂಪವಾದುದನ್ನು ಇದು ತಿಳಿಸುತ್ತದೆ. ಕೇತಯ್ಯನಿಗಷ್ಟೇ ಏಕೆ ಬಸವಣ್ಣ ಸಕಲ ಶರಣರಿಗೆ ಸಹ–ಪ್ರಾಣಲಿಂಗಸ್ವರೂಪವಾಗಿದ್ದನೆಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ. ಹೀಗಿದ್ದೂ ಮಾವಿನ ಕಾಯಿಯೊಳಗೆ ತಾನೊಂದು ಎಕ್ಕೆಯ ಕಾಯಿ ಯೆಂದು ಬಸವಣ್ಣ ಹೇಳಿಕೊಂಡಿರುವುದು ಅವನ ಹಿರಿಮೆಗೆ ಸಾಕ್ಷಿಯಾಗಿದೆ. ಅಲ್ಲಮ ಪ್ರಭು ಸಹ ಬಸವಣ್ಣನೆ ತನಗೆ ಆರಾಧ್ಯನೆಂದು ಆರೂಢ ದಾಸೋಹಿಯೆಂದು ಗುರು ವೆಂದು ಮುಕ್ತ ಮನದಿಂದ ಹೇಳಿದ್ದನ್ನೂ ನೋಡಿದರೆ, ಬಸವಣ್ಣನ ಸಾಧನೆಯ ಅಗಾಧತೆಯ ಅರಿವಾಗುತ್ತದೆ.

ಕೇತಯ್ಯನ ಜೀವನ ತತ್ವಕ್ಕೆ ಪೂರಕವಾಗುವ ಒಂದು ಘಟನೆ ಜರುಗುತ್ತದೆ. ಆತನು ಬಿದಿರು ಕಡಿಯುವಾಗ ಹೊನ್ನ ರಾಶಿ ಸುರಿಯುತ್ತದೆ. ಎಷ್ಟು ಬಿದಿರು ಕಡಿದರೂ ಅದೇ ಹಾಡು. ಹೊನ್ನ ರಾಶಿ ನೋಡಿ ಜಿಗುಪ್ಸೆ ಹೊಂದುವನಲ್ಲದೇ ಅದನ್ನವನು ಮುಟ್ಟುವುದಿಲ್ಲ. ನೇಮದ ಕೂಲಿಯ ಬಿಟ್ಟು ಹೇಮದಾಶೆಗೆ ಮಾರು ಹೋಗುವವನಲ್ಲ ಶರಣ. ಈ ಘಟನೆ ವಾಸ್ತವವಲ್ಲವಾದರೂ, ಅದರ ಹಿನ್ನೆಲೆಯಲ್ಲಿ ಒಂದು ತತ್ವ ಅಡಕವಾದಂತಿದೆ. ಅತಿ ಆಶೆಯಲ್ಲಿ ಮನ ಕೊಚ್ಚಿಹೋದರೆ, ಕಾಯಕ ತತ್ವ ಕೊಚ್ಚಿ ಹೋಗುತ್ತದೆ. ಕಾಯಕತತ್ವಕ್ಕೆ ಹೊರತಾದುದು ಜೀವನ ತತ್ವಕ್ಕೆ ಹೊರತು. ಶರಣರಿಗೆ ತತ್ವ ಮುಖ್ಯವಲ್ಲದೆ ದ್ರವ್ಯವಲ್ಲ; ತೃಪ್ತಿ ಮುಖ್ಯವಲ್ಲದೆ ಕಾಂಚನದಿಂದ ಸಿಗುವ ಹುಸಿ ಸುಖವಲ್ಲ.

ಹೀಗೆ ಬಸವಕ್ರಾಂತಿಯ ಪ್ರಯೋಗದಲ್ಲಿ ಮೂರ್ತಗೊಂಡ ಕಾಯಕಯೋಗಿ ಮೇದಾರ ಕೇತಯ್ಯ. ಬಹಿರಂಗದಲ್ಲಿ ಬಿದಿರಿನ ಕಾಯಕ, ಅಂತರಂಗದಲ್ಲಿ ಅರಿವಿನ ಕಾಯಕ. ಬಹಿರಂಗವನ್ನು ಅಂತರಂಗದಲ್ಲಿ ಬೆರಸಿ, ಅಂತರಂಗದ ಬೆಳಕಿನಿಂದ ಬಹಿರಂಗವನ್ನು ಬೆಳಗಿಸಿ, ಬೆಳಕಿನ ಬದುಕನ್ನು ಬದುಕಿದವ ಮೇದಾರ ಕೇತಯ್ಯ. ಆ ಬೆಳಕಿನಲ್ಲಿಯೇ ಮಡದಿ ಸಾತವ್ವೆಯನ್ನು ಮುನ್ನಡೆಸಿಕೊಂಡು ಹೋದಂಥ ಶರಣ ಸಂಸಾರಿಯಾತ. ಸಂಸಾರ ಮಾಡಿ ಸಂಸಾರದಿಂದ ಮೇಲೆದ್ದು ಬಂದ ಶರಣ ಕೇತಯ್ಯ– ಮಜ್ಜಿಗೆಯ ಮೇಲೆ ತೇಲುವ ಬೆಣ್ಣೆಯಾಗಿದ್ದಾನೆ !!*

* ಆಧಾರ : ಪ್ರೊ. ಎಸ್. ಎಸ್. ಭೂಸರಡ್ಡಿಯವರು ಸಂಪಾದಿಸಿದ ಮೇದಾರ ಕೇತಯ್ಯನ ವಚನಗಳು.

೫.

# ಅಕ್ಕನ ವಚನಗಳಲ್ಲಿ ಅನುಭಾವವೂ ರಸಾನುಭವವೂ

---

ಹನ್ನೆರಡನೆಯ ಶತಮಾನದಲ್ಲಿಯ ವಚನಕಾರರು, ಬಹುಶಃ, ಅನುಭಾವಿಗಳೂ ಅಹುದು ಕವಿಗಳೂ ಅಹುದು. ಕೆಲವರಲ್ಲಿ ಅನುಭಾವ ಮಿಗಿಲಾಗಿದ್ದು. ಕಾವ್ಯಗುಣ ವಿರಳವಾಗಿರುತ್ತದೆ. ಇನ್ನು ಕೆಲವರಲ್ಲಿ ಕಾವ್ಯಗುಣ ಮಿಗಿಲಾಗಿದ್ದು. ಅನುಭಾವ ವಿರಳವಾಗಿರುತ್ತದೆ. ಆದರೆ ಎಲ್ಲರೂ ಲೋಕಾನುಭವಿಗಳೆಂಬಲ್ಲಿ ಸಂದೇಹವಿಲ್ಲ. ಚೊಕ್ಕ ಬದುಕನ್ನು ಬದುಕುವುದರಿಂದ ಅವರು ಲೋಕಾನುಭವದಿಂದ ಆತ್ಮಾನುಭವದ ಸ್ತರಕ್ಕೆ ಏರಿರುತ್ತಾರೆ. ಮಹಾದೇವಿಯಕ್ಕ ಮತ್ತು ಬಸವಣ್ಣನವರಲ್ಲಿ ಆತ್ಮಾನುಭವವೂ ಮತ್ತು ರಸಾನುಭವವೂ (ಕಾವ್ಯಗುಣ) ಸಮಸಮನಾಗಿ ಇರುವುದುಂಟು.

ಈಗ ಮಹಾದೇವಿಯಕ್ಕನ ವಚನಗಳನ್ನು ಕುರಿತು ಚಿಂತನ ಮಾಡಬೇಕಾಗಿದೆ. ಅಕ್ಕ ಅನುಭಾವಿ ಹೇಗೊ, ಹಾಗೆಯೆ ಕವಯಿತ್ರಿಯೂ ಅಹುದು. 'ವಚನಗಳು ಅನುಭಾವವನ್ನು ವ್ಯಕ್ತಗೊಳಿಸುವುದು ಮುಖ್ಯ, ಹೊರತಾಗಿ ಕಾವ್ಯ ಸೌಂದರ್ಯವೇಕೆ ಬೇಕು, ಅವುಗಳಲ್ಲಿ' ಎಂದು ಕೇಳುವವರೂ ಉಂಟು. ಮಗು ಮಗುವಾಗಿದ್ದರೆ ಸಾಕು, ಅದಕ್ಕೆ ಮುದ್ದು ಮಾಟವೇಕೆ, ಕಿಲಕಿಲ ನಗುವ ಚೆಲ್ಲಾಟವೇಕೆ ? ಎಂದು ಕೇಳಿದಂತೆ. ಈ ಬಗೆಯ ಉಲ್ಲಾಸವೇ ಮಗುವಿನ ಮೂಲ ಲಕ್ಷಣ. ಹಾಗೆಯೇ, ಬರಿ ಅನುಭಾವವನ್ನು ಅಥವಾ ಅರುಹನ್ನು ತಿಳಿಸುವ ಮಟ್ಟಕ್ಕೆ ವಚನ ಸೀಮಿತ ವಾದರೆ ಅದು ಶಾಸ್ತ್ರವಾಗುತ್ತದೆ. ಆತ್ಮಜ್ಞಾನವನ್ನು ಶಾಸ್ತ್ರದ ಮೂಲಕವೂ ಅರಿಯ ಬಹುದು. ಆದರೆ ಅದು ನೀರಸವೆನಿಸುತ್ತದೆ, ಹೃದ್ಯವಾಗುವುದಿಲ್ಲ. ಅದಕ್ಕಾಗಿ, ರಸಾನುಭವದ ಮೂಲಕ ವಚನ ಆತ್ಮಾನುಭವವನ್ನು ಹೇಳಿದರೆ ಹೃದ್ಯವಾಗುತ್ತದೆ, ನೇರವಾಗಿ ಮನದೊಳಗೆ ಇಳಿದು, ತನ್ನ ಮರ್ಮವನ್ನು ಪರಿಣಾಮಕಾರಿಯಾಗಿ ತಿಳಿಸುತ್ತದೆ.

ಈ ರಸಾನುಭವ ಕಾವ್ಯ ಸೌಂದರ್ಯದ ಮುಖ್ಯ ಗುಣ. ರಸಾನುಭವ ಅಥವಾ ಕಾವ್ಯ ಸೌಂದರ್ಯ ಅನುಭವವನ್ನು ಅರಿಯುವಲ್ಲಿ ಅಭಿರುಚಿಯನ್ನು ಹುಟ್ಟಿಸುತ್ತದೆ. ಜೀವನವನ್ನು ಪ್ರೀತಿಸುವುದಕ್ಕೆ ಅಂತರಂಗ ಬಹಿರಂಗ ಸೌಂದರ್ಯ ಬೇಕು. ಬದುಕಿನ ಸ್ಫುರಣವೆನಿಸಿದ ಸಾಹಿತ್ಯವನ್ನು ಪ್ರೀತಿಸುವುದಕ್ಕೆ ಕಾವ್ಯ ಸೌಂದರ್ಯ ಬೇಕು.

ಪ್ರೀತಿ ಉದಾತ್ತವಾದರೆ, ಬದುಕಿನಲ್ಲಿಯು ಅನುಭವ ಉದಾತ್ತವಾಗುತ್ತದೆ. ಹೀಗೆ ಅನುಭವ ಉದಾತ್ತವಾಗುವುದೇ ಅನುಭಾವ. ಜೀವನದಲ್ಲಿ ನಿಜಸುಖ ಸಿಗಬೇಕಾದರೆ, ಪ್ರೀತಿಸುವುದನ್ನು ಕಲಿಯಬೇಕು-ತನ್ನನ್ನೂ, ಸರ್ವರನ್ನೂ. ಪ್ರೀತಿ ಉದಾತ್ತವಾಗ ಬೇಕಲ್ಲದೆ ಸಂಕುಚಿತವಾಗಬಾರದು. ಈ ಉದಾತ್ತವಾದವನ್ನು ತಿಳಿಸುವುದೇ ಅನುಭಾವ!

ಮಹಾದೇವಿಯಕ್ಕನ ವಚನಗಳನ್ನು ಈ ದೃಷ್ಟಿಯಿಂದ ನೋಡಬೇಕಾಗಿದೆ. ಅಕ್ಕ ಅನುಭಾವಿಯೂ ಅಹುದು,ವೈರಾಗ್ಯಮೂರ್ತಿಯೂ ಅಹುದು. ವೈರಾಗ್ಯವೆಂದರೆ ಬದುಕಿನಿಂದ ಪಲಾಯನ ಹೊಂದುವುದಲ್ಲ. ಶಾರೀರಿಕ ಇಷ್ಟಾರ್ಥ ಪೂರ್ತಿ ಮಾಡಿ ಕೊಳ್ಳುವುದಕ್ಕಿಂತ ಬದುಕಿನಲ್ಲಿ ಮತ್ತೇನಿಲ್ಲ ? ಇದು ಬಹುಜನರ ಭ್ರಮೆಯಾಗಿದೆ. ತಿನ್ನುಣ್ಣುವುದು, ಸುಖವಿಲಾಸದಲ್ಲಿ ಓಲಾಡುವುದು-ಇದಿಷ್ಟೇ ಬದುಕುವುದರ ಧ್ಯೇಯವಲ್ಲ, ಇಷ್ಟರಿಂದಲೆ ಬದುಕನ್ನು ಪ್ರೀತಿಸಿದಂತೆ ಆಗುವುದಿಲ್ಲ. ಇದರೊಂದಿಗೆ ಮನುಷ್ಯ ದೈವದತ್ತವಾಗಿ ಪಡೆದುಕೊಂಡ ಕಲೆ, ಜ್ಞಾನ, ವಿಜ್ಞಾನ, ಆತ್ಮಜ್ಞಾನ ಮೊದಲಾದುದೆಲ್ಲವನ್ನು ಪ್ರೀತಿಸುವುದು, ಬೆಳೆಸಿಕೊಳ್ಳುವುದು ಹಾಗೂ ಸಕಲ ಜೀವ ಕುಲದ ಲೇಸಿಗಾಗಿ ಅದನ್ನು ಉಪಯೋಗಿಸುವುದು. ಇದೆಲ್ಲವೂ ಪ್ರೀತಿಗೆ ಸಂಬಂಧ ಪಟ್ಟದ್ದಾಗಿದೆ; ಸಕಲರನ್ನು ಪ್ರೀತಿಸುವಲ್ಲಿಯೆ ಒಂದು ಸುಖವಿದೆ. ಎಲ್ಲರೊಳಗಾಡುವ ಪುಣ್ಯಾತ್ಮ (ಪರಮಾತ್ಮ) ಒಬ್ಬನೆ ಇರುವುದರಿಂದ, ಯಾರನ್ನು ಪ್ರೀತಿಸಿದರೂ, ಆ ದಯಾಘನನನ್ನೆ ಪ್ರೀತಿಸಿದಂತೆ. ಅಂಥ ಪ್ರೀತಿಯಲ್ಲಿ ಒಂದು ಅನುಪಮ ಸುಖವಿದೆ.

ಮಹಾದೇವಿಯಕ್ಕ ತನ್ನ ಬದುಕನ್ನು ಪ್ರೀತಿಸಿದ್ದಾಳೆ. ಸಕಲ ಜೀವರಾಶಿಯನ್ನೂ ಪ್ರೀತಿಸಿದ್ದಾಳೆ. ಅಕ್ಕನ ಪ್ರೀತಿ ಬೇರೆ ತರಹ. 'ಸಂಸಾರ ಕಟ್ಟಿಕೊಂಡವರಷ್ಟೇ ಪ್ರೀತಿಸುವ ಕಲೆಯನ್ನು ಬಲ್ಲರು. ಸಂಸಾರ ವಿರಹಿತರಿಗೇನು ಪ್ರೀತಿ ಎಂಬುದು ಗೊತ್ತು ?' ಅರಿಯದವರು ಮಾಡುವ ಪ್ರಶ್ನೆಯಿದು. ಅಕ್ಕನದು ನಿರ್ಮೋಹ ಪ್ರೀತಿ. ತನಗೆ ಬೇಕಾದಂತೆ ಬದುಕನ್ನು ರೂಪಿಸಿಕೊಳ್ಳಲು ಮನುಷ್ಯ ಸ್ವತಂತ್ರನಾಗಿದ್ದಾನೆ. ಒಬ್ಬರು ಸಂಸಾರವನ್ನು ರೂಪಿಸಿಕೊಂಡರೆ ಇನ್ನೊಬ್ಬರು ವೈರಾಗ್ಯವನ್ನು ರೂಪಿಸಿ ಕೊಳ್ಳುತ್ತಾರೆ. ಎರಡನ್ನೂ ಪರಿಶುದ್ಧವಾಗಿ ಬದುಕುವುದು ಕಷ್ಟಸಾಧ್ಯ. ಆದರೆ, ಎರಡರಲ್ಲಿಯೂ ಸುಖ ಸಂತೋಷವೂ ಇದೆ. ಕಷ್ಟ ಪರಂಪರೆಯೂ ಇದೆ. ಹೀಗೆ ಅಕ್ಕನದು ಪಲಾಯನವಾದವಲ್ಲ, ವೀರ ವಿರತಿಯ ಬದುಕು. ವಿರತಿ ಪಲಾಯನ ವೆಂದು ಹೇಳಿದರೆ, ಅದು ಅವರ ದೃಷ್ಟಿದೋಷ. ಬದುಕಿನಲ್ಲಿ ತನಗೆ ಇಷ್ಟವಾದ ಮಾರ್ಗವನ್ನು ಸ್ವಯಂ ಪ್ರೇರಣೆಯಿಂದ ಆರಿಸಿಕೊಂಡು, ಆ ಸ್ವತಂತ್ರ ಮಾರ್ಗದಲ್ಲಿ ಮುಂದುವರಿದು ಯಶಸ್ಸಿಗಾಗಿ ಹೋರಾಡಿದ ವೀರ ವೈರಾಗ್ಯ ಮೂರ್ತಿ ಮಹಾದೇವಿ ಯಕ್ಕ. ಹೀಗೆ ಬದುಕಿನಲ್ಲಿ ಸ್ವಾತಂತ್ರ್ಯದ ಮೌಲ್ಯವನ್ನು ಹೆಚ್ಚಿಸಿದ ಹೆಗ್ಗಳಿಕೆ ಅಕ್ಕನದು ! ಹುಟ್ಟಿ ಸಾಯುವ ಗಂಡರ ಸಂಗ ಬಯಸದ ಅಕ್ಕ ಘನಕ್ಕೆ ಘನವಾದ

ವಸ್ತುವನ್ನೆ ಪ್ರೀತಿಸಿ, ಪತಿಯನ್ನಾಗಿ ಸ್ವೀಕರಿಸಿದ್ದಾಳೆ. ಅಲ್ಲಮ ಪ್ರಭುವಿನ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಾಳೆ. ಅಕ್ಕನದು ಮಹಾ ಪ್ರಪಂಚ! ಮನುಷ್ಯನ ಮೂಲ ಸ್ವರೂಪವನ್ನರಿತು, ಅದುವೆ ತಾನಾಗಲು ಹೋರಾಡಿದ ಪಾರಮಾರ್ಥ ಪ್ರಪಂಚ! ಈ ಪ್ರಪಂಚದಲ್ಲಿ ಬಹಿರಂಗವಾಗಿ ಕಷ್ಟ ಕಂಡುಬಂದರೂ, ಅಂತರಂಗದಲ್ಲಿ ಪರಮಾನಂದ ವುಂಟಾಗದಿರದು. ಆಹಾರ, ವಸತಿ, ಧನ, ಕನಕ, ಮಕ್ಕಳು ಮರಿ ಇವುಗಳಿಗಾಗಿ ಸಾಮಾನ್ಯರು ಕಳವಳಿಸಿದರೆ, ಇದನ್ನೆ ಕೊಡುವ, ಸಲಹುವ ಪರಮಾತ್ಮನಿಗಾಗಿ ಅಕ್ಕನಂಥ ಅಧ್ಯಾತ್ಮ ಜೀವಿಗಳು ಕಳವಳಿಸುತ್ತಾರೆ.

**"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿದೆ**
**ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ**
**ಚೆಲುವಂಗೆ ನಾನೊಲಿದೆ ಎಲೆ ಅವ್ವಗಳಿರಾ!**
**ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು.**
**ಸೀಮೆಯಿಲ್ಲದ ನಿಸ್ಸೀಮಂಗೊಲಿದೆ ನಾನು.**
**ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆ ಮಿಗೆ ಮಿಗೆ ಒಲಿದೆ**
**ಎಲೆ ಅವ್ವಗಳಿರಾ!"** (೨೫೦)

ಪರಮಾತ್ಮನ ನಿರಾಕಾರ ಸ್ವರೂಪವನ್ನು ಇದಕ್ಕಿಂತ ಮಿಗಿಲಾಗಿ ವರ್ಣಿಸುವುದು ಸಾಧ್ಯವಿಲ್ಲವೇನೊ! ನಿರರ್ಗಳ ವರ್ಣನೆ ಪ್ರಾಸಾನುಪ್ರಾಸಗಳ ಹಾಗೂ ಸುಮಧುರ ಪದಪುಂಜಗಳ, ರಿಂಗಣ, ಕುಣಿತ – ಇವುಗಳಿಂದಾಗಿ ಈ ವಚನ ಅಪೂರ್ವ ಕವಿತ್ವದಿಂದ ಹೊಳಪಿಟ್ಟಿದೆ. ರಸಾನುಭವದ ಮೂಲಕ ನಿಸ್ಸೀಮನ ದರ್ಶನ ಸುಖವನ್ನು ಮೂಡಿಸಿದ ಪರಿ ಹೃದಯಂಗಮವಾಗಿದೆ.

**"ಚಿಲಿಮಿಲಿ ಎಂದು ಓದುವ ಗಿಳಿಗಳಿರಾ ನೀವು ಕಾಣಿರೆ ನೀವು ಕಾಣಿರೆ,**
**ಸರವೆತ್ತಿಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ನೀವು ಕಾಣಿರೆ,**
**ಗಿರಿಗಹ್ವರದೊಳಗಾಡುವ ನವಿಲುಗಳಿರಾ, ನೀವು ಕಾಣಿರೆ ನೀವು ಕಾಣಿರೆ**
**ಚೆನ್ನಮಲ್ಲಿಕಾರ್ಜುನನೆಲ್ಲಿದ್ದಿಹನೆಂದು ಹೇಳಿರೆ"** (೨೭೪)

ಪಕ್ಷಿಗಳನ್ನು ಸಂಬೋಧಿಸುವ ಕಾತರ ಮನಮಿಡಿಯುವಂತಿದೆ. ಗಿಳಿ, ಕೋಗಿಲೆ ನವಿಲುಗಳು ಹಾಡುವ ನಲಿದಾಡುವ ರಸಾನಂದದಲ್ಲಿ–ಆ ಆನಂದ ಸ್ವರೂಪನನ್ನೆ ಕಂಡುಕೊಂಡ ಅಕ್ಕ ಭಾವಪರವಶಳಾಗಿ ಹಾಡಿದಂತಿದೆ ಈ ವಚನ. ಪರಮಾತ್ಮನಿಗಾಗಿ ಪಡುವ ಈ ಹಂಬಲ ಎಷ್ಟೊಂದು ಉತ್ಕಂಠಭಾವದಿಂದ ತುಂಬಿದೆ! ಒಬ್ಬ ಅಧ್ಯಾತ್ಮ ಜೀವಿಯ ಕುತೂಹಲ, ಕಾತರ ಸಾಮಾನ್ಯ ಮನುಷ್ಯನ ಕಾತರಕ್ಕಿಂತ ಉದಾತ್ತವಾದುದು. ಮಾನವ ಜನ್ಮ ಕ್ಷುಲ್ಲಕವಲ್ಲವೆಂದ ಮೇಲೆ, ಮಹೋನ್ನತ

ವಸ್ತುವಿಗಾಗಿ ಕುದಿಯಬೇಕಲ್ಲದೆ, ಕ್ಷುಲ್ಲಕ ವಸ್ತುವಿಗಾಗಿ ಕುದಿಯಬಾರದೆಂಬ ಆಶಯ ಇಲ್ಲಿ ಧ್ವನಿಸುವಂತಿದೆ.

ಅಕ್ಕ ಅಧ್ಯಾತ್ಮಜೀವನ ಪಥದಲ್ಲಿ ಮುಂದಡಿಯಿರಿಸಿ ಸಾಗುತ್ತಿರುವಾಗ, ಲೋಕದ ಅಸಹ್ಯಗಳನ್ನು ನುಂಗಿ ತನ್ನನ್ನು ತಾನು ಸಂತೈಸಿಕೊಳ್ಳುತ್ತಾಳೆ. ಹೀಗೆ ಆಕೆ ಅನುಭವಿಸಿ ಪಡೆದ ಲೋಕಾನುಭವದ ಕೆಲವು ವಚನಗಳನ್ನು ನೋಡೋಣ :

**"ಬೆಟ್ಟದ ಮೇಲೊಂದು ಮನೆಯ ಮಾಡಿ**
**ಮೃಗಗಳಿಗಂಜಿದಡೆಂತಯ್ಯಾ ?**
**ಸಮುದ್ರದ ತಡಿಯಲೊಂದು ಮನೆಯ ಮಾಡಿ,**
**ನೊರೆ ತೆರೆಗಳಿಗಂಜಿದಡೆಂತಯ್ಯಾ ?**
**ಸಂತೆಯೊಳಗೊಂದು ಮನೆಯ ಮಾಡಿ**
**ಶಬ್ದಕ್ಕೆ ನಾಚಿದಡೆಂತಯ್ಯಾ ?**
**ಚನ್ನಮಲ್ಲಿಕಾರ್ಜುನದೇವ ಕೇಳಯ್ಯಾ,**
**ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ**
**ಮನದಲ್ಲಿ ಕೋಪವ ತಾಳದೇ**
**ಸಮಾಧಾನಿಯಾಗಿರಬೇಕು"** (೧೩೪)

ಬೆಟ್ಟದಲ್ಲಿ ಮೃಗಗಳ ಕಾಟ, ಸಮುದ್ರದಲ್ಲಿ ನೊರೆ ತೆರೆಗಳ ಭಯ, ಸಂತೆಯಲ್ಲಿ ಸದ್ದುಗದ್ದಲದ ಕೀಸರ. ಹಾಗೆಯೆ, ಸಂಸಾರದಲ್ಲಿ ಸ್ತುತಿ ನಿಂದೆಗಳು. ಸಂಯಮವೊಂದೆ ಮನುಷ್ಯನನ್ನು ಬದುಕಿಸುವ ಪರಿಹಾರ. ಸಂಯಮದಿಂದ ಸಮಾಧಾನ ಸಾಧ್ಯವಲ್ಲದೆ ಆಕ್ರೋಶದಿಂದಲ್ಲ. ಸ್ತುತಿ ನಿಂದೆಗಳ ಅಪಾಯವನ್ನು ಬಣ್ಣಿಸುವಲ್ಲಿ ಅಕ್ಕ ಬಳಸಿದ ಮೃಗ, ನೊರೆ ತೆರೆ, ಸದ್ದುಗದ್ದಲ–ಉಪಮೆಗಳು ಎಷ್ಟೊಂದು ಸಮರ್ಪಕವಾಗಿವೆ !

**"ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ**
**ಹಾವಿನ ಸಂಗವೆ ಲೇಸು ಕಂಡಯ್ಯಾ !**
**ಕಾಯದ ಸಂಗವ ವಿವರಿಸಬಲ್ಲಡೆ**
**ಕಾಯದ ಸಂಗವೆ ಲೇಸು ಕಂಡಯ್ಯಾ !**
**ತಾಯಿ ರಕ್ಕಸೆಯಾದಂತೆ ಕಾಯವಿಕಾರವು !**
**ಚನ್ನಮಲ್ಲಿಕಾರ್ಜುನಯ್ಯಾ.**
**ನೀನೊಲಿದವರು ಕಾಯಗೊಂಡಿದ್ದರೆನಬೇಡ"** (೧೦೦)

ಹಲ್ಲ ಕಳೆದ ಮೇಲೆ ಹಾವಿನ ಅಪಾಯವೆಲ್ಲಿ ? ದೇಹದ (ಜೀವನದ) ಮಲತ್ರಯ ವಳಿದು, ಪರಿಶುದ್ಧಗೊಳಿಸಿದ, ಆದರಿಂದ ಆತ್ಮೋನ್ನತಿಗೆ ಬಾಧೆಯೆಲ್ಲಿ ? ಕರಣೇಂದ್ರಿಯಗಳ ಇಚ್ಛೆಯಂತೆ ನಡೆದರೆ ಪ್ರಸಾದ ಕಾಯ ವಿನಾಶಗೊಳಿಸುವ ರಕ್ಕಸಿಯಾಗುತ್ತದೆ. ಈ ತನು ಮನಗಳನ್ನು ಬಳಸುವ ರೀತಿಯಲ್ಲಿಯೆ ಮನುಷ್ಯನ

ಕೇಡೂ ಇದೆ, ಒಳಿತೂ ಇದೆ. ಅಕ್ಕನ ಈ ಲೋಕಾನುಭವ ಮನುಷ್ಯನಲ್ಲಿಯ ಭಯವನ್ನು ಕಳೆಯುವಲ್ಲಿ ತಕ್ಕ ದೃಷ್ಟಾಂತದ ಮೂಲಕ ಮೂಡಿ ಬಂದುದರಿಂದ, ಪರಿಣಾಮಕಾರಿಯಾಗಿದೆ.

**"ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ**
**ಹಲವು ಪ್ರಾಣಿಯ ಕೊಂದು, ನಲಿ ನಲಿದಾಡುವ**
**ತನ್ನ ಮನೆಯಲೊಂದು ಶಿಶು ಸತ್ತಡೆ**
**ಅದಕ್ಕೆ ಮರುಗುವಂತೆ ಅವಕೇಕೆ ಮರುಗ ?**
**ಜಾಲಗಾರನ ದುಃಖ ಜಗಕೆಲ್ಲ ನಗೆಗೆಡೆ।**
**ಇದು ಕಾರಣ, ಚನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು**
**ಜೀವ ಹಿಂಸೆ ಮಾಡುವ ಮಾದಿಗರನೇನೆಂಬೆನಯ್ಯಾ ?"(೧೨೮)**

ಜಾಲಗಾರನ ಮಗುವಿನಲ್ಲಿರುವ ಶಿವಜೀವ ಜಲಪ್ರಾಣಿಗಳಲ್ಲಿಯೂ ಉಂಟು. ಈ ಅರುಹು ಜಾಲಗಾರನಂತೆ ಜೀವಹಿಂಸೆ ಮಾಡುವವರಿಗೆಲ್ಲ ವೇದ್ಯವಾದರೆ, ಆಸ್ತಿಗಾಗಿ ನಡೆಯುವ ಕೊಲೆ ಸುಲಿಗೆ, ರಾಜ್ಯದಾಹಕ್ಕಾಗಿ ನಡೆಯುವ ಕದನ ನಿಂತು ಹೋಗಿ ಜಗತ್ತಿನಲ್ಲಿ ಶಾಂತಿ ನೆಲೆಸಬಹುದಾಗಿದೆ. ಈ ಆಶಯವನ್ನು ಮನಮುಟ್ಟುವಂತೆ ಮೂಡಿಸುವಲ್ಲಿ, ಜಾಲಗಾರನ ಪ್ರತಿಮೆ ಯಶಸ್ಸನ್ನು ಸಾಧಿಸಿದೆ.

**"ಲೋಕದ ಚೇಷ್ಟೆಗೆ ರವಿ ಬೀಜವಾದಂತೆ**
**ಕರಣಂಗಳ ಚೇಷ್ಟೆಗೆ ಮನವೆ ಬೀಜ**
**ಎನಗುಳ್ಳುದೊಂದು ಮನ,**
**ಆ ಮನ ನಿಮ್ಮಲ್ಲಿ ಸಿಲುಕಿದ ಬಳಿಕ**
**ಎನಗೆ ಭವವುಂಟೆ? ಚೆನ್ನಮಲ್ಲಿಕಾರ್ಜುನಾ ?" (೩೯)**

ಲೋಕದ ವ್ಯವಹಾರ ಸಾಗುವುದಕ್ಕೆ ಸೂರ್ಯನೇ ಕಾರಣ. ಕರಣೇಂದ್ರಿಯ ವಿಕಾರಭರಿತ ವ್ಯವಹಾರ ನಡೆಯುವುದಕ್ಕೆ ಮನವೆ ಕಾರಣ. ಅಂಥ ಮನವನ್ನು ಪರಮಾತ್ಮನಿಗೊಪ್ಪಿಸಿದ ಮೇಲೆ ಕರಣೇಂದ್ರಿಯ ಚೇಷ್ಟೆ ಬಾಧಿಸುವಂತಿಲ್ಲ. ಲಿಂಗಕ್ಕೆ (ದೇವರಿಗೆ) ಅರ್ಪಿತವಾದ ಮನ ಲಿಂಗವಾಗಿ ಪರಿವರ್ತಿತವಾಗಬಲ್ಲುದು; ಮನ ಲಿಂಗವಾದ ಮೇಲೆ ಅದರಿಂದ ಪ್ರೇರಣೆಗೊಂಡ ಕರಣೇಂದ್ರಿಯಗಳೂ ಲಿಂಗವಾಗಿ ಪರಿವರ್ತನೆ ಹೊಂದಬಲ್ಲವು. ಇಲ್ಲಿಯ ಲೋಕಾನುಭವ ಆತ್ಮಾನುಭವವಾಗಿ ಮೂಡಿ ಬಂದ ಪರಿ ಹೃದಯಂಗಮವಾಗಿದೆ !

**"ಮುತ್ತು ನೀರಲಾಯಿತ್ತು, ವಾರಿಕಲ್ಲು ನೀರಲಾಯಿತ್ತು**
**ಉಪ್ಪು ನೀರಲಾಯಿತ್ತು**
**ಉಪ್ಪು ಕರಗಿತ್ತು ವಾರಿಕಲ್ಲು ಕರಗಿತ್ತು**
**ಮುತ್ತು ಕರಗಿದ್ದುದನಾರೂ ಕಂಡವರಿಲ್ಲ.**

**ಈ ಸಂಸಾರಿ ಮಾನವರು ಲಿಂಗವ ಮುಟ್ಟಿ**
**ಭವಭಾರಿಗಳಾದರು.**
**ನಾ ನಿಮ್ಮ ಮುಟ್ಟಿ ಕರಿಗೊಂಡೆನಯ್ಯಾ**
**ಚನ್ನಮಲ್ಲಿಕಾರ್ಜುನಯ್ಯಾ (೩೩೪)**

ಭಕ್ತಿ ನಿಷ್ಠೆಯಿಲ್ಲದೆ ಲಿಂಗವ ಪೂಜಿಸಿದವರು–ನೀರಲ್ಲಿ ಹುಟ್ಟಿ ನೀರಲ್ಲಿ ಕರಗಿ ಹೋಗುವ ಉಪ್ಪು ವಾರಿಕಲ್ಲುಗಳಿದ್ದಂತೆ. ಅಂಥವರು ಮತ್ತೆ ಮತ್ತೆ ಹುಟ್ಟಿ ಸಂಸಾರದ ವ್ಯಾಮೋಹದಲ್ಲಿ ಮುಳುಗಿ ತಾವಾರೆಂದು ಅರಿದು ಜನ್ಮ ಸಾರ್ಥಕ ಮಾಡಿ ಕೊಳ್ಳದೆ ಸಾವನ್ನಪ್ಪುವವರು. ದೇವರಾಗಿ ನಡೆದು ದೇವರನ್ನು ಪೂಜಿಸಿದ ಅಕ್ಕ ಆ ದೇವರೇ (ಚನ್ನಮಲ್ಲಿಕಾರ್ಜುನನಾಗಿ) ಆಗಿ ಪರಿಣಮಿಸುತ್ತಾಳೆ. ಭಕ್ತಿ ಪೂಜೆಯಲ್ಲಿ ಕ್ರಿಯಾ ಜ್ಞಾನವೆರಡೂ ಇದ್ದರೆ, ಅದು ಫಲಕಾರಿಯಾಗುವುದು. ಉಪ್ಪು ವಾರಿ ಕಲ್ಲುಗಳ ದೃಷ್ಟಾಂತಗಳ ಮೂಲಕ ಇದನ್ನು ಅಕ್ಕ ಚಿತ್ರಿಸಿದ ಪರಿ ಹೃದ್ಯವಾಗಿದೆ।

**"ಅರ್ಥ ಸನ್ಯಾಸಿಯಾದಡೇನಯ್ಯಾ,**
**ಆವಂಗದಿಂದ ಬಂದಡೂ ಕೊಳದಿರಬೇಕು.**
**ರುಚಿ ಸನ್ಯಾಸಿಯಾದಡೇನಯ್ಯಾ,**
**ಜಿಹ್ವೆಯು ಕೊನೆಯಲ್ಲಿ ಮಧುರವನರಿಯದಿರಬೇಕು.**
**ಸ್ತ್ರೀ ಸನ್ಯಾಸಿಯಾದಡೇನಯ್ಯಾ,**
**ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ತಟ್ಟಲ್ಲದಿರಬೇಕು.**
**ದಿಗಂಬರಿಯಾದಡೇನಯ್ಯಾ,**
**ಮನ ಬತ್ತಲೆ ಇರಬೇಕು.**
**ಇಂತೀ ಚತುರ್ವಿಧದ ಹೊಲಬನರಿಯದೆ ವೃಥಾ ಕೆಟ್ಟರು**
**ಕಾಣಾ ಚನ್ನಮಲ್ಲಿಕಾರ್ಜುನಾ !" (೧೧೫)**

ಬಂದೆ ಬಿಟ್ಟೆನೆನ್ನುವುದಾಗಲಿ, ಪ್ರತ್ಯಕ್ಷ ಬಿಡುವುದಾಗಲಿ ಸನ್ಯಾಸಿಯ ಲಕ್ಷಣವಲ್ಲ. ಹೇಗೆ ಬಂದರೂ ತನು ಮನ ಭಾವದಿಂದ ಮುಟ್ಟದಿರುವುದು, ಮನ ಸೋಲದಿರುವುದು ಸನ್ಯಾಸಿಯ ಲಕ್ಷಣ. ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಸಹ ಸ್ತ್ರೀ ಮೋಹವಳಿದರೆ ಮಾತ್ರ ಆತ ಬ್ರಹ್ಮಚಾರಿ. ಮನ ಬತ್ತಲೆಯಾಗದೆ, ತನು ಬತ್ತಲೆಯಾದರೆ ಆತ ದಿಗಂಬರಿ ಹೇಗೆ ? ಹೀಗೆ ಹೊಲಬನ್ನರಿಯದೆ ವೃಥಾ ಕೆಟ್ಟು ಹೋದ ಸಾಧು ಸನ್ಯಾಸಿಗಳಿಗಾಗಿ ಅಕ್ಕ ಪಡುವ ಅನುಕಂಪದಲ್ಲಿ ಒಂದು ಅರಿವೂ ಇದೆ !

**"ಅಂಗದೊಳಗೆ ಅಂಗವಾಗಿ ಅಂಗವ ಲಿಂಗೈಕ್ಯವ ಮಾಡಿದೆ.**
**ಮನದೊಳಗೆ ಮನವಾಗಿ ಮನವ ಲಿಂಗೈಕ್ಯವ ಮಾಡಿದೆ.**
**ಭಾವದೊಳಗೆ ಭಾವವಾಗಿ ಭಾವವ ಲಿಂಗೈಕ್ಯವ ಮಾಡಿದೆ.**
**ಅರಿವಿನೊಳಗೆ ಅರಿವಾಗಿ ಅರಿವ ಲಿಂಗೈಕ್ಯವ ಮಾಡಿದೆ.**
**ಜ್ಞಾನದೊಳಗೆ ಜ್ಞಾನವಾಗಿ ಜ್ಞಾನವ ಲಿಂಗೈಕ್ಯವ ಮಾಡಿದೆ.**

ಕ್ರೀಗಳೆಲ್ಲವ ನಿಲಿಸಿ ನಿಃಕ್ರಿಯಾತೀತನಾಗಿ ನಿಃಪತ್ತಿ
ಲಿಂಗೈಕ್ಯವ ಮಾಡಿದೆ.
ನಾನೆಂಬುದ ನಿಲಿಸಿ ನೀನೆಂಬುದ ಕೆಡಿಸಿ ಉಭಯವ
ಲಿಂಗೈಕ್ಯವ ಮಾಡಿದೆ.
ಚನ್ನಮಲ್ಲಿಕಾರ್ಜುನಯ್ಯನೊಳಗೆ ನಾನಳಿದೆನಾಗಿ
ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ
ಸಂಗನಬಸವಣ್ಣಾ !" (೩೨೮)

ಮನುಷ್ಯನ ತನು, ಮನ, ಭಾವ ಮೊದಲಾದವುಗಳು ವಿಕಾರಭರಿತ. ಆದರೆ, ಪರಮಾತ್ಮನಲ್ಲಿ ಇವು ವಿಕಾರರಹಿತ. ನಿಷ್ಕಲಂಕ, ನಿರಾಳ ! ಆದ್ದರಿಂದ ಜೀವಾತ್ಮನ ತನು, ಮನ, ಭಾವ, ಜ್ಞಾನ, ಕ್ರಿಯೆಗಳೆಲ್ಲ ಆ ನಿರಾಳ ವಸ್ತುವಿನಲ್ಲಿ ಒಂದಾಗ ಬೇಕು. ಅಂಗಗುಣ ಲಿಂಗಗುಣದಲ್ಲಿ ಕರಗಿ ಹೋಗುವುದೆ ಲಿಂಗೈಕ್ಯವಾಗುವ ಪರಿ ! ಜೀವಾತ್ಮರಲ್ಲಿಯು ಕ್ರಿಯೆ ಜ್ಞಾನ ಶ್ರೇಷ್ಠ ಮಟ್ಟದ್ದಾಗಿದ್ದರೂ, ಅಲ್ಲಿ ಅಹಂಕಾರ ವಿರುವುದುಂಟು. ಅಹಂಕಾರವಿರುವಲ್ಲಿ ನಿರಹಂಕಾರಿ ಪರಮಾತ್ಮನಿರುವುದಿಲ್ಲ. ಬಸವಣ್ಣ ಹೇಳಿದಂತೆ ಮಾಡುವಾತ ತಾನಾಗದೆ ಮಾಡಿದಲ್ಲಿ, ಅದು ನಿಷ್ಪತ್ತಿಕ್ರಿಯೆಯಾಗಿ ನಿಷ್ಪತ್ತಿ ಲಿಂಗೈಕ್ಯವಾಗಬಲ್ಲುದು. ತಾನೆಂಬ (ಜೀವಾತ್ಮನೆಂಬ) ಪರಮಾತ್ಮನೆಂಬ ಸಂದು ಭೇದವಳಿದಾಗ ಲಿಂಗೈಕ್ಯದ ನೆಲೆ ವೇದ್ಯವಾಗುವುದುಂಟು. ಉಭಯವೂ ಲಿಂಗೈಕ್ಯ ವಾದಲ್ಲಿ, ಜೀವಾತ್ಮನಲ್ಲಿ ಘನಕ್ಕೆ ಘನವಾದ ಪರಮಾತ್ಮ ಕರಗಿ ಹೋಗುವನು. ಲಿಂಗೈಕ್ಯದ ಬಗೆಗೆ ಹೇಳಿದ ಅಕ್ಕನ ಅನುಭಾವ ವಿಶ್ಲೇಷಿಸಿದಷ್ಟೂ ಆಳವಾದುದು, ಅರಿತಷ್ಟೂ ಆತ್ಮಾನಂದ ನೀಡುವಂತಹುದು !

ಮಹಾದೇವಿಯಕ್ಕ ಲೋಕದ ಸಂಸಾರ ಕಟ್ಟಿಕೊಳ್ಳದಿದ್ದರೂ, ಲೋಕದ ಉಪಟಳ ತಪ್ಪಲಿಲ್ಲ. ನಾವು ದುಃಖವನ್ನು ಬಿಡಬಹುದು, ದುಃಖ ನಮ್ಮನ್ನು ಬಿಡಲಾರದು. ತನ್ನಂತೆ ಇದ್ದರೆ ಮಾತ್ರ ಮನುಷ್ಯ ಸಹಿಸಿಕೊಳ್ಳುತ್ತಾನೆ. ತನ್ನ ದಾರಿಯಿಂದ ಭಿನ್ನವಾದ ಉನ್ನತವಾದ ದಾರಿ ಹಿಡಿದರೆ, ಹಿಡಿದವರ ಬಗೆಗೆ ವಿಪರೀತ ವಿತರ್ಕ, ಸಲ್ಲದ ಅಪವಾದ, ಅವಹೇಳನಗಳಿಂದ ಅಪಹಾಸ್ಯ ಮಾಡಿ ಖುಷಿ ಪಡುತ್ತಾನೆ ಮನುಷ್ಯ. ಲೋಕದ ನಿಂದೆಯಿಂದ ಅಕ್ಕ ಆಕ್ರೋಶ ತಾಳಲಿಲ್ಲ. ಲೋಕದ ಗತಿಯೆ ಹೀಗೆ. ಸ್ತುತಿ ನಿಂದೆಯೆಲ್ಲ ಉಪಾಧಿಗಳು. ಮನಸಿನಾಳಕ್ಕೆ ಬಿಟ್ಟರೆ ಹರಿದು ತಿನ್ನುತ್ತವೆ. ಸಂಯಮದ ಬಲದಿಂದ ಮನಸಿನಾಚೆ ಎಸೆದರೆ, ಆ ಉಪಾಧಿಗಳಿಂದೇನೂ ಅಪಾಯವಿಲ್ಲ. ಹೀಗೆ ಆಕೆ ವಿಷಾದವನ್ನು ಪ್ರಸಾದವನ್ನಾಗಿ ಸ್ವೀಕರಿಸುತ್ತಾಳೆ ಹೊರತಾಗಿ ವಿಷಾದದಿಂದ ಕೊರಗುವುದಿಲ್ಲ. ವಿಷವನ್ನೆ ಪ್ರಸಾದ ವನ್ನಾಗಿ ನುಂಗಿ ಲೋಕವನ್ನು ಬದುಕಿಸಿದ ಪರಶಿವನ ದಾರಿ ಅಕ್ಕನದು !

ಹಾವಿನ ಹಲ್ಲ ಕಳೆದು ಹಾವನಾಡಿಸುವಲ್ಲಿಯೆ ಪ್ರಸಾದೀಕರಣ ಕಲೆಯಿದೆ. ಈ ಪ್ರಸಾದೀಕರಣವೆ ಅನುಭವವನ್ನು (ಸಿಹಿ ಇರಲಿ, ಕಹಿ ಇರಲಿ) ಅನುಭಾವವನ್ನಾಗಿಸಿ ಸ್ವೀಕರಿಸುವಲ್ಲಿಯೆ ಬದುಕುವ ಕಲೆಯಿದೆ. ಈ ಪ್ರಸಾದೀಕರಣ ತತ್ವವನ್ನರಿತ ಅಕ್ಕನನ್ನು ಯಾವ ಕಿಚ್ಚಿಗೂ ಸುಡುವ ಧೈರ್ಯವಾಗಲಿಲ್ಲ; ಆದರೆ, ಅಕ್ಕನಿಗೆ ಅದು ಬೆಳಕನ್ನು ನೀಡಿ, ತಾನೂ ಬೆಳಕಾಗಿ ಬೆಳಗಿ ಪುಣ್ಯ ಪಡೆಯುತ್ತದೆ! ಈ ಮಾತಿಗೆ 'ಬೆಟ್ಟದ ಮೇಲೊಂದು ಮನೆಯ ಮಾಡಿ'–೧೩೪ ನೆಯ ವಚನ ಮತ್ತು 'ಮುತ್ತು ನೀರಲಾಯಿತ್ತು'–ಎಂಬ ೩೩೪ ನೆಯ ವಚನ ಇವು ತಕ್ಕ ಉದಾಹರಣೆಯಾಗಿವೆ.

ಅಕ್ಕನಲ್ಲಿಯ ಇಂಥ ಹಲವಾರು ಕಹಿ ಅನುಭವ ಕಾವ್ಯದ ಜೇನಹನಿಯುಂಡು ರಸಪಾಕವಾಗಿ ಲೋಕದ ಜಡ್ಡನ್ನು ಕಳೆಯುಬಲ್ಲ ದಿವ್ಯ ಔಷಧಿಯಾದುದೆಂದರೆ ತಪ್ಪಲ್ಲ. ಲೋಕಾನುಭವವನ್ನು ಕಾವ್ಯವಾಗಿಸಿ ರಸವತ್ತಾಗಿ ಚಿತ್ರಿಸುವಲ್ಲಿ ಬಸವಣ್ಣನದೊಂದು ದಾರಿಯಾದರೆ, ಅಕ್ಕನದೊಂದು ದಾರಿ! ಆತ್ಮಾನಂದದೊಂದಿಗೆ ಕರ್ಣಾನಂದ ನೀಡುವಲ್ಲಿ ಮಹಾದೇವಿಯಕ್ಕನ ವಚನಗಳು ಒಂದು ಹೆಜ್ಜೆ ಮುಂದೆ ಎಂದರೆ ಉತ್ಪ್ರೇಕ್ಷೆಯಲ್ಲ !!

೬.

# ಅನುಭವ ಮಂಟಪ ಸಾಧನೆ ಮತ್ತು ಸಿದ್ಧಾಂತ !

ಹನ್ನೆರಡನೆಯ ಶತಮಾನದಲ್ಲಿಯ ಅನುಭವ ಮಂಟಪ ನಿಜವಾಗಿ ಅನುಭಾವ ಮಂಟಪ. ಸಕಲ ಶರಣರ ಅನುಭವವನ್ನು ಕೂಡಿ ಕಡೆದು ಆತ್ಮಾನುಸಂಧಾನ ಮಾಡಿಕೊಳ್ಳುವ ವೇದಿಕೆ.

"ಇಂದ್ರಿಯಜನ್ಯವಾದ ಬಾಹ್ಯ ವಿಷಯಗಳ ಮೂಲಕ ಚಿತ್ತದ ಮೇಲೆ ಒತ್ತಲಾದ ಅಚ್ಚುಗಳೆಲ್ಲ ಅನುಭವಗಳು."[೧] ಹೀಗೆ ಒಬ್ಬರ ಅನುಭವ ಒಂದು ವಿಚಾರವನ್ನು ತಿಳಿಸಿಕೊಟ್ಟರೆ, ಇನ್ನೊಬ್ಬರ ಅನುಭವ ಇನ್ನೊಂದು ವಿಚಾರವನ್ನು ತಿಳಿಸುತ್ತದೆ. ಈ ರೀತಿ ಇನ್ನೊಂದನ್ನು ಮತ್ತೊಂದನ್ನು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆ ಸಹಜವಾಗಿ ಹುಟ್ಟುತ್ತದೆ. ಇದೆ ಅನುಭವ ಊರ್ಧ್ವ ಮುಖವಾಗಿ ಸಾಗಿದರೆ, ಲೌಕಿಕದಿಂದ ಪಾರಮಾರ್ಥಿಕದತ್ತ ಹರಿದರೆ ಅನುಭಾವವೆನಿಸುತ್ತದೆ. ಜೀವಾತ್ಮರ ಒಳಹೊರಗನ್ನು ತಿಳಿಗೊಳಿಸಿ ಬೆಳಗುವ ಅನುಭವ ಅನುಭಾವವಾಗುತ್ತದೆ.

೧ **"ಆತ್ಮ ಆತ್ಮ ಮಥನಿಸಿ ಅನುಭಾವ ಹುಟ್ಟಿ**
**ಹೊದ್ದಿರ್ದ ತನುಗುಣಾದಿಗಳ ಸುಡಲಾಯಿತ್ತು"**
**(ಮಹಾದೇವಿಯಕ್ಕ)**

೨ **"ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ**
**ಉಳಿಯಬಲ್ಲುದೆ ಅಯ್ಯಾ ?**
**ಶರಣರು ಮಹಾನುಭಾವ ಗೋಷ್ಠಿಯ ಮಾಡುವಲ್ಲಿ**
**ಸಂಗದೊಳಿರ್ದವರ ಅಜ್ಞಾನವಳಿದು ನಿಜವನೈದುವರಯ್ಯಾ"**
**(ಸಿದ್ಧರಾಮ)**

೩ **"ಶಿವಪಥವನರಿವಡೆ ಗುರುಪಥವೆ ಮೊದಲು**
**ಕೂಡಲ ಸಂಗಮ ದೇವರನರಿವಡೆ**
**ಶರಣರ ಸಂಗವೆ ಮೊದಲು."** **(ಬಸವಣ್ಣ)**

ಹೀಗೆ ಅನುಭಾವಿಗಳು ಕೂಡಿ ಮಥನಿಸಿ, ಅವಗುಣಗಳನ್ನು ಕಳೆದುಕೊಳ್ಳುವ ವೇದಿಕೆ ಅನುಭವ ಮಂಟಪವೆಂಬುದು ಅಜ್ಞಾನವನ್ನು ಅಳಿಸಿ ಹಾಕುವ ಹಾಗೂ

೧. ''ಶರಣರ ಅನುಭವ ಅನುಭಾವ ಅನುಭೂತಿ''–ಆರ್. ಆರ್. ದಿವಾಕರ

ಸುಜ್ಞಾನದತ್ತ ದಾರಿ ತೋರುವ ಗೋಷ್ಠಿಯದು. ಶಿವಪಥವನ್ನರಿಯುವ ಶರಣರ ಸಂಗವದು.

ಮನುಷ್ಯನಿಗೂ ಅನುಭವಕ್ಕೂ ಹೇಗೆ ಸಂಬಂಧವುಂಟೊ, ಹಾಗೆಯೆ ಬಸವಣ್ಣನಿಗೂ ಅನುಭವ ಮಂಟಪಕ್ಕೂ ಸಂಬಂಧವುಂಟು. ಅನುಭವ ಮಂಟಪದ ಅಧ್ಯಕ್ಷ ಪೀಠಕ್ಕೆ ಅಲ್ಲಮ ಪ್ರಭುಗಳು ಆರೂಢರಾಗಿದ್ದರೂ, ತೆರೆಮರೆಯ ಹಿಂದೆ ಅದರ ಮೂಲ ಬಿಂದುವಾಗಿ ಕೇಂದ್ರಶಕ್ತಿಯಾಗಿ ನಿಂತವನು ಬಸವಣ್ಣ. ಏಕೆಂದರೆ, ಯಾವ ಲೋಭವಿಲ್ಲದ ಸರಳ, ನಿರಾಳ ಮನಸ್ಸು ಬಸವಣ್ಣನದು. ಜೀವ ಜೀವಾತ್ಮರೆಲ್ಲ ಸರಿಸಮಾನವೆಂದು ಭಾವಿಸುವ ಬಸವಣ್ಣನಿಗೆ ಪಾತ್ರ, ಅಪಾತ್ರವೆಂದು ಭೇದವೆಣಿಸುವ ಲೋಕದ ವಿಚಾರ ಹಿಡಿಸುತ್ತಿರಲಿಲ್ಲ. 'ಯತ್ರಜೀವಃ ತತ್ರ ಜೀವಃ' ಎಂಬ ಶಿವಭಾವಿ ಬಸವಣ್ಣನಿಗೆ ದಯವೆ ಧರ್ಮವಾಗುತ್ತದೆ, ಜಗವೆ ತಾನಾಗಿ ನಿಂದವನಿಗೆ ದಾಸೀ ಪುತ್ರನೂ ಅಷ್ಟೆ, ವೇಶ್ಯಾ ಪುತ್ರನೂ ಅಷ್ಟೆ. ಅಂಥವರಿಗೆ ಶಿವದೀಕ್ಷೆಯಿತ್ತು ಶರಣರನ್ನಾಗಿ ಮಾಡಬೇಕೆಂದು ತವಕವುಳ್ಳ ಬಸವಣ್ಣನ ದಾರಿಯೆ ಬೇರೆ; ಅಂಥವರನ್ನು ರಸಾತಳಕ್ಕೆ ತಳ್ಳಿ ಅಪಹಾಸ್ಯ ಮಾಡುವ ಲೋಕದ ದಾರಿಯೆ ಬೇರೆ.

ಸಕಲ ಜೀವಾತ್ಮರಿಗೆ ಲೇಸ ಬಯಸುವ ಬಸವಣ್ಣನಿಗೆ ಸಮಾಜದಲ್ಲಿ ಕಂಡದ್ದು ತಿರುವು ಮುರುವು. ಜನ್ಮ ಜಾತಿಯಿಂದ ಮನುಷ್ಯನನ್ನು ಅಳೆಯುವುದು, ಅಂತ್ಯಜ ಅಸ್ಪೃಶ್ಯ ಮೊದಲಾದವರು ಕನಿಷ್ಠರು, ಮಾನವೀಯ ಹಕ್ಕುಗಳಿಂದ ವಂಚಿತರು, ಆಸೆ ಕಳಕೊಂಡವರು, ಭಾಷೆ ಕಳಕೊಂಡವರು. ಆದರೆ ಉಚ್ಚ ವರ್ಣದಲ್ಲಿ ಹುಟ್ಟಿದವರೆಲ್ಲ ಶ್ರೇಷ್ಠರು. ಮನುಷ್ಯರೆಲ್ಲ ಪರಮಾತ್ಮನ ಮಕ್ಕಳಾಗಿರುವಾಗ, ಈ ತಾರತಮ್ಯವೇಕೆ ? ಹೀನಕುಲದವರ ಮೇಲೆ ಮೇಲ್ವರ್ಗದವರ ಅನ್ಯಾಯ ಆಕ್ರಮಣ ವೇಕೆ ? ಈ ವಿಪರ್ಯಾಸವನ್ನು ಕಂಡು ಬಸವಣ್ಣನ ಮನಸ್ಸು ಅತ್ತುದುಂಟು. ಅವರೊಳಗಿನ ಶಿವಜೀವ ನರುಳುತ್ತಿರುವಾಗ– ಅವನೊಬ್ಬ ಇವನೊಬ್ಬ, ಅಲ್ಲೊಬ್ಬ ಇಲ್ಲೊಬ್ಬ ದೊಡ್ಡಾತನಾದರೇನು ಬಂತು ! ಎಲ್ಲರೂ ಬದುಕುವ ರೀತಿಯಲ್ಲಿ ಬದುಕಬೇಕು. ಬೆಳೆಯುವ ರೀತಿಯಲ್ಲಿ ಬೆಳೆಯಬೇಕು. ಮನುಷ್ಯಸ್ತರದಿಂದ ಕೆಳಗೆ ತಳ್ಳಲ್ಪಟ್ಟವರು. ಮೇಲೆದ್ದು ಮುಖವೆತ್ತಿ ಎಲ್ಲರೊಂದಿಗೆ ಬೆರೆಯುವಂತಾಗಬೇಕು. ಇವರಿಗೆ ತಮ್ಮ ಸುಖ ದುಃಖವನ್ನು ಹೇಳಿಕೊಳ್ಳಲು ಮುಕ್ತ ಅವಕಾಶ ಸಿಕ್ಕುವಂತಾಗ ಬೇಕು. ಮೂಲತಃ ಮನುಷ್ಯನಲ್ಲಿರುವ ಅರಿವನ್ನು ಎಚ್ಚರಿಸಿಕೊಳ್ಳುವಂತಾಗಬೇಕು. ಹೀಗೆ ಬಸವಣ್ಣನ ಅಂತಃಕರಣ ಸಾಕಾರಗೊಂಡು ಅನುಭವಮಂಟಪವೆಂಬುದು ಅಂದು ಅಸ್ತಿತ್ವದಲ್ಲಿ ಬಂತು.

ಹಾಗೆ ನೋಡಿದರೆ ಈ ವಿಶಾಲ ವಿಶ್ವವು ಜಗನ್ನಿಯಾಮಕ ಹುಟ್ಟುಹಾಕಿದ ಅನುಭವ ಮಂಟಪದ ಮೂಲವೆನ್ನಬಹುದು. ಇಲ್ಲಿ ಏಸೊಂದು ಅನಿಸಿಕೆ ಅನುಭವ, ಅಭಿಪ್ರಾಯ, ಸಂಪ್ರದಾಯ, ಏಸೊಂದು ಮನಸು, ಕನಸು, ಆಶೆ, ಭಾಷೆ, ಆಚಾರ

ವಿಚಾರಗಳು ! ಇವುಗಳ ಪರಿಣಾಮವಾಗಿ ವಿವಿಧ ಮತ, ಧರ್ಮ, ಸಂಸ್ಕೃತಿಗಳು. ಇವು ಮಾನವಕುಲದ ಕ್ಷೇಮವನ್ನು ಕಾಪಾಡಿದ್ದೂ ಉಂಟು. ಆ ಕ್ಷೇಮಕ್ಕೆ ಕಂಟಕವಾದುದೂ ಉಂಟು. ಹೂವು ಹಲವಾದರೂ, ಬಣ್ಣ ಪರಿಮಳ ಭಿನ್ನ ಭಿನ್ನವಾದರೂ ಆ ವೈವಿಧ್ಯದಿಂದ ಸಿಗುವ ಆಹ್ಲಾದ ಒಂದೇ ಅಲ್ಲವೇ ? ಭಿನ್ನತೆಯಲ್ಲಿ ಒಂದು ಸಾಮಾನ್ಯ ಸ್ವಾರಸ್ಯ ಸರಸವಿರುವುದನ್ನು ಈ ನಿಸರ್ಗದಿಂದ ಮನುಷ್ಯ (ಬುದ್ಧಿಜೀವಿಯಾಗಿಯೂ) ಕಲಿಯಲಿಲ್ಲ ! ಮನುಷ್ಯ ಭಿನ್ನತೆಯನ್ನು ಹಿಗ್ಗಿಸುವನು ಹೊರತಾಗಿ, ಹತ್ತಿರ ತಂದು ಕೂಡಿಸುವ, ಏಕತೆಯ ಸುಖವನ್ನು ಹಂಚಿಕೊಳ್ಳುವ ಔದಾರ್ಯದತ್ತ ಮನಸ್ಸು ಮಾಡಲೇ ಇಲ್ಲ. ಹೀಗೆ ಪ್ರೇಮಭೂಮಿಯಾದ ಜಗತ್ತು ದ್ವೇಷ, ಮತ್ಸರದಿಂದ ಕೆಡುತ್ತಿರುವುದನ್ನು ಕಂಡು, ಬಸವಣ್ಣನ ಕರುಳು ಕಳವಳಗೊಂಡುದುಂಟು. ಹೀಗಾಗಿ ಮನುಷ್ಯ–ಮನುಷ್ಯರಲ್ಲಿ ಅಪನಂಬಿಕೆ, ಅನ್ಯತೆ, ಭಿನ್ನತೆ ಬೆಳೆಯುತ್ತಿವೆ. ಇದಕ್ಕೆ ಮೂಲ ಕಾರಣ ಜಾತಿ–ಕುಲ, ಮೇಲು–ಕೀಳು. ಈ ಜಾತಿ–ವಿಜಾತಿಯನ್ನು ಆಮೂಲಾಗ್ರವಾಗಿ ಕಿತ್ತುಹಾಕಿ, ಕುಲ ಛಲವನ್ನಳಿಸಿ ಹಾಕಿ ಮಾನವಕುಲವೊಂದನ್ನು ಹುಟ್ಟುಹಾಕಿ, ಎಲ್ಲರೂ ಒಂದಾಗಿ ಚಂದಾಗಿ ಬದುಕುವಂತೆ ಮಾಡಲು ಏನು ಮಾಡಬೇಕು ? ದೇವನಾಗಬಲ್ಲ ಮನುಷ್ಯನಲ್ಲಿ ಅಂಥ ಉದಾತ್ತ ಗುಣ ಹಾಗೂ ವಿಶೇಷ ಶಕ್ತಿ ಇಲ್ಲವೆಂದರೆ ಹೇಗೆ ? ಬಸವಣ್ಣನಲ್ಲಿಯ ಈ ಚಿಂತನ ಮಂಥನ ಪ್ರಯೋಗ ಭೂಮಿಕೆಯಾಗಿ ರೂಪತಾಳಿದ್ದು ಅನುಭವಮಂಟಪವೆಂಬುದು.

ಈ ವಾಮ ಕ್ಷೇಮದಾಚೆ ಸಾಧ್ಯಾಸಾಧ್ಯದಾಚೆ ನಿಂದು, ಸಕಲ ಮಾನವ ಕುಲಕ್ಕೆ ಸಮಾನ ಗೌರವವನ್ನು ಜನ್ಮಸಾರ್ಥಕ ಮಾಡಿಕೊಳ್ಳಬಲ್ಲ ಒಂದು ಸನ್ಮಾರ್ಗವನ್ನೂ ನೀಡಿದಂಥ ಒಂದು–ವಿಚಾರ ವೇದಿಕೆ. ಗ್ರೀಸದಲ್ಲಿ ಹುಟ್ಟಿದ ಅರಿಸ್ಟಾಟಲ್, ಪ್ಲೇಟೋರಂಥ ತತ್ವಜ್ಞಾನಿಗಳನ್ನು ಸೃಷ್ಟಿಸಿದ್ದು ನಿಜವಾದರೂ, ಬಹುವಿಷಯ, ಬಹುವಿಧ, ಬಹುಮಟ್ಟದ ಅಲಕ್ಷಿತ ಜನರನ್ನು ಒಂದೆಡೆ ಕಲೆ ಹಾಕಿ, ವಿಚಾರ ನಿಷ್ಠುರನ್ನಾಗಿ, ಶಿಷ್ಟರನ್ನಾಗಿ ವಿಸ್ತೃತ ಪ್ರಮಾಣದಲ್ಲಿ ರೂಪಿಸಿದ್ದು, ಅನುಭವ ಮಂಟಪವೊಂದೇ ಒಂದು ಎಂದು ಹೇಳಿಕೊಳ್ಳುವ ಹೆಮ್ಮೆ ಕನ್ನಡಿಗರದಾಗಿದೆ. ಮಾನವೀಯತೆಯ ವಿಶಾಲ ಭೂಮಿಕೆಯ ಮೇಲೆ ಕಟ್ಟಲಾದ ಅನುಭವ ಮಂಟಪ— ಅಕ್ಷರಶಃ ಸಕಲರ ಸರ್ವೋದಯವನ್ನು ಸಮಾನತೆಯ ನೇಮವನ್ನು ಅನುಷ್ಠಾನದಲ್ಲಿ ತಂದಿದೆ ಎಂದು ಹೇಳಿದರೆ ಅತಿಶಯೋಕ್ತಿಯಲ್ಲ.

**"ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆರೆದಡೆ**
**ಮೇಲೆ ಪಲ್ಲವಿಸಿತ್ತು ನೋಡಾ"** **(ಬ ವ. ೪೨೦)**

ಮಾನವ ಕುಲದ ಬದುಕಿಗೆ ತಳಪಾಯದಂತಿರುವವರು— ದುಡಿದುಂಡು ಬದುಕುವ ಬದುಕಿಸುವ ಶ್ರೀಸಾಮಾನ್ಯರು, ಹಾಗೂ ಶೂದ್ರರಾಗಿ ಹುಟ್ಟಿದ ತಪ್ಪಿಗೆ ಅವಮಾನ ಕಾರಕ ಕ್ಷುದ್ರ ಕೆಲಸ ಮಾಡುತ್ತ ಬಂದ ದೀನ ದಲಿತರು, ಇಂಥವರು ಚೇತರಿಸಿ

ಕೊಳ್ಳುವಂತೆ ಮಾಡಿದಲ್ಲದೆ, ಮನುಷ್ಯಕುಲವೆಂಬುದು ಚೇತರಿಸಿಕೊಂಡು ಬಹುಮುಖ ವಾಗಿ ವಿಕಾಸಗೊಂಡು ಬದುಕಲರಿಯದು. ಬಸವಣ್ಣನ ಈ ಮೇಲಿನ ಧೋರಣೆ ವೈಚಾರಿಕವೂ ಆಗಿದೆ ಹಾಗು ವೈಜ್ಞಾನಿಕವೂ ಆಗಿದೆ.

ಈ ಬಸವ ಧೋರಣೆ ಬರಿ ಮಾತಾಗಿ ಉಳಿಯದೆ ಕ್ರಿಯಾಶೀಲ ಮಂಟಪ ವಾದುದರಿಂದ ಮೇದಾರ, ಕುಂಬಾರ, ಕುರುಬ, ಕೆಂಚ, ದನಗಾಹಿ, ನೇಕಾರ, ಮಡಿವಾಳ, ನೃತ್ಯಗಾರ, ನಗೆಗಾರ, ಬಹುರೂಪಗಾರ, ಢಕ್ಕೆಯಗಾರ, ಅಸ್ಪೃಶ್ಯ ಅಂತ್ಯಜ, ದಾಸೀಪುತ್ರ, ವೇಶ್ಯಾಪುತ್ರ, ವಿಪ್ರ, ವರ್ತಕ ಹಾಗೂ ಅರಸು, ಅರಸಿ, ಶೂದ್ರದೆಸೆಗೆ ಒಳಗಾದ ಹೆಣ್ಣು ಮಕ್ಕಳು—ಮನುಷ್ಯರೆಂಬವರೆಲ್ಲರೂ ಈ ಸಾಂಸ್ಕೃತಿಕ ಪರಿವರ್ತನೆಯ ಪ್ರಯೋಗಕ್ಕೊಳಪಟ್ಟು, ನಿಜ ಮಾನವರಾಗಿ, ಮಹಾಶರಣರಾಗಿ, ತತ್ವಜ್ಞಾನಿಗಳಾಗಿ, ವೈಚಾರಿಕ ವಚನಕಾರರಾಗಿ ಬೆಳಗಿದ್ದುದನ್ನು ನೋಡಿದರೆ, ಯಾರಿಗಾದರೂ ಆಶ್ಚರ್ಯವೆನಿಸುತ್ತದೆ.

ಈ ಶತಮಾನದಲ್ಲಿ ಅಸ್ಪೃಶ್ಯತೆಯನ್ನು ನಿವಾರಿಸುವಲ್ಲಿ ಮಹಾತ್ಮಾಗಾಂಧೀಜಿ ಹಾಗೂ ಡಾ|| ಅಂಬೇಡ್ಕರರು ಪ್ರಯತ್ನಿಸಿದ್ದುಂಟು. ಗಾಂಧೀಜಿಯವರಿಗೆ ರಾಜಕೀಯ ಸ್ವಾತಂತ್ರ್ಯಪ್ರಾಪ್ತಿಯೇ ಮುಖ್ಯ ಗುರಿಯಾಗಿದ್ದರೂ, ಅವರು ಮಾನವೀಯ ಕಳಕಳಿಯಿಂದ ತಮ್ಮದೇ ಆದ ನಿಲುವಿನಲ್ಲಿ ಬಹುಮುಖವಾಗಿ ಪ್ರಯತ್ನಿಸಿದ್ದುಂಟು. ದಲಿತರಾಗಿ ಹುಟ್ಟಿ, ದಲಿತರಿಗಾಗುವ ಅವಮಾನಕಾರಕ ಚಿತ್ರಹಿಂಸೆಯನ್ನು ಕಣ್ಣಾರೆ ಕಂಡು, ಸ್ವತಃ ಅನುಭವಿಸಿ ನೊಂದು ಬೆಂದ ಡಾ|| ಅಂಬೇಡಕರ ಅವರು ಅಸ್ಪೃಶ್ಯತೆ ಯನ್ನು ಆಮೂಲಾಗ್ರವಾಗಿ ಪರಿಣಾಮಕಾರಿಯಾಗಿ ಕಿತ್ತೆಸೆಯಲು ಯತ್ನಿಸಿದ್ದೂ ಉಂಟು. ಆದರೆ ಬಸವಣ್ಣ ಅಸ್ಪೃಶ್ಯರೊಂದಿಗೆ ಹಿಂದುಳಿದ ಸಕಲ ವರ್ಗವನ್ನೂ ಸಾಂಸ್ಕೃತಿಕವಾಗಿ ಉನ್ನತೀಕರಿಸಿದ್ದು — ಜಾಗತಿಕ ಕ್ರಾಂತಿಯ ಇತಿಹಾಸದಲ್ಲಿಯೆ ಗಮನಾರ್ಹವಾಗಿದೆ.

ಬಸವಣ್ಣ ಕೈಕೊಂಡ ಕ್ರಾಂತಿ ಸಮಗ್ರವಾದುದು. ಸಾಮಾಜಿಕ, ಔದ್ಯೋಗಿಕ, ಆರ್ಥಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ — ಮೊದಲಾದ ರಂಗಗಳಲ್ಲಿ ಅವನು ಕೈಕೊಂಡ ಕ್ರಾಂತಿ ವಿಶಿಷ್ಟವಾದುದು. ಲೌಕಿಕವನ್ನು ಕಡೆಗಣಿಸಿ. ಬರಿ ಪಾರಮಾರ್ಥಕ್ಕೆ ಪಟ್ಟ ಕಟ್ಟುವ ಭ್ರಮೆ ಬಸವಣ್ಣನದಲ್ಲ, ಮನುಷ್ಯನ ಅಂತರಂಗ ಬಹಿರಂಗವನ್ನು ಶುದ್ಧ ಗೊಳಿಸಿದಲ್ಲದೆ, ಲೌಕಿಕ ಜೀವನವನ್ನು ಉದಾತ್ತಗೊಳಿಸಿದಲ್ಲದೆ ಪಾರಮಾರ್ಥವೆಂಬುದು ಹುಟ್ಟಲಾರದು. 'ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ' ಎಂಬ ಬಸವಣ್ಣನ ಸಪ್ತ ಸೂತ್ರ ಇದನ್ನೇ ಹೇಳುತ್ತದೆ, ಶುಭ್ರಗೊಂಡ ಲೌಕಿಕವ ಪಾರಮಾರ್ಥವಾಗಿ ಮರುಹುಟ್ಟು ಪಡೆಯುವುದು !

ಈ ಶರೀರ ನಶ್ವರ, ಈ ಸಂಸಾರ ನೀರಿನ ಗುರುಳೆಯಂತೆ ಕ್ಷಣ ಭಂಗುರ.... ಹೀಗೆಂದು ಒಣ ವೇದಾಂತಕ್ಕೆ ಜೋತುಬಿದ್ದು, ಜೀವನ ವಿಮುಖರಾಗಿ ಕಾಡಿನತ್ತ

ಓಡುವ ಶುಷ್ಕ ವಿಚಾರ ಬಸವಾದಿ ಶರಣರದಲ್ಲ. ಆಶೆ ಆಮಿಷಗಳಲ್ಲಿ ಮುಳುಗಿ, ಮಾನವಜನ್ಮವನ್ನು ವ್ಯರ್ಥಗೊಳಿಸಿಕೊಂಡವರೂ ಅಲ್ಲ. ಯಾವುದೆಷ್ಟು ಉಚಿತವೊ ಅಷ್ಟನ್ನು ಸ್ವೀಕರಿಸಿ, ಬದುಕನ್ನು ಪ್ರಸಾದೀಕರಿಸಿ ಪ್ರೀತಿಸಿ, ಅಂತರಂಗ ಬಹಿರಂಗ, ಎರಡನ್ನೂ ತಿಳಿಗೊಳಿಸಿಕೊಂಡು ಬೆಳೆದವರು. ಇಂದ್ರಿಯಗಳನ್ನು ಹಾಗು ಅದರ ಉಪಾಧಿಗಳಾದ ಕಾಮ ಕ್ರೋಧಾದಿಗಳನ್ನು ಸಹ ಉದಾತ್ತ ಜೀವನಕ್ಕೆ ಪೋಷಕ ವಾಗುವಂತೆ ಪರಿವರ್ತಿಸಿ, ನಿಜ ಸುಖದ ನೆಲೆಯನ್ನು ಕಂಡು ಧನ್ಯರಾದವರು.

ಈ ಒಂದು ಪರಿವರ್ತನಶೀಲ ಪ್ರಸಾದೀಕರಣ ತತ್ವದಿಂದ ಮೂಲೆಗುಂಪಾದ ವರು ಮೇಲೇರಿ ಬರಲು ಸಾಧ್ಯವಾದದ್ದು : ಅಜ್ಞಾತರು ಸುಜ್ಞಾತರಾಗಿ ಹೊಳೆದದ್ದು, ಅನನುಭವಿಗಳು ಅನುಭಾವಿಗಳಾಗಿ ಬೆಳಗಿದ್ದು, ಅಕ್ಷರಶೂನ್ಯರು ಸಾಕ್ಷರರಾಗಿ, ವಚನ ಕಾರರಾಗಿ ಶರಣಜೀವನ ನಡೆಸಲು ಸಾಧ್ಯವಾದದ್ದು ! ಬದುಕಿಗೆ ಆಧಾರವಾದ ದುಡಿಮೆಯನ್ನು ಕಡ್ಡಾಯಿಗೊಳಿಸಿದ ಸಮಾಜ ವಿಜ್ಞಾನಿಗಳವರು. ಶುಭ್ರತೆ, ನೈತಿಕತೆ, ಸಾತ್ವಿಕತೆ, ಸಮಾನತೆಗಳಿಂದ ದುಡಿಮೆಗೊಂದು ಕಾಯಕಲ್ಪ ಕೊಟ್ಟು ಕಾಯಕವನ್ನಾಗಿಸಿದ ಪ್ರಜ್ಞಾವಂತರು ಶರಣರು. ವ್ಯಷ್ಟಿವಿಕಾಸಕ್ಕೆ ಕಾಯಕವಾದರೆ, ಸಮಷ್ಟಿ–(ಜೀವಕುಲ ಜಂಗಮ) ವಿಕಾಸಕ್ಕೆ ದಾಸೋಹವನ್ನು ಆಚರಣೆಯಲ್ಲಿ ತಂದವರು. ಈ ಕಾಯಕ–ದಾಸೋಹ ತತ್ವದಿಂದ ಲೌಕಿಕ ಬದುಕಿಗೆ ನೆಲೆಗಟ್ಟಾಗಿ ಪರಿಣಮಿಸಿದ್ದು, ಅಲೌಕಿಕ (ಪಾರಮಾರ್ಥಿಕ) ಬದುಕಿನತ್ತ ಮನುಷ್ಯನ ಮನ ವಾಲುವಂತೆ ಮಾಡಿದ್ದು ಅನುಭವ ಮಂಟಪದ ಮೂಲಕ. ಅಂಗದವಗುಣ ಕಳೆದುಕೊಂಡು, ಲಿಂಗಗುಣವನ್ನಳವಡಿಸಿಕೊಂಡು, ಆ ಲಿಂಗ ಅಂಗದೊಳಗಿಂಬು ಗೊಂಡ ನಿರಾಳ ಬಗೆಯ ಮಾನವ ಮೂರ್ತಿಯನ್ನು ರೂಪಿಸಿದ ಈ ಅನುಭವ ಮಂಟಪ ಒಂದು ಕಮ್ಮಟವೇ ಸೈ ! ಅನುಭವ ಮಂಟಪದಲ್ಲಿ ಪರಸ್ಪರರಲ್ಲಿ ಬಿಚ್ಚು ಮನಸ್ಸಿನಲ್ಲಿ ಜೀವನ ವಿಮರ್ಶೆ ನಡೆದು, ಈ ಜೀವನ ವಿಮರ್ಶೆ–ಜೀವನ ದರ್ಶನ ವಾಗಿ ಜೀವನ ದರ್ಶನ ಆತ್ಮ ದರ್ಶನವಾಗಿ, ಆತ್ಮದರ್ಶನ ಪರಮಾತ್ಮದರ್ಶನವಾಗಿ— ಪರಿಣಮಿಸಿ, ಜೀವಾತ್ಮ ಪರಮಾತ್ಮನಾಗುವುದು ಸಾಧ್ಯವೆಂಬ ಆತ್ಮವಿಶ್ವಾಸವನ್ನು ಮನುಷ್ಯನಿಗೆ ತಂದುಕೊಟ್ಟ ಹೆಗ್ಗಳಿಕೆ ಅನುಭವ ಮಂಟಪಕ್ಕೆ ಸಲ್ಲಬೇಕು !

ಹೀಗೆ ಅಲ್ಲಮಪ್ರಭುವನ್ನು ಶೂನ್ಯಪೀಠಕ್ಕೆ ಪ್ರಭುವನ್ನಾಗಿ, ಬಸವಣ್ಣನನ್ನು ಮಹಾಭಕ್ತನನ್ನಾಗಿ, ಚೆನ್ನಬಸವಣ್ಣನನ್ನು ಷಟ್‌ಸ್ಥಲ ಜ್ಞಾನಿಯನ್ನಾಗಿ, ಮಹಾದೇವಿ ಯಕ್ಕನನ್ನು ವೈರಾಗ್ಯಮೂರ್ತಿಯನ್ನಾಗಿ, ಸಿದ್ಧರಾಮನನ್ನು ಶಿವಯೋಗಿಯನ್ನಾಗಿ ಮತ್ತು ನುಲಿಯ ಚಂದಯ್ಯ, ಆಯ್ದಕ್ಕಿ ಮಾರಯ್ಯ, ಮೋಳಿಗೆಯ ಮಾರಯ್ಯ, ಮಾದರ ಚನ್ನಯ್ಯ, ಹರಳಯ್ಯ, ಕಕ್ಕಯ್ಯ, ಮೇದಾರ ಕೇತಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ —ಮೊದಲಾದ ಸಾಮಾನ್ಯರನ್ನು (ಕಾಯಕ ತತ್ವದ ಮೂಲಕ) ಅಸಾಮಾನ್ಯ ಶರಣರನ್ನಾಗಿ ಹಾಗೂ ಅಕ್ಕ ನಾಗಮ್ಮ,

ನೀಲಾಂಬಿಕೆ, ಗಂಗಾಂಬಿಕೆ, ಲಕ್ಕಮ್ಮ, ಸತ್ಯಕ್ಕ ಮುಂತಾದ ಮಹಿಳೆಯರನ್ನು ಅಸಾಧಾರಣ ಶರಣೆಯರನ್ನಾಗಿ ಅನುಭವ ಮಂಟಪ ರೂಪಿಸಿದ್ದು ನಿಜವಾದರೆ, ಈ ಮಹಾನುಭಾವಿಗಳು ಅನುಭವಮಂಟಪವನ್ನು ಲೋಕ ವಿಖ್ಯಾತ ಆಧ್ಯಾತ್ಮಿಕ ಸಂಸತ್ತನ್ನಾಗಿ ರೂಪಿಸಿದ್ದು ಅಷ್ಟೇ ನಿಜವಾಗಿದೆ! ಅಸಂಖ್ಯಾತರು ಕಾಶ್ಮೀರ, ಸೌರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ಮೊದಲಾದ ಹೊರ ನಾಡುಗಳಿಂದ ಕಲ್ಯಾಣಕ್ಕೆ ಬರಬೇಕಾದರೆ ಕಲ್ಯಾಣ ನಾಡಿನ ಕ್ರಾಂತಿಯು ಪ್ರಭಾವ ವೆಷ್ಟು! ಅನುಭವ ಮಂಟಪದಲ್ಲಿ ಕನ್ನಡ ಭಾಷೆಯಲ್ಲಿ ನಡೆಯುತ್ತಲಿದ್ದ ಅನುಭಾವ ಗೋಷ್ಠಿಯ ವಿಚಾರಗಳನ್ನು ಅರ್ಥಮಾಡಿಕೊಂಡರು ಹೇಗೆ! ಕನ್ನಡದಲ್ಲಿ ವಿಚಾರಪರ ವಚನಗಳನ್ನೂ ರಚಿಸಲು ಸಮರ್ಥರಾದುದು ಹೇಗೆ? ಅನುಭವ ಮಂಟಪ ಆಧ್ಯಾತ್ಮ ವೇದಿಕೆಯೊಂದಿಗೆ ಶಿಕ್ಷಣ ಸಂಸ್ಥೆಯ ಪಾತ್ರವನ್ನು ವಹಿಸಿರಬೇಕು. ಅಥವಾ ವಿದ್ಯಾ ಪೀಠದಂಥ ಸುವ್ಯವಸ್ಥಿತ, ಶೈಕ್ಷಣಿಕ, ಸಾಂಸ್ಕೃತಿಕ, ತಾತ್ವಿಕ ಮಹಾಕೇಂದ್ರವೊಂದು ಅಂದು ಅಸ್ತಿತ್ವದಲ್ಲಿ ಇದ್ದಿರಬೇಕು. ಇದು ಪರಿಶೀಲನಾರ್ಹವಾದ ಮತ್ತು ವಿಮರ್ಶೆ ಗೊಳಪಡಬೇಕಾದ ಕುತೂಹಲಕಾರಕ ವಿಷಯವಾಗಿದೆ. ತೀರ ಸಾಮಾನ್ಯರೆಂಬುವರು ರಚಿಸಿದ ಅಸಾಮಾನ್ಯವಾದ ಕೆಳಗಣ ವಚನಗಳನ್ನು ನೋಡಿದರೆ ಅಂದು ಅನುಭವ ಮಂಟಪ ವಹಿಸಿದ ಪಾತ್ರ ಅಗಾಧವಾಗಿದೆ ಎಂದು ಎನಿಸದಿರದು.

**೧. "ನಡೆ ನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಸೂತಕವಿಲ್ಲ,**
**ನುಡಿಲೇಸು ನಡೆ ಅಧಮವಾದಲ್ಲಿ ಅದೆ ಬಿಡುಗಡೆಯಿಲ್ಲದಹೊಲೆ**
**ಆಚಾರವೆ ಕುಲ ಅನಾಚಾರವೆ ಹೊಲೆ" –ಮಾದಾರ ಚೆನ್ನಯ್ಯ**

**೨. "ಮರೆದವರ ಮನದಲೆಲ್ಲವೂ ಮಾರಿ,**
**ಅರಿದವರ ಮನದಲೆಲ್ಲವೂ ಸ್ವಯಂ ಜ್ಯೋತಿ!**
**—ಢಕ್ಕೆಯ ಬೊಮ್ಮಣ್ಣ**

**೩. "ಕಲ್ಲು ಲಿಂಗವಲ್ಲ, ಉಳಿಯ ಮೊನೆಯಲ್ಲಿ ಒಡೆಯಿತ್ತು.**
**ಮರದೇವರಲ್ಲ ಉರಿಯಲ್ಲಿ ಬೆಂದಿತ್ತು.**
**ಇಂತಿವನೆಲ್ಲವನರಿವ ಚಿತ್ತ ದೇವರಲ್ಲ**
**ಕರಣಂಗಳ ಮೊತ್ತದೊಳಗಾಗಿ ಸತ್ವಗೆಟ್ಟಿತ್ತು"**
**—ವೀರ ಗೊಲ್ಲಾಳಯ್ಯ**

**೪. "ವೇಷವ ಹೊತ್ತು ದೋಷದಲ್ಲಿ ನಡೆದರೆ**
**ದೋಷಕ್ಕೆ ವೇಷ ಬಂಡ!" —ಜೇಡರ ದಾಸಿಮಯ್ಯ**

**೫. "ಕಾಯಕದಲ್ಲಿ ನಿರತನಾದರೆ ಗುರುದರುಶನವಾದರೂ**
**ಮರೆಯಬೇಕು. —ಆಯ್ದಕ್ಕಿ ಮಾರಯ್ಯ**

೬. ಕಾಯಕವಳಿದ ಠಾವಿನಲ್ಲಿ ಜೀವದ ಎಡೆಯಾಟವುಂಟೆ ?
—ಆಯ್ದಕ್ಕಿ ಲಕ್ಕಮ್ಮ

೭. ಅರಿವನರಿದಿಹೆನೆಂದು ಕ್ರಿಯೆಯ ಬಿಡಬಾರದು.
—ಮಡಿವಾಳ ಮಾಚಯ್ಯ

೮. ಕೊಲ್ಲದಿಪ್ಪುದೇ ಧರ್ಮ, ಅಧರ್ಮದಿಂದ
ಬಂದುದನೊಲ್ಲದಿಪ್ಪುದೇ ನೇಮ —ಉರಿಲಿಂಗ ಪೆದ್ದಿ

೯. ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ
ಹಾವಿನ ಸಂಗವೇ ಲೇಸು
ಕಾಯ ವಿಕಾರವ ಕಳೆದು, ಕಾಯದಲಿರ್ದರೆ
ಕಾಯದ ಸಂಗವೇ ಲೇಸು —ಮಹಾದೇವಿಯಕ್ಕ

೧೦. ಹೆಣ್ಣು ಹೆಣ್ಣಲ್ಲ
ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧಮಲ್ಲಿಕಾರ್ಜುನ —ಸಿದ್ಧರಾಮ

೧೧. ನೇಮದ ಕೂಲಿಯ ಬಿಟ್ಟು,
ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ,
ತಾ ಮಾಡುವ ಸೇವೆ ನಷ್ಟವಯ್ಯ ! —ನುಲಿಯ ಚಂದಯ್ಯ

೧೨. ವ್ರತವಾವುದೆಂದಡೆ ಪರಾಪೇಕ್ಷೆಯ ಮರೆದು,
ಪರಸತಿಯ ತೊರೆದು,
ಅಹುದಾದುದ ಹಿಡಿದು ಅಲ್ಲದಾದುದ ಬಿಟ್ಟು,
ಬಹು ದುಃಖವಂ ಮರೆದು,
ಇಂತೀ ಸರ್ವಗುಣ ಸಂಪನ್ನನಾಗಿ,
ಆತ್ಮಂಗರುಹಿನ ಶೀಲವಮಾಡಿ,
ಹೊರಗಣ ಮಾಟ ಒಳಗಣ ಕೂಟ ಉಭಯ ಶುದ್ಧವಾದಲ್ಲಿ
ಆಚಾರವೇ ಪ್ರಾಣವಾದ
ರಾಮೇಶ್ವರ ಲಿಂಗದ ಜಿಡ್ಡು ಹರಿಯಿತ್ತು !
—ಏಲೇಶ ಕೇತಯ್ಯ

ಕಾಲಾತೀತವಾಗಿ ದೇಶಾತೀತವಾಗಿ ಸಕಲ ಮಾನವ ಕುಲಕ್ಕೆ ಬೆಳಕು ನೀಡುವ ಮಾತು ಇವು. ನುಡಿ ನಡೆ ಸಿದ್ಧಾಂತವಾಗಿ ಹೊಳೆದ ಸ್ವಯಂ ಜ್ಯೋತಿ ಇವು. ಈ ನುಡಿಗಳಲ್ಲಿ ಬರಿ ಭಾವಾವೇಶವಿಲ್ಲ; ಬದುಕಿಗೆ ಒಂದು ಗಟ್ಟಿ ಸಂದೇಶವಿದೆ. ಸಾಮಾನ್ಯರು ಅಸಾಮಾನ್ಯರಾಗಬಲ್ಲರೆಂಬ, ಪತಿತರು ಪಾವನರಾಗಬಲ್ಲರೆಂಬ, ಸೋತ

ಜೀವಿಗಳಿಗೊಂದು ಭರವಸೆ ಇದೆ. ಮೇಲು ಕೀಳು ಎಂಬ ಭಿನ್ನತೆಯ ವಿಷಮತೆಯಿಂದಾಗಿ ದ್ವೇಷ ಅಸೂಯೆ ಕಲಹ, ವೈರ, ಕುಟಿಲ ಕರ್ಮಗಳಿಂದ ಹೊತ್ತಿ ಉರಿಯುತ್ತಿರುವ ಇಂದಿನ ಜನಾಂಗಕ್ಕೆ ಪರಿವರ್ತನಶೀಲ ವೈಚಾರಿಕ ವಿವೇಚನೆಯಿದೆ.

ಈ ವಚನಕಾರರ ಅನುಭಾವ ಬರಿ ಜ್ಞಾನವಲ್ಲ, ಕ್ರಿಯೆ ಜ್ಞಾನವಾಗಿ ಆ ಜ್ಞಾನ ಸಕಲ ಮಾನವ ಕುಲ ಜೀವನಕ್ಕೆ ಸ್ಪಂದಿಸುವ ವಿಜ್ಞಾನವಾಗಿ ಅನುಭಾವವಾಗಿ ಮೂಡಿ ಬಂದದ್ದು ! ಕ್ರಿಯೆ, ಜ್ಞಾನ, ವಿಜ್ಞಾನಗಳ ಮೇಳದಲ್ಲಿ ಮೂಡಿಬಂದ ವಿಚಾರಕ್ಕೆ ಮಾತ್ರ ಸಕಲ ಜೀವಾತ್ಮರನ್ನು ಪ್ರೀತಿಸಬಲ್ಲ ಮಾನವೀಯತೆಯುಳ್ಳ ಹೊಸ ಹುಟ್ಟನ್ನು ಮೂರ್ತಗೊಳಿಸಲು ಸಾಧ್ಯವಾಗಬಹುದು. ಇಂಥ ಹೊಸ ಹುಟ್ಟು ಪಡೆದ ಪ್ರೇಮನದಿಂದ ಹಸನಾದ ಪೀಳಿಗೆಯಿಂದಲೇ ಸಾತ್ವಿಕ ಜಗತ್ತನ್ನು ಕಟ್ಟುವುದು ಸಾಧ್ಯವಾಗಬಹುದು. ಹಾಗೆ ಹೊಸ ಹುಟ್ಟಿನವರು ಉದಯವಾಗಿ, ಹೊಸ ಜಗತ್ತಿನ ಉದಯಕ್ಕೆ ಕಾರಣರಾಗುವರೆಂಬ ಖಚಿತ ಭರವಸೆಯನ್ನು ಈ ಕಲ್ಯಾಣದ ಅನುಭವ ಮಂಟಪವು ನೀಡುವುದೆಂಬುದನ್ನೂ ಅರ್ಥಮಾಡಿಕೊಳ್ಳಬೇಕು !

## ೭.

# ಶಿವತತ್ತ್ವ ಸಾಹಿತ್ಯವಾಗುವ ಪರಿ

---

"ಮುತ್ತು ಉದಕದಲಾಗದು, ಉದಕ ಮುತ್ತಿನಲಾಗದು
ತತ್ತ್ವ ಘಟಿಸಿದ ಸುಮುಹೂರ್ತದಲ್ಲಲ್ಲದೆ
ಚಿತ್ತವೇದ್ಯವಾಗದು ಸದ್ಗುರುವಿನ ಕರುಣಕ್ಕಲ್ಲದೆ,
ಕರ್ತೃ ಕೂಡಲಸಂಗಮದೇವರ ಒಲವಿನ ದಯದ
ಚಿತ್ತವಿಡಿದಂಗಲ್ಲದೆ, ಶಿವತತ್ತ್ವ ಸಾಹಿತ್ಯವಾಗದು." (ಬ. ವ. ೮೦೭)

ಶಿವಾನುಭಾವ ಮತ್ತು ಸಾಹಿತ್ಯ ಎರಡರ ಮೇಲೆ ಬೆಳಕು ಚೆಲ್ಲಬಹುದಾದ ಈ ವಚನ ಬಸವಣ್ಣನವರ ಮುಖ್ಯ ವಚನಗಳಲ್ಲಿ ಒಂದಾಗಿದೆ. ಉದ್ದಿಷ್ಟ ವಿಷಯವನ್ನು ಸಮರ್ಪಕವಾಗಿ ವಿವರಿಸುವಲ್ಲಿ ಬಸವಣ್ಣನವರು 'ಮುತ್ತು, ಉದಕ'ದ ದೃಷ್ಟಾಂತವನ್ನು ಉಚಿತವಾಗಿ ಬಳಸಿಕೊಂಡಿದ್ದಾರೆ. ಈ ದೃಷ್ಟಿಯಿಂದ ಮೊದಲಿನ ಎರಡು ಚರಣಗಳು ಬಹು ಅರ್ಥವತ್ತಾಗಿವೆ.

"ತತ್ತ್ವ ಘಟಿಸಿದ ಸುಮುಹೂರ್ತದಲ್ಲಲ್ಲದೆ
ಮುತ್ತು ಉದಕದಲಾಗದು."

ಅಂಥದೊಂದು ಅಗತ್ಯವಾದ ಹಾಗು ಸೂಕ್ತವಾದ ತತ್ತ್ವ ಘಟಿಸಿದ ಸುಮುಹೂರ್ತ ಒದಗಿಬಂದಲ್ಲದೆ ಉದಕದಿಂದ ಮುತ್ತು ರೂಪಗೊಳ್ಳದು. ಇಲ್ಲಿ

---

**ದೇವರ ಒಲವಿನ ದಯದ ಚಿತ್ತನ್ನು ಪ್ರಸನ್ನೀಕರಿಸಿಕೊಂಡಲ್ಲಿ ಕವಿ ಬಯಸಿದ 'ಶಿವತತ್ತ್ವ' ಸಾಹಿತ್ಯವಾಗಿ ಪರಿಣಮಿಸಬಲ್ಲುದು, ಅನುಭಾವಿ ಪಡೆದ 'ಶಿವತತ್ತ್ವ' ಆಪ್ಯಾಯನಯೋಗ್ಯ ಫಲಪ್ರದ ವಸ್ತುವಾಗಬಲ್ಲುದು.**

---

'ಸುಮುಹೂರ್ತ' ಎಷ್ಟು ಮಹತ್ವದ ಪದವೋ, 'ತತ್ತ್ವ' ಅಷ್ಟೇ ಮಹತ್ವದ ಪದವಾಗಿದೆ. ಸಹಜ ನಿಜಸ್ಥಿತಿ, ಅಗತ್ಯವಾದ ಸತ್ಯಸ್ವರೂಪ – ಇವು 'ತತ್ತ್ವ' ಪದಕ್ಕೆ ಅನ್ವಯಿಸುವ ಅರ್ಥವಾಗಿವೆ. ಅಗತ್ಯ ಶುಭಗಳಿಗೆ, ಸಾನುಕೂಲ ಯೋಗಾಯೋಗ– ಇವು 'ಸುಮುಹೂರ್ತ'ದ ಅರ್ಥವಾಗಿವೆ. ಇಲ್ಲಿ ಸ್ವಾತಿ ನಕ್ಷತ್ರವೇ ಅಗತ್ಯವಾದ ನಿಜಸ್ಥಿತಿ (ತತ್ತ್ವ), ಹೀಗೆ ಸ್ವಾತಿಯ ಬಿಂದು ಸುಮುಹೂರ್ತದಲ್ಲಿ ಸಮುದ್ರದ ಸಿಂಪಿಯಲ್ಲಿ ಸೇರಿದಲ್ಲದೆ ಮುತ್ತಾಗಿ ಪರಿಣಮಿಸದು.

"ಉದಕ ಮುತ್ತಿನಲಾಗದು" : ನೀರಿನಿಂದ ಮುತ್ತಾಗಿ, ಆ ಮುತ್ತು ಮತ್ತೆ ಮರಳಿ ನೀರಾಗದು. ಈ ವಿಚಾರದಲ್ಲಿ ಅವರದೇ ಆದ ಇನ್ನೊಂದು ವಚನ ಪೋಷಕ ವಾಗಬಲ್ಲುದು.

"ಮಣ್ಣಮಡಕೆ ಮಣ್ಣಾಗದು ಕ್ರೀಯುಳಿದು
ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು ಕ್ರೀಯುಳಿದು
ಹೊನ್ನು ಕಬ್ಬುನವಾಗದು ಕ್ರೀಯುಳಿದು
ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರೀಯುಳಿದು
ಕೂಡಲಸಂಗನ ಶರಣನಾಗಿ
ಮರಳಿ ಮಾನವನಾಗನು ಕ್ರೀಯುಳಿದು." (ಬ. ವ. ೮೬೯)

ಮಡಕೆ, ತುಪ್ಪ, ಹೊನ್ನು, ಮುತ್ತು, ಶರಣ—ಒಮ್ಮೆ ನಿಷ್ಪತ್ತಿ (ಸಿದ್ಧಸ್ಥಿತಿ-ಪರಿಪೂರ್ಣಾವಸ್ಥೆ) ಹೊಂದಿದ ಮೇಲೆ ಮರಳಿ ಮಣ್ಣು, ಬೆಣ್ಣೆ, ಕಬ್ಬುನ, ನೀರು, ಮಾನವ—ಈ ರೀತಿ ಅನುಕ್ರಮವಾಗಿ ಪೂರ್ವಸ್ಥಿತಿ ಹೊಂದುವಂತಿಲ್ಲ. ಏಕೆಂದರೆ, ತತ್ತ್ವ ಘಟಿಸಿದ ಸುಮುಹೂರ್ತದಲ್ಲಿ ನಿಷ್ಪತ್ತಿಹೊಂದಿದ ಮೇಲೆ ಪೂರ್ವಾಶ್ರಯ ಪಡೆಯಲಾರವು. ಹೂವು ಮಿಡಿಯಾಗಿ, ಮಿಡಿ ಹಣ್ಣಾಗಿ, ಆ ಹಣ್ಣು ಮರಳಿ ಮಿಡಿಯಾಗದು, ಹೂವಾಗದು.

ಮುಂದಿನ ಮೂರು ಚರಣಗಳು ಉದ್ದಿಷ್ಟ ವಿಷಯಕ್ಕೆ ಅನ್ವಯಿಸಿದಂಥವು :

"ಚಿತ್ತವೇದ್ಯವಾಗದು ಸದ್ಗುರುವಿನ ಕರುಣಕ್ಕಲ್ಲದೆ"

ಇದು ಶಿವತತ್ತ್ವ ಸಾಹಿತ್ಯವಾಗಿ ಪರಿಣಮಿಸುವಲ್ಲಿ ಮೊದಲ ಘಟ್ಟ. ಕವಿಗೆ ರಸಾನುಭವ ಮೊದಲ ಮೆಟ್ಟಿಲು. ಅನುಭಾವಿಗೆ ಶಿವಾನುಭವ ಮೊದಲ ಮೆಟ್ಟಿಲು. ಈರ್ವರಿಗೂ (ಅನುಕ್ರಮವಾಗಿ) ರಸಾನುಭವ, ಶಿವಾನುಭವವುಂಟಾಗುವಲ್ಲಿ ಸದ್ಗುರುವಿನ ಕರುಣೆ ಅತ್ಯಗತ್ಯ.

ಎಲ್ಲರೂ ಬಹುತರವಾಗಿ ಸೂರ್ಯೋದಯ ಸೂರ್ಯಾಸ್ತಗಳನ್ನು ನೋಡುತ್ತಾರೆ. ಅಂಥ ದೃಶ್ಯಗಳಲ್ಲಿ ಕವಿಗೆ ಸೌಂದರ್ಯ ಕಾಣು(ವೇದ್ಯವಾಗು)ವಂತೆ ಉಳಿದವರಿಗೇಕೆ ಕಾಣುವುದಿಲ್ಲ ? ಅಲ್ಲಿ ಅನುಭಾವಿಗೆ ಸತ್ಯಸ್ವರೂಪ ಕಾಣುವಂತೆ ಉಳಿದವರಿಗೇಕೆ ಕಾಣುವುದಿಲ್ಲ ? ಅವರಿಬ್ಬರೂ ಸದ್ಗುರುವಿನ ಕರುಣಕ್ಕೆ ಪಾತ್ರರಾದವರು. ಯಾರು ಏನನ್ನು ಬಯಸುತ್ತಾರೆ, ಯಾವುದರಲ್ಲಿ ಭಕ್ತಿಯಿಡುತ್ತಾರೆ ಅದನ್ನವರು ಪಡೆಯುತ್ತಾರೆ. ಒಳಗಿನೊಳಗಿನ ಒಲವು (ಹಸಿವು) ತನ್ನ ಇಷ್ಟಾರ್ಥವನ್ನು ಹುಡುಕುತ್ತ ಹುಡುಕುತ್ತ ಅಂಥ ಅಲೌಕಿಕ ದೃಶ್ಯದಲ್ಲಿ ಕೊನೆಗೆ ಕಂಡುಕೊಳ್ಳುತ್ತದೆ. ಹಾಗೆ ಹಂಬಲ, ಭಕ್ತಿ, ಒಲವು—ಉಳ್ಳವರಿಗೆ ಸದ್ಗುರುವಿನ ಕರುಣೆಯಾಗುತ್ತದೆ. ಆ ಕರುಣೆಯಿಂದ ಅಲ್ಲಿ ಕವಿಗೆ ರಸಲೋಕ ಕಂಡರೆ, ಅನುಭಾವಿಗೆ ಶಿವನ ಸತ್ಯಸ್ವರೂಪವೆ ಗೋಚರಿಸುತ್ತದೆ. ಹೀಗಾಗುವುದೆ ಚಿತ್ತಕ್ಕೆ ವೇದ್ಯವಾಗುವುದು. ಒಲವಿಲ್ಲದವರಿಗೆ ಇವೆರಡೂ ಇಲ್ಲ.

**"ಕರ್ತೃ ಕೂಡಲಸಂಗಮದೇವರ ಒಲವಿನ ದಯದ ಚಿತ್ತವಿಡಿದಂಗಲ್ಲದೆ, ಶಿವತತ್ತ್ವ ಸಾಹಿತ್ಯವಾಗದು."**

ಇದು ಕೊನೆಯ ಘಟ್ಟ, ಮುಖ್ಯಘಟ್ಟ. ದೇವರದು ಒಲವಿನ ದಯದ ಚಿತ್ತ. ಇಲ್ಲಿ 'ಒಲವು', 'ದಯ'—ಎರಡೂ ಮಹತ್ವದ ಪದಗಳು. ದೇವರ ದಯೆಯಿಲ್ಲದೆ ಇಷ್ಟಾರ್ಥಸಿದ್ಧಿ ಅಸಾಧ್ಯ. ಆದರೆ, ಅವನ ದಯೆಯೊಂದೇ ಸಾಲದು. ಒಲವಿಲ್ಲದ ಕೊಡುಗೆ ಆಪ್ಯಾಯನವಲ್ಲ. ದೇವರ ಒಲವಿನಿಂದ ಬಂದ ದಯೆ ಆಪ್ಯಾಯನ.

ತಾನಾಗಿ ಒಲಿದು ದಯೆಗರೆಯುವುದು ಬೇರೆ. ತನ್ನ ಪಾತ್ರತೆಯಿಂದ ಅವನ ಒಲವಿನ ದಯದ ಚಿತ್ತವಿಡಿ (ಚಿತ್ತಹಿಡಿ) ಯುವುದು ಬೇರೆ. (ದೇವರ ಒಲವಿನ ದಯದ ಚಿತ್ತವಿಡಿದಂಗಲ್ಲದೆ ಶಿವತತ್ತ್ವ ಸಾಹಿತ್ಯವಾಗದು).

ಹೀಗೆ ದೇವರ ಒಲವಿನ ದಯದ ಚಿತ್ತನ್ನು ತನ್ನ ಪಾತ್ರತೆಯಿಂದ ಪ್ರಸನ್ನೀಕರಿಸಿ ಕೊಂಡಲ್ಲದೆ ಶಿವತತ್ತ್ವ ಸಾಹಿತ್ಯವಾಗದು. ಚಾರಿತ್ರ್ಯಶುದ್ಧಿ, ದೇವರಲ್ಲಿ ಅನನ್ಯ ಭಕ್ತಿ. ಸರ್ವಾರ್ಪಣಭಾವ—ಇವುಗಳಿಂದ ಮಾತ್ರ ಈ ಪಾತ್ರತೆ ಬರಬಲ್ಲುದು.

'ಶಿವ' ಈ ಪದಕ್ಕೆ 'ಈಶ್ವರ' ಎಂಬುದು ಒಂದು ಅರ್ಥ. ಕಲ್ಯಾಣ ಅಥವಾ 'ಮಂಗಳ' ಇನ್ನೊಂದು ಅರ್ಥ, ಕವಿಯ ದೃಷ್ಟಿಯಲ್ಲಿ 'ಶಿವತತ್ತ್ವ' ಲೋಕ ಕಲ್ಯಾಣ ಬಯಸುವ ಬರಹ (ವಾಙ್ಮಯ)ವೆನಿಸಿದರೆ, ಅನುಭಾವಿಯ ದೃಷ್ಟಿಯಲ್ಲಿ ಶಿವಾನುಭವವೆನಿಸುವುದು. ಕವಿ, ಅನುಭಾವಿ—ಈರ್ವರ ಗುರಿ ಒಂದೇ—ಲೋಕ ಕಲ್ಯಾಣ ಬಯಸುವುದು. ಈ ದಿಶೆಯಲ್ಲಿ ಕವಿಗೆ ಸಾಹಿತ್ಯ ಪರಿಕರ (ಸಾಧನ)ವಾದರೆ, ಅನುಭಾವಿಗೆ ಶಿವಾನುಭವ ಪರಿಕರವಾಗುತ್ತದೆ. ಕವಿಯ ದೃಷ್ಟಿಯಲ್ಲಿ ಸಾಹಿತ್ಯವೆಂಬುದು ವಾಙ್ಮಯವೆನಿಸಿದರೆ, ಅನುಭಾವಿಯ ದೃಷ್ಟಿಯಲ್ಲಿ ಅಪ್ಯಾಯನಯೋಗ್ಯ ವಸ್ತು ಅಥವಾ ಸಿದ್ಧಾಂತವೆನಿಸುವುದು. ಈ ರೀತಿ ದೇವರ ಒಲವಿನ ದಯದ ಚಿತ್ತನ್ನು ಪ್ರಸನ್ನೀಕರಿಸಿಕೊಂಡಲ್ಲಿ, ಕವಿ ಬಯಸಿದ 'ಶಿವತತ್ತ್ವ' ಸಾಹಿತ್ಯವಾಗಿ ಪರಿಣಮಿಸಬಲ್ಲುದು, ಅನುಭಾವಿ ಪಡೆದ ಶಿವತತ್ತ್ವ (ಶಿವಾನುಭವ) ಅಪ್ಯಾಯನಯೋಗ್ಯ ಫಲಪ್ರದ ವಸ್ತು (ಸಿದ್ಧಾಂತ)ವಾಗಬಲ್ಲುದು. ಇಲ್ಲವಾದರೆ ಅದೊಂದು ಬರೀ ಶಾಸ್ತ್ರವಾಗಿ ವಿಚಾರವಾಗಿ ನಿಷ್ಕ್ರಿಯೆಯಲ್ಲಿ ಪರ್ಯವಸಾನ ವಾಗಬಹುದು.

ಹೀಗೆ, ಬಸವಣ್ಣನವರು 'ಮುತ್ತು, ಉದಕ'ದ ದೃಷ್ಟಾಂತದಿಂದ ಶಿವತತ್ತ್ವ ಸಾಹಿತ್ಯವಾಗುವ ಪರಿಯನ್ನು ಮನಂಬುಗುವಂತೆ ಚಿತ್ರಿಸಿದ್ದಾರೆ. ಸಿದ್ಧಸ್ಥಿತಿ ಪಡೆದ ಮುತ್ತು ಮರಳಿ ಮತ್ತೆ ನೀರಾಗದಂತೆ, ಸಿದ್ಧಸ್ಥಿತಿ ಪಡೆದ ಸಾಹಿತ್ಯ ಮರಳಿ ಶಬ್ದವಾಗದು, ಅಥವಾ ವೃಥಾ ವಿಚಾರವಾಗದು. ಪರಿಪೂರ್ಣ ಸಿದ್ಧಸ್ಥಿತಿ, ಫಲಪ್ರದಯೋಗ್ಯಸ್ಥಿತಿ. ಈ ಅರ್ಥದಲ್ಲಿ 'ಸಾಹಿತ್ಯ' ಎಂಬ ಪದವನ್ನು ಅನುಭಾವಿ-ಕವಿಯಾದ ಬಸವಣ್ಣನವರು ಬಳಸಿಕೊಂಡಿದ್ದಾರೆ.

೮.

# ದಾಸೋಹಧರ್ಮ

---

ಎಂಥ ಶಾಂತಿ, ಏನು ಸೊಬಗು, ಆನಂದವೆ ಅರಳಿ ನಿಂತಿದೆ ಇಲ್ಲಿ ! ಮೂಡಲ ಮನೆಯ ಚಿನ್ನದಂಗಣದಲ್ಲಿ ರನ್ನ ಮಾಣಿಕ ಬಿಡಿಸಿ ಬರೆದ ರಂಗವಲ್ಲಿ, ತಂಗಾಳಿ ತೀಟದ ರಸಚೇತನದ ರಸಧಾರೆ. ಪಕ್ಷಿಕುಲ ಸಂಗೀತದ ರಸಾನಂದ ಸಂಯೋಜನೆ ! ಯಾರ ವರದಾನವಿದು ? ಯಾವ ಚಿದ್ಬೆಳಗು ಈ ಬೆಳಗನ್ನು ಬೆಳಗಿದೆ ? ಮೂಡಲ ಮನೆ ಮಹಾದಾಸೋಹ ಮಂದಿರವಾಗಿದೆ. ದಯಾಘನನ ಘನವಾದ ಮನವೇ ಇಲ್ಲಿ ವರಪ್ರಸಾದವಾಗಿ ಸೂರೆಗೊಂಡಿದೆ. ತನು ಮನ ಭಾವಕ್ಕೆಲ್ಲ ವಿಭಿನ್ನ ರುಚಿಯ ಪ್ರಸಾದವುಣಿಸಿ, ಚೇತರಿಸುತ್ತಲಿದೆ. ಕರ್ತಾರನ ಈ ದಾಸೋಹದಲ್ಲಿ ಮೈಮನವೆಲ್ಲ ಬಾಯಾಗಿ ಉಂಡರೂ ತೀರದ ತೃಪ್ತಿ !

ನಿಸರ್ಗದ ಮಕ್ಕಳಾಗಿ ಈ ಅಪೂರ್ವ ದಾಸೋಹವನ್ನು ಕಂಡವರೆಷ್ಟು ಜನ, ಈ ಮಹಾ ಪ್ರಸಾದವುಂಡು ತಣಿದವರೆಷ್ಟು ಜನ, ಹಕ್ಕಿಪಕ್ಕಿ ಈ ಮಹಾ ಪ್ರಸಾದ ಉಂಡು ಪಡೆದ ಆನಂದವನ್ನು ಅವುಗಳ ಸವಿರಾಗದಲ್ಲಿ, ಹಾರಾಡುವ ಹಿಗ್ಗಿನಲ್ಲಿ ನೋಡಬೇಕು. ಮೂಡಲಮನೆ ತಾ ಪಡೆದ ಶಾಂತಿ ಸೊಬಗಿನ ಐಸಿರಿಯ ಪ್ರಸಾದವನ್ನು ಪಡುವಣ ಮೊದಲುಗೊಂಡು ದೆಸೆದೆಸೆಗೆಲ್ಲ ಕೊಟ್ಟು ಕೃತಾರ್ಥವಾಗಿದೆ ! ತಾನು ಪಡೆದುದನ್ನು ಮನವೊಪ್ಪಿ ಕೊಡುವುದೆ ದಾಸೋಹವೆಂಬ ಶಾಸನವನ್ನು ಬರೆದಂತಿದೆ ಈ ಬೆಳಗು !!

**‘‘ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ**
**ಸುಳಿದು ಬೀಸುವ ವಾಯು ನಿಮ್ಮ ದಾನ !’’**

ಜೇಡರ ದಾಸಿಮಯ್ಯನ ಈ ಅನುಭಾವ ನಿಟ್ಟಿನಲ್ಲಿ ಎಷ್ಟೊಂದು ನಿತ್ಯ ಸತ್ಯವಾಗಿ ಪರಿಣಮಿಸಿದೆ. ಸೃಷ್ಟಿಕರ್ತ ಈ ವಿಶ್ವವನ್ನೇ ದಾಸೋಹವನ್ನಾಗಿ ಮಾಡದಿದ್ದರೆ, ಇಳೆ ಬೆಳೆ ಆದಿಯಾಗಿ ಸಕಲ ಸಂಪದವನ್ನು ಪ್ರಸಾದವನ್ನಾಗಿ ದಯಪಾಲಿಸಿ ಸಲಹದಿದ್ದರೆ ಸಕಲ ಜೀವಾತ್ಮರ ಹಾಡು ಪಾಡು ಏನಾಗಬಹುದಿತ್ತು ?

ಆದರೆ ಅವನ ಮಕ್ಕಳಾಗಿ ಬಂದ ನಮಗೆ ಅವನ ದಾಸೋಹದ ದಾರಿಯಲ್ಲಿ ನಡೆಯಬೇಕೆಂಬ ಪ್ರಜ್ಞೆ ಹೊಳೆದುದುಂಟೆ ? ಅವನು ಕೊಟ್ಟ ಪ್ರಸಾದದಲ್ಲಿ ಒಂದಿಷ್ಟನ್ನು ಹಸಿದ ಜೀವ ಜಂಗಮಕ್ಕೆ ಕೊಟ್ಟು ಕೃತಾರ್ಥರಾಗಬೇಕೆಂಬ ಅರಿಕೆ

ನಮ್ಮಲ್ಲಿ ಮೂಡಿರುವುದುಂಟೆ ? ನಮ್ಮನ್ನೇ ನಾವು ವಿಚಾರಿಸಿಕೊಳ್ಳಬೇಕು, ನಮ್ಮ ನಡವಳಿಕೆಯನ್ನು ನಾವೇ ಪ್ರಶ್ನಿಸಬೇಕು.

ಆದರೆ, ಶರಣರ ರೀತಿಯೇ ಬೇರೆ, 'ದೇಹಭಾವದ ಅಹಂಕಾರವು ದಾಸೋಹಂಭಾವದೊಳಗಲ್ಲದೆ ಅಳಿಯದೆಂದು ಶರಣರೆಲ್ಲ ದಾಸೋಹಕ್ಕೆ ತನು–ಮನ–ಧನವನರ್ಪಿಸಿ ದಾಸೋಹಿಯಾದರು, ಆದರೆ ದೇಹ ಭಾವದಲ್ಲಿ ಮುಳುಗಿದ ಸಾಧಾರಣ ಮನುಷ್ಯನು—ಕರಣೇಂದ್ರಿಯಗಳ ಸ್ವಚ್ಛಂದ ಸುಖವೆ ತನ್ನ ಜೀವನೋದ್ದೇಶವೆಂದು ಭಾವಿಸಿದ್ದಾನೆ. ದೇಹವೆಂಬುದು ತನಗೆ ಆಶ್ರಯವಿತ್ತ ಗೂಡು, ತನ್ನ ನಿಜಸ್ವರೂಪ ಅಂಗವಲ್ಲ, ಲಿಂಗ ! ಆದರೆ, ಅಂಗ (ದೇಹ)ವನ್ನು ಅಲಕ್ಷಿಸಬೇಕೆಂದು ಇದರ ಅರ್ಥವಲ್ಲ. ಏಕೆಂದರೆ,

**"ಕೂಡಲ ಸಂಗಮದೇವರ ನೊಲಿಸಬಂದ**
**ಪ್ರಸಾದ ಕಾಯುವ ಕೆಡಿಸಲಾಗದು... ?"**

ಎಂದು ಬಸವಣ್ಣ ಸ್ವಾನುಭಾವದಿಂದ ನುಡಿದಿದ್ದಾನೆ. ಆದುದರಿಂದ, ಈ ಅಂಗವನ್ನು ಕೆಡಿಸದೆ ಲಿಂಗವನ್ನಾಗಿ ಮಾಡಿ, ತಾನೂ ಲಿಂಗವಾಗಿ ನಿಲ್ಲುವುದೇ ತನ್ನ ಪರಮೋದ್ದೇಶ ವೆಂಬುದನ್ನು ಅರಿತುಕೊಂಡರೆ ಲೇಸು. ಈ ಅರಿವು ಬರುವುದು ದಾಸೋಹಂಭಾವದಿಂದ.

**"ತನುವ ಗೆಲಲರಿಯದೆ ಮನವ ಗೆಲಲರಿಯದೆ**
**ಧನವ ಗೆಲಲರಿಯದೆ, ಭ್ರಮೆಗೊಂಡಿತ್ತು ಲೋಕವೆಲ್ಲವು**
**ತನುವ ದಾಸೋಹಕ್ಕೆ ಸವೆಸಿ ಮನವ ಲಿಂಗಧ್ಯಾನದಲ್ಲಿ ಸವೆಸಿ**
**ಧನವ ಜಂಗಮದಲ್ಲಿ ಸವೆಸಿ ಗೆಲಬಲ್ಲರೆ**
**ಸಂಗನಬಸವನಲ್ಲದೆ ಮತ್ತಾರನು ಕಾಣೆ.."**

ಪ್ರಭುದೇವ ಮೆಚ್ಚಿ ನುಡಿದ ಮಾತಿದು. ದೇಹಭಾವದಲ್ಲಿ ಮುಳುಗಿದ ಮನುಷ್ಯರಿಗೂ, ಅದರಿಂದ ಮೇಲೆದ್ದು ಬಂದ ಬಸವಣ್ಣ ಇರುವ ಅಂತರವಿಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಅವರು (ಮನುಷ್ಯರು) ದೇಹ ಭಾವದಲ್ಲಿ ಸುಖಿಸಿ ಗೆದ್ದೆವೆಂಬ ಭ್ರಮೆಯಲ್ಲಿ ಸೋಲುತ್ತಾರೆ. ಬಸವಣ್ಣ ಎಲ್ಲವನ್ನು ಜಂಗಮಲಿಂಗ ದಾಸೋಹಕ್ಕೆ ಒಪ್ಪಿಸಿ (ಸೋತು) ಶರಣಾಗತನಾಗಿ ಗೆದ್ದುಕೊಂಡಿದ್ದಾನೆ. ಗುರು, ಲಿಂಗ, ಜಂಗಮ ಇವು ಪರಶಿವನ ಮೂರು ರೂಪಗಳು. ತನು–ಮನ–ಧನವ ಗೆಲ್ಲುವು ದೆಂದರೆ ಈ ಮೂರನ್ನು ಮೂರಕ್ಕೆ ಅರ್ಪಿಸಿಬಿಡುವುದು. ತನುವ ಗುರುವಿಗರ್ಪಿಸಿ, ಗುರುವಿನಲ್ಲಿ ಗುರುವಾಗಿ ನಿಲ್ಲಬಲ್ಲ ಉಪಾಸಕ. ಮನವ ಲಿಂಗಕ್ಕರ್ಪಿಸಿ ಲಿಂಗದಲ್ಲಿ ಲಿಂಗವಾಗಬಲ್ಲನು. ಧನವ ಜಂಗಮಕ್ಕೆ ಅರ್ಪಿಸಿ, ಜಂಗಮದಲ್ಲಿ ಜಂಗಮವಾಗಬಲ್ಲ ನಾತನು. ಹೀಗೆ, ತ್ರಿವಿಧಕ್ಕೆ ತ್ರಿವಿಧವನರ್ಪಿಸಿ ತ್ರಿವಿಧ ಮುಖದಲ್ಲಿ ಶಿವಸ್ವರೂಪ ಪಡೆಯುವ ಸಮರ್ಪಣ ಸದ್ಭಾವವೆ ದಾಸೋಹಂಭಾವವಾಗಿದೆ !

**ಸೋಽಹಂ – ಶಿವೋಽಹಂ – ದಾಸೋಽಹಂ :**

**"ಸೋಽಹಂ ಎಂಬುದು ಅಂತರಂಗದ ಮದ ನೋಡಯ್ಯ,
ಶಿವೋಽಹಂ ಎಂಬುದು ಬಹಿರಂಗದ ಮದ ನೋಡಯ್ಯ,
ಈ ದ್ವಂದ್ವವನಳಿಸಿ ದಾಸೋಽಹಂ ಎಂದೆನಿಸಯ್ಯ,
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ !"**

ಸಿದ್ಧರಾಮೇಶ್ವರನ ಈ ವಚನ ದಾಸೋಹದ ಬಗೆಗೆ ಒಂದು ಮಾರ್ಮಿಕ ವ್ಯಾಖ್ಯೆಯಾಗಿದೆ. 'ಸೋಽಹಂ'— ನಾನೇ ಅವನು (ಶಿವನು) ಎನ್ನುವಲ್ಲಿ ಒಂದು ತರದ ಮದವಿದೆ. 'ಶಿವೋಽಹಂ'–ನಾನೇ ಶಿವನು ಎನ್ನುವಲ್ಲಿ ಸಹ ಒಂದು ಬಗೆಯ ಹಮ್ಮು ಇದೆ. ಜೀವ ಶಿವನಾಗಬಯಸುವುದು ತಪ್ಪಲ್ಲ. ಅದುವೆ ಮಾನವನ ಮಹೋದ್ದೇಶ. ಕಾಯಿ ಕಸುಕಾಗಿರುವಾಗ ಅದನ್ನು ಹಣ್ಣೆಂದು ಕರೆಯುವುದು ಹೇಗೆ ? ಪಕ್ವತೆ ಬಾರದೆ ಹಣ್ಣಾಗುವುದೆಂತು? ಶಿವನಾಗುವ ಮೊದಲೆ 'ಶಿವೋಽಹಂ' ಎನ್ನುವುದು ಹೇಗೆ? ಹಾಗೆನ್ನುವುದು ಅಹಮಿಕೆಯ ಲಕ್ಷಣ, ಅಹಮಿಕೆಯೆಂಬುದು ಮನೋವಿಕಾರ! ಈ ವಿಕಾರವಿರುವೆಡೆಯಲ್ಲಿ ನಿರ್ವಿಕಾರ ನಿರಂಜನ ರೂಪಿ ಶಿವನು ಸುಳಿಯಲಾರ. ಈ 'ಸೋಽಹಂ', 'ಶಿವೋಽಹಂ' ದ್ವಂದ್ವವಳಿದಾಗ ದಾಸೋಽಹಂ ಭಾವ ಅಂಕುರಿಸುವುದು. 'ದಾಸೋಽಹಂ' ಭಾವ ಪಕ್ವಗೊಂಡಾಗ 'ಶಿವೋಽಹಂ' ಭಾವ ತಾನಾಗಿ ಬೆಳಗುವುದು. ಶಿವನಾದಾಗ 'ಶಿವೋಽಹಂ' ಎಂದು ಹೇಳಿಕೊಳ್ಳುವುದಿಲ್ಲ. ಆಗದವನು ಹೇಳಿ ಕೊಳ್ಳುತ್ತಾನೆ; ಆದವನು ಮೌನಿಯಾಗಿರುತ್ತಾನೆ !

ಹಾಗಾದರೆ, ಈ ದಾಸೋಹವೆಂದರೇನು ? ಒಂದೇ ಮಾತಿನಲ್ಲಿ ಹೇಳುವಷ್ಟು ಸುಲಭವಲ್ಲ. "ಇಲ್ಲಿ ದಾಸನೆಂದರೆ ಏನೊಂದರಿಯದ ಏನೊಂದನ್ನೂ ಆಚರಿಸಲು ಬಾರದ, ಯಾವ ಅನುಭವವಿಲ್ಲದ ಸೇವಕ ಎಂದರ್ಥವಲ್ಲ. ಸನ್ನಿಹಿತ ಸಂಬಂಧವುಳ್ಳವನೆಂದರ್ಥ, ಶಿವನೇ ತಾನಾಗಿದ್ದು ತನ್ನ ಉಪಾಸನೆಯಲ್ಲಿ ತಾನೇ ನಿರತನಾಗಿರುವವನು ಎಂದು ಅದರ ಅಭಿಪ್ರಾಯ"[೧]

**ಶರೀರಾದಿ ಪದಾರ್ಥಂ ಚ ದತ್ವಾದಾನಂ ಸಮರ್ಪಣಂ |
ಸಮರ್ಪ್ಯ ಸೋಽಹಮಸ್ಮೀತಿ ದಾಸೋಽಹಂಭಾವ ಉಚ್ಯತೇ ||**[೨]

ಶರೀರಾದಿ ಪದಾರ್ಥಗಳನ್ನು ದಾನ ಮಾಡುವುದು ದಾಸೋಹಂಭಾವದ ಇಂಗಿತವಾಗಿದೆ. ಇಲ್ಲಿ ವ್ಯಕ್ತವಾದ 'ದಾನ' ಪದದಲ್ಲಿ ಮೇಲರಿಮೆಯ ಭಾವವಿಲ್ಲ. ನಾನು ದಾನ ಮಾಡುವವ ಎಂಬ ಅಹಮಿಕೆಯ ವಾಸನೆಯಿಲ್ಲ, ಕೊಡುವ ದಾನದಲ್ಲಿ ಸದುವಿನಯದ ಸಮರ್ಪಣ ಭಕ್ತಿಭಾವವಿದೆ, ಏನೆಲ್ಲವನ್ನು ಕೊಟ್ಟು ಕರ್ತಾರನಿಗೆ

---

೧. 'ದಾಸೋಹ ದೀಪ್ತಿ'—ಜ. ಚ. ನಿ. ಪುಟ ೮೭

೨. ಅದೇ ಪುಸ್ತಕದಿಂದ ಆಯ್ಕೆ ಪುಟ ೨ ಮೂಲ ವಾತುಲತಂತ್ರ

ಅರ್ಪಿಸುವುದೆಂದರೆ ಕೈಲಾಗದ ತಪ್ಪಿಗೆ ಒಪ್ಪಿಸಿ ದೌರ್ಬಲ್ಯವಲ್ಲ. ಒಪ್ಪಿಸುವುದೆಂದರೆ ಭಯದಿಂದ ಕೊಡುವುದಲ್ಲ. ತನ್ನದೇ ಆದ ಇನ್ನೊಂದು ಪರಿಪೂರ್ಣ ಸ್ವರೂಪಕ್ಕೆ ಪರಿಪೂರ್ಣವಾಗುವುದಕ್ಕಾಗಿ ಈಗ ಅಪೂರ್ಣವಾದುದನ್ನು ಅರ್ಪಿಸುವುದು ಎಂದರ್ಥ. ತಾನೇ ಉಪಾಸಕನಾಗಿ ಉಪಾಸ್ಯವಾಗುವ ಸಾಧನೆಯಲ್ಲಿ ಭಕ್ತಿಯಿಂದ ಆಚರಿಸಬೇಕಾದ ಕ್ರಮವಿದು. 'ಕೀಳಿಂಗಲ್ಲದೆ ಹಯನು ಕರೆವುದೆ ?' ದಾಸೋಹಂಭಾವ ಆಚಾರದಲ್ಲಿ ತುಂಬಿಕೊಳ್ಳದೆ ಈಶತ್ವ ಬಾರದು.'ನನಗಿಂತ ಕಿರಿಯರಿಲ್ಲ,ಶಿವಭಕ್ತರಿಗಿಂತ ಹಿರಿಯರಿಲ್ಲ' ಹೀಗೆ ನುಡಿದ ಬಸವಣ್ಣ ತನ್ನನ್ನು ಕಿರಿಯನನ್ನಾಗಿ ಭಾವಿಸಿದ. ಜಗತ್ತು ಅವನನ್ನು ಹಿರಿಯನನ್ನಾಗಿ ಮನ್ನಿಸಿತು. ಸದುವಿನಯದಲ್ಲಿ ದಾಸೋಹಂ ಭಾವವಿದೆ. ದಾಸೋಹಂ ಭಾವ ಜನಾದರಣೆಗೆ ಪಾತ್ರವಾಗಿ ಶಿವಾನುಗ್ರಹವನ್ನು ಗೆಲ್ಲುತ್ತದೆ. ಹಾಲು ಕುದಿದ ಮೇಲೆ ಕೆನೆಗಟ್ಟುವುದು ! ದೇಹಭಾವ ಸುಟ್ಟ ಮೇಲೆ ದಾಸೋಹಂ ಭಾವ ತೆನೆಗಟ್ಟುವುದು!! ಬಸವಣ್ಣನಲ್ಲಿ ದಾಸೋಹಂ ಭಾವ ತೆನೆಗಟ್ಟಿದ್ದು ಭೃತ್ಯಾಚಾರದಿಂದ. ಅದಕ್ಕಾಗಿ 'ಸೋಹಂ' ಎಂದೆನಿಸದೆ 'ದಾಸೋಹಂ' ಎಂದೆನಿಸಯ್ಯ ಎಂದು ಅಣ್ಣ ತಳೆದ ನಿಲುವು ಉಚಿತವೆನಿಸುವುದು. "ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ" ಬೇಕೆಂದು ಕುದಿಯಲಿಲ್ಲ ಬಸವಣ್ಣ. ಕೊಟ್ಟು ಮಿಡುಕಲಿಲ್ಲ. ಕೊಡುವ ಅವಕಾಶ ತಪ್ಪಿದರೆ ಮಾತ್ರ ಎದೆಗುದಿ ಅಣ್ಣನಿಗೆ. ವಿಶ್ವತೋಮುಖನನ್ನು ಸಕಲ ವಿಸ್ತಾರದ ರೂಹಿನಲ್ಲಿ ಕಂಡುಕೊಂಡ ಬಸವಣ್ಣ 'ಅಂಗದ ಮೇಲೆ ಲಿಂಗವುಳ್ಳವರೆಲ್ಲ ಸಂಗಮನಾಥ' ಎಂದು ಅವರನ್ನೆಲ್ಲ ಮನ್ನಿಸಿದ. 'ನಾನೊಬ್ಬನೆ ಭಕ್ತ, ಮರ್ತ್ಯದೊಳಗಣ ಭಕ್ತರೆಲ್ಲರೂ ಜಂಗಮಲಿಂಗ' ಎಂದು ಅಣ್ಣ ನಂಬಿ ನುಡಿದ, ಆ ನಂಬಿಗೆಯಲ್ಲಿ ಬಾಳಿದ ! 'ನೀ ಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡೆನು' ಎಂದು ಜಂಗಮಲಿಂಗಕ್ಕೆ ನಿವೇದಿಸಿದ. ಹೀಗೆ ಸಕಲ ವಿಸ್ತಾರದ ಜಂಗಮಲಿಂಗಕ್ಕೆ ತನ್ನನ್ನು ತಾನು ಅರ್ಪಿಸಿಕೊಂಡು ಬಸವಣ್ಣ ದಾಸೋಹಿಯಾದ. ಬಸವಣ್ಣನನ್ನು ಒಳಗೊಂಡವರು 'ಬಸವಣ್ಣ'ರಾದರು. ಈ ದಾಸೋಹಿಯನ್ನು ಒಳಗೊಂಡವರು ದಾಸೋಹಿಯಾದರು. ಬಸವಣ್ಣ ಪರಿಪೂರ್ಣ ದಾಸೋಹಿ ! ದಾಸೋಹವೆಂಬುದು ಪರಿಪೂರ್ಣ ರೂಪ ತಾಳಿದ್ದು ಬಸವಣ್ಣನಿಂದ, ದಾಸೋಹಿಗೆ ದಾಸೋಹವೇ ಅಂತರಂಗ ಬಹಿರಂಗ! ಅಣ್ಣನ ದಾಸೋಹಂ ಭಾವದಿಂದ ಮಾದಾರ ಚನ್ನಯ್ಯ ಅಪ್ಪನಾದ, ಡೋಹರ ಕಕ್ಕಯ್ಯ ಬೊಪ್ಪನಾದ, ಕಲ್ಯಾಣ–ಮಾನವ ಕುಲ ಕಲ್ಯಾಣ ಕೇಂದ್ರವಾಯಿತು !!

**ಜಂಗಮವ ಕೂಡಿಕೊಂಡು**
**ಲಿಂಗಾರ್ಚನೆಯ ಮಾಡುವುದು ಲೇಸಯ್ಯ ಭಕ್ತಂಗೆ**
**ಆ ಭಕ್ತನ ಕೂಡಿಕೊಂಡು**
**ಲಿಂಗಾರ್ಚನೆಯ ಮಾಡುವುದು ಲೇಸಯ್ಯ ಜಂಗಮಕ್ಕೆ**

**ಆ ಜಂಗಮದ ಕರ್ತವ್ಯವೆ ಆ ಭಕ್ತಂಗೆ ದಾಸೋಹ !**
**ಆ ಭಕ್ತನ ಕಿಂಕಿಲವೆ ಆ ಜಂಗಮಕ್ಕೆ ದಾಸೋಹ !"**

ಹೀಗೆ ಭಕ್ತನ ಕಿಂಕಿಲ (ಭೃತ್ಯಾಚಾರ) ಭಾವ ಜಂಗಮಕ್ಕೆ ಸಲ್ಲುವ ದಾಸೋಹ ವೆನಿಸಿದರೆ, ಜಂಗಮದ ಕರ್ತವ್ಯವೆ (ಮಾರ್ಗದರ್ಶನವೆ) ಭಕ್ತನಿಗೆ ಅನುಗ್ರಹಿಸುವ ದಾಸೋಹವೆನಿಸಿದೆ. ದಾಸೋಹ ಮಾಡುವಲ್ಲಿ ಕಿರಿಯರ (ಭಕ್ತರ) ಸದುವಿನಯ–ಸದ್ಭಕ್ತಿ, ಹಿರಿಯರ (ಜಂಗಮದ) ಗುರುತ್ವಭಾವ ಮೇಳವಿಸುವುದು ಅಗತ್ಯವಾಗಿದೆ. ಹೀಗೆ ಮೇಳವಿಸುವಲ್ಲಿಯ ದಾಸೋಹದ ಹುಟ್ಟು ಬೆಳವಣಿಗೆಯಿದೆ !

**"ಲಕ್ಷಗಾವುದ ದಾರಿಯ ಹೋಗಿ**
**ಭಕ್ತನು ಭಕ್ತನ ಕಾಂಬುದು ಸದಾಚಾರ !**
**ಅಲ್ಲಿ ಕೂಡಿ ದಾಸೋಹವ ಮಾಡಿದರೆ**
**ಕೂಡಿಕೊಂಬನು ನಮ್ಮ ಕೂಡಲಸಂಗಮದೇವ !"**

ಭಕ್ತ ಭಕ್ತರಿರುವಲ್ಲಿಗೆ ಹೋಗಿ ಭಕ್ತಿಚಿಂತನ ಮಾಡಿ ಒಬ್ಬರನ್ನೊಬ್ಬರು ಸಂಧಿಸುವುದು, ಅರ್ಥಮಾಡಿಕೊಳ್ಳುವುದು ಸದಾಚಾರ ! ಇಲ್ಲಿ ಅಧ್ಯಾತ್ಮರಂಗದಲ್ಲಿಯ ಭಕ್ತಿ–ಸಾಮಾಜಿಕರಂಗದಲ್ಲಿ ಸೇವೆಯೆನಿಸುತ್ತದೆ. ಹೀಗೆ ಸಂಧಿಸುವುದರಿಂದ ಭಕ್ತಿಯ ಅಥವಾ ಸೇವೆಯ ಹಲವು ಮುಖಗಳನ್ನು ಅರಿತುಕೊಳ್ಳಬಹುದು. ಈ ರೀತಿ ಜೀವ ಕುಲ (ಜಂಗಮ) ಸೇವೆಗೆಂದು ಕೂಡುವುದು ಚಿಂತಿಸುವುದು ಸದಾಚಾರವಲ್ಲದೆ ಮತ್ತೇನು ? ಜೀವಕುಲ ಜಂಗಮ ಸೇವೆಯಲ್ಲಿಯೆ ಕೂಡಲ ಸಂಗಮನಿದ್ದಾನೆ. ಸಾಮಾಜಿಕ ಸೇವೆಗೆ ಆಧ್ಯಾತ್ಮಿಕದ ಒಪ್ಪ ಕೊಟ್ಟು, ಸಾಮಾಜಿಕ ಆಧ್ಯಾತ್ಮಿಕ ವೆರಡನ್ನೂ ಸಮನ್ವಯಗೊಳಿಸಿ, ಜನಸಾಮಾನ್ಯರನ್ನು ಸೇವಾಜೀವಿಗಳನ್ನಾಗಿ ಮಾಡಿದ ಮುತ್ಸದ್ದಿ ಬಸವಣ್ಣ ! ಈ ಬಗೆಯ ಬಸವದಾಸೋಹದಿಂದ ಜಗತ್ ಕಲ್ಯಾಣವಿದೆ. ಈ ದಾಸೋಹ ಸೇವೆಗಿಂತ ಮಿಗಿಲಾದ ಧ್ಯೇಯ ಮಾನವನಿಗೆ ಬೇರಾವುದಿದೆ ?

**ಜಂಗಮ ದಾಸೋಹ ಮುಖದಲ್ಲಿ ಲಿಂಗದರ್ಶನ :**

ಬಸವಣ್ಣನ ಮಹಾ ಮನೆಯ ಮುಂದೆ ಮಹಾ ಜಂಗಮವೆ ಮೂರ್ತಿಮತ್ತಾಗಿ ಪ್ರಭುದೇವ ನಿಂತಿದ್ದಾನೆ. ಭಕ್ತಿಯ ಆಗರವಾದ ಬಸವಣ್ಣ ಒಳಗಡೆ ಲಿಂಗಾರ್ಚನೆಯಲ್ಲಿ ಒಂದಾಗಿದ್ದಾನೆ. ಅಪ್ಪಣ್ಣ ಬರಮಾಡಿಕೊಳ್ಳಲು ಬಂದ. ಪ್ರಭುದೇವ ಅಚಲನಾಗಿ ನಿಂತ. "ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?" ಬಸವಣ್ಣನ ಮಾತಿನಲ್ಲಿಯೆ ಬಸವಣ್ಣನಿಗೆ ಪ್ರಶ್ನಿಸುವ ರೀತಿಯಲ್ಲಿ ಪ್ರಭುವಿನ ಹುಬ್ಬು ಮೇಲೇರಿ ನಿಂದಿತ್ತು ! ಅಪ್ಪಣ್ಣ ಮತ್ತೆ ಮತ್ತೆ ಬಂದ. ಬಾಗಿದ, ಬೇಡಿಕೊಂಡ. ಬೆಟ್ಟವನ್ನು ಅಲ್ಲಾಡಿಸಬಹುದೆ ? ಮುನಿದ ಹೆಜ್ಜೆ ಮುಂದೆ ಸಾಗಿತು.

ಪ್ರಭುದೇವನನ್ನು ಕಾಣದೆ ಅಣ್ಣ ಅರ್ಧಕ್ಕರ್ಧ ಇಳಿದು ಹೋದ. ಬೆವರಿನ ಮಜ್ಜನದಲ್ಲಿ ಮಿಂದು ನಿಂದ ! ಹರಕೆಯ ಹಸ್ತವನ್ನು ಮುಂಚಾಚಿ ಜಂಗಮ ಮುಖದಲ್ಲಿ ತಾನಾಗಿ ಬಂದಿದ್ದ ಭಾಗ್ಯವನ್ನು ಕಳೆದುಕೊಂಡು ಕೆಟ್ಟ ಕೇಡಿಂಗೆ ಲೆಕ್ಕವಿಲ್ಲ. ಹೊತ್ತಿದ ಪಶ್ಚಾತ್ತಾಪ ಅಣ್ಣನನ್ನು ಎಚ್ಚರಿಸಿತು. "ಜಂಗಮಮುಖದಲ್ಲಿ ಲಿಂಗವನರಸಿಕೋ" ಎಂಬ ಅರಿವು ಭಕ್ತಿ ಭಂಡಾರಿಯಲ್ಲಿ ಅಂಕುರಿಸಿತು. 'ಮರಕ್ಕೆ ಬಾಯಿ ಬೇರು. ಲಿಂಗಕ್ಕೆ ಬಾಯಿ ಜಂಗಮ. ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು. ಜಂಗಮಪಾದಕ್ಕೆ ಭಕ್ತಿ ಜಲವೆರೆದಲ್ಲಿ ಲಿಂಗಯ್ಯ ಪ್ರಸನ್ನನಾಗುವನಲ್ಲಿ !' ಹೊಸ ದರ್ಶನ ಪಡೆದ ಬಸವಣ್ಣ. ಅಗೋಚರ ಲಿಂಗವನ್ನು ಗೋಚರಿಪ ಜಂಗಮದಲ್ಲಿ ಕಾಂಬ ಸಂಕಲ್ಪದಿಂದ ದಾಸೋಹವೆಂಬ ಪಸರವಸಿಕ್ಕಿ ಬಸವಣ್ಣ ದಾಸೋಹಿಯಾದ.

**ದಾಸೋಹಿಗೆ ತೃಪ್ತಿಯೆ ಗುಣಗೌರವ :**

ಮೋಳಿಗೆಯ ಮಾರಯ್ಯ ಕಾಯಕ ನಿಷ್ಠ. ದಾಸೋಹದಲ್ಲಿ ಸಂತುಷ್ಟ, ಮಾರಯ್ಯನ ಪ್ರಸಾದ ಮಹಿಮೆಗೆ ಮನಸೋತ ಬಸವಣ್ಣ ಅವನಲ್ಲಿಗೆ ಹೋಗಿ ಆರೋಗಣೆ ಮಾಡಿ, ಪ್ರಸಾದ ಸವಿಗೆ ತಲೆದೂಗಿ, ಅರಿಯದಂತೆ ಚಿನ್ನದ ಗಟ್ಟಿಯನ್ನು ಇರಿಸಿ ಬಂದ. ಉಂಡ ಪ್ರಸಾದಕ್ಕೆ ಪಡೆದ ತೃಪ್ತಿಗೆ ಅಣ್ಣನಿಂದ ಚಿನ್ನದ ಸಮರ್ಪಣೆ. ಆದರೆ ಉಳ್ಳವನೆಂಬ ಅಹಂಕಾರವಿರಲಿಲ್ಲ ಅವನ ಕೊಡುಗೆಯಲ್ಲಿ. ಆದರೆ ಸಂಪತ್ತಿಗೆ ಮನಸೋಲುವವನಲ್ಲ ದಾಸೋಹಿ. ದಾಸೋಹಕ್ಕೆ ಸಂಪತ್ತು ಬೇಕಿಲ್ಲ. ಸತ್ಯ ಶುದ್ಧ ಕಾಯಕದಿಂದ ಬಂದುದಷ್ಟೇ ಸಾಕು ದಾಸೋಹಕ್ಕೆ, ದಾಸೋಹಿಗೆ !

**"ಕಾರೆಯ ಸೊಪ್ಪಾದರು ಕಾಯಕದಿಂದ ಬಂದುದು**
**ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ"**

ಇದು ದಾಸೋಹಿ ತಳೆದ ದೃಢವಾದ ನಿಲುವು. ಅದಕ್ಕಾಗಿ ಮಾರಯ್ಯ ಅಣ್ಣನನ್ನು ಅಪಾರ್ಥವಾಗಿ ಕಲ್ಪಿಸಿದ. ಚಿನ್ನವೊಯ್ದು ಅಣ್ಣನಲ್ಲಿಗೆ ಎಸೆದು ಬಂದ. ಶಿವನ ಮುನಿಸನ್ನು ದಕ್ಕಿಸಿಕೊಳ್ಳಬಹುದು; ಶರಣರ ಮುನಿಸನ್ನು ದಕ್ಕಿಸಿಕೊಳ್ಳಲಾಗದು. ಬಸವಣ್ಣ ಮಾರಯ್ಯನ ಭಕ್ತಿಗೆ ಶರಣು ಹೋದ. ಮಾರಯ್ಯನ ಮುಂದೆ ಕೈಜೋಡಿಸಿ ನಿಂದ 'ಮುಗಿದ ಕೈಯ ಬಾಗಿದ ತಲೆಯ' ಬಸವಣ್ಣನಿಗೆ ಸದುವಿನಯದ ಪಾಠ ಹೇಳಿಕೊಡಬೇಕೆ ? ಮಾರಯ್ಯನಂತ ದಾಸೋಹಿಗೆ ಸಂತೃಪ್ತಿ ಗುಣಗೌರವವೆನಿಸುವಂತೆ, ತಪ್ಪಿದ ಠಾವಿನಲ್ಲಿ ಅಣ್ಣನಂತೆ ಒಪ್ಪಿಕೊಳ್ಳುವುದೂ ಗುಣವಿಶೇಷವೆಂದು ಹೇಳಬೇಕು !

**ದಾಸೋಹಿಗೆ ಜೀವಕುಲವೆಲ್ಲ ಜಂಗಮ :**

ಶರಣ ಬಸವೇಶ್ವರರು ಅರಳುಗುಂಡಿಗೆಯಲ್ಲಿಯ ತಮ್ಮ ಹೊಲಕ್ಕೆ ಬೇಲಿಯಿಕ್ಕಲಿಲ್ಲ, ಹಕ್ಕಿ ಹೊಡೆಯಲಿಲ್ಲ. ಬೆಳೆಯನ್ನು ಕೊಟ್ಟವನು ಶಿವ. ಹಕ್ಕಿಯಲ್ಲಿ ಪ್ರಾಣ

ಚೇತನವಾಗಿ ಫಲವನ್ನುಂಡು ತಣಿಯುವವ ಶಿವ ! ಅವನುಂಡ ಮೇಲೆ ಮಿಕ್ಕ ಪ್ರಸಾದ ನಮಗೆ. ಹೀಗೆ ಜಂಗಮಮುಖದಲ್ಲಿ ಲಿಂಗ (ಶಿವನನ್ನು) ವನ್ನು ಕಂಡ ಶರಣರು ಪಶುಪಕ್ಷಿಯಲ್ಲಿ ಸಹ ಕಂಡರು. ಜೀವ ಕುಲವೆ ಜಂಗಮ ಅವರಿಗೆ. 'ಜಗದಗಲ ಜಂಗಮ' ಎನ್ನುವುದು ಅವರಿಗೆ ಕೇವಲ ತತ್ತ್ವವಾಗಿರದೆ ನಿತ್ಯ ಆಚರಣೆಯಾಗಿತ್ತು. ಪಶುಪಕ್ಷಿಗಳಿಗುಂಟಾದ ತೃಪ್ತಿ ಶಿವಲಿಂಗಕ್ಕೆ ತೃಪ್ತಿ, ಶಿವಲಿಂಗದ ತೃಪ್ತಿ, ಶರಣರಿಗೆ ತೃಪ್ತಿ ! ಮೂಕ ಪ್ರಾಣಿಗಳ ಬಗೆಗೆ ಶರಣರಲ್ಲಿ ಇದ್ದುದು ದಯಾಭಾವ ಎನ್ನುವುದಕ್ಕಿಂತ, ಅದಕ್ಕೂ ಮಿಗಿಲಾದ ಶಿವಭಾವ ಎಂದು ಹೇಳುವುದೆ ಸತ್ಯ ಸಂಗತಿ. ನಿರ್ವಂಚನೆಯ ಕೃಷಿ ಕಾಯಕ, ಬಂದ ಫಲ ಜಂಗಮ ದಾಸೋಹಕ್ಕೆ ಸಮರ್ಪಣ. ಇದು ಶರಣರ ನಿತ್ಯ ಜೀವನ, ತೃಪ್ತ ಜೀವನ ! ಜೀವ–ಕುಲ–ಜಂಗಮದಲ್ಲಿ ಕುಲ ಭೇದವೆಣಿಸದ ಶರಣ ನಿಜವಾದ ದಾಸೋಹಿ. ದಾಸೋಹಿ ಸಕಲ ಜೀವಾತ್ಮರ ಬಂಧು. ಕುಲಭೇದ ಸಲ್ಲದವನಿಗೆ ಮಾಡಿದೆನೆಂಬುದು ಮನದಲ್ಲಿ ಹೊಳೆಯದೆ, ನೀಡಿದೆನೆಂಬುದು ನೆನಹಿನಲ್ಲಿ ಸುಳಿಯದೆ, ಚಿತ್ತಶುದ್ಧನಾಗಿ ಕಾಯಕ ಮಾಡಿದ ಶರಣ ಬಸವರ ದಾಸೋಹದಲ್ಲಿ ಧಾನ್ಯಲಕ್ಷ್ಮಿ ಒಲಿದು ಬಂದು ತಾನಾಗಿ ನೆಲೆಯೂರಿ ನಿಂತಳು !

**ಕಾಯಕದ ನಷ್ಟ– ಜಂಗಮ ದಾಸೋಹಕ್ಕೆ ನಷ್ಟ :**

ನುಲಿಯ ಚಂದಯ್ಯ ಹಗ್ಗ ಹೊಸೆವ ಕಾಯಕದೊಂದಿಗೆ ಶಿವಜೀವ ಬೆಸೆಯುವ ಕಾಯಕವನ್ನು ಮಾಡುವ ದಾಸೋಹಿ. ಚಂದಯ್ಯ ಕಾಯಕದಲ್ಲಿ ನಿರತನಾಗಿದ್ದ. ಆಕಸ್ಮಿಕವಾಗಿ ಲಿಂಗ ಜಾರಿ ಬಿದ್ದುಹೋಯ್ತು. ಒಂದು ವೇಳೆ ಲಿಂಗವನ್ನು ಕಳೆದು ಕೊಳ್ಳಬಹುದು. ಆದರೆ ಅರೆಗಳಿಗೆ ಕಾಯಕವನ್ನು ಕಳೆದುಕೊಳ್ಳಲಾಗದು. ಕಾಯಕಕ್ಕೆ ಒದಗುವ ಲೋಪ–ಜಂಗಮ ದಾಸೋಹಕ್ಕೆ ಒದಗುವ ಲೋಪ. ಇದು ಚಂದಯ್ಯನ ಕಾಯಕನಿಷ್ಠೆ. ಲಿಂಗಯ್ಯನನ್ನು ಬಾವಿಯಿಂದ ಎತ್ತಿಕೊಳ್ಳುವತ್ತ ಚಂದಯ್ಯನಿಗೆ ಗಮನ ಹರಿಯಲಿಲ್ಲ. ಸತ್ಯಶುದ್ಧ ಶರಣನನ್ನು ಲಿಂಗಯ್ಯ ಬಿಟ್ಟು ಹೋಗುವನೆಲ್ಲಿ ? ಲಿಂಗಯ್ಯ ಹೇಳಿದಂತೆ ಕಾಯಕ ಮಾಡಲೊಪ್ಪಿ ಲಿಂಗಯ್ಯ ಚಂದಯ್ಯನೊಂದಿಗೆ ಬಂದುಬಿಟ್ಟ.

ಹೆಚ್ಚಿನ ಹೊನ್ನಿಗೆ ಹಗ್ಗವ ಮಾರಿಕೊಂಡ ತಪ್ಪಿಗಾಗಿ ಲಿಂಗಯ್ಯನ ಮೇಲೆ ಚಂದಯ್ಯನಿಗೆ ಕೋಪ. "ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯ !" ಚಂದಯ್ಯ ಲಿಂಗಯ್ಯನಿಗೆ ಈ ಕಾಯಕ ತತ್ತ್ವವನ್ನು ಬರೆಯಬೇಕಾಯಿತು. ಜಂಗಮ ಸೇವೆಗಾಗಿ ಕಾಯಕ, ದ್ರವ್ಯದ ದಾಹಕ್ಕಾಗಿ ಅಲ್ಲ ! ಮರು ಮಾತನಾಡದೆ ಲಿಂಗಯ್ಯ ಹೆಚ್ಚಿನ ಹೊನ್ನನ್ನು ಹಿಂದಿರುಗಿಸಿ ಬಂದ. ಈ ವಿಚಾರ ಕಾಲ್ಪನಿಕವೆನಿಸಬಹುದಾದರೂ, ಇದರ ಹಿನ್ನೆಲೆಯ ಅರ್ಥವನ್ನು ಅರಿತುಕೊಳ್ಳುವುದು ಸೂಕ್ತ. ಕಾಯಕ ದಾಸೋಹಕ್ಕೆ ಅಂದಿನ ಶರಣರು ಎಷ್ಟೊಂದು ನಿಷ್ಠರಾಗಿ ನಡೆದುಕೊಳ್ಳುತ್ತಿದ್ದರು ಎಂಬುದು ಮನದಟ್ಟಾಗಬಹುದು.

**"ಜಂಗಮ ಸೇವೆಯ ಚಿತ್ತಶುದ್ಧನಾಗಿ ಮಾಡುವಲ್ಲಿ**
**ಗುರುಪೂಜೆ ಸಂದಿತ್ತು.**
**ಜಂಗಮ ಸೇವೆಯ ಚಿತ್ತಶುದ್ಧನಾಗಿ ಮಾಡುವಲ್ಲಿ**
**ಲಿಂಗಪೂಜೆ ಸಂದಿತ್ತು.**
**ಜಂಗಮ ದಾಸೋಹದಿಂದ ಸರ್ವಸಂಪದವಾಯಿತ್ತು ;**

ಚಂದಯ್ಯನ ಆಚಾರವೆ ವಿಚಾರಧಾರೆಯಾಗಿ ಮೂಡಿದೆ ಇಲ್ಲಿ. ದಾಸೋಹಿಗೆ ಕಾಯಕವೆ ಪ್ರಾಣದುಸಿರು. ಹೇಮದಾಸೆಯ ಮಾಡದಿರುವುದೆ ವ್ರತ ನೇಮ ! ಕಾಯಕ ಫಲವನ್ನು ಜಂಗಮದಾಸೋಹಕ್ಕೆ ಸಲ್ಲಿಸುವುದೆ ಕೃತಾರ್ಥ ಜೀವನ !! ಇಲ್ಲಿ ಜಂಗಮಸೇವೆಯನ್ನು ಸಕಲ ಜೀವಕುಲದ ಸೇವೆಯೆಂದು ಅರ್ಥೈಸಿದರೆ ಇಂದಿನ ಕಾಲಕ್ಕೆ ಕಾಯಕ ದಾಸೋಹ ಎಷ್ಟೊಂದು ಪ್ರಸ್ತುತ ಎಂಬುದು ವೇದ್ಯವಾಗುತ್ತದೆ.

## ಭಕ್ತ ಬಡವನಲ್ಲ, ದಾಸೋಹಿ ದೀನನಲ್ಲ :

"ಆಶೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ" ಎಂದು ಸಹ ಧರ್ಮಿಣಿ ಲಕ್ಕಮ್ಮ ಗಂಡನನ್ನು ನೇರವಾಗಿ ಪ್ರಶ್ನಿಸಿದ ಪ್ರಸಂಗವೊಂದು ಸಂಭವಿಸಿತು. ನಿತ್ಯ ನೇಮಕ್ಕಿಂತ ಅಕ್ಕಿ ಅಧಿಕವೇಕೆ ? ಅದು ಜಂಗಮಕ್ಕೆ ಸಲ್ಲದು. ಅದು ದಾಸೋಹ ಸೇವೆಯೆನಿಸಲಾರದು. ಆಯ್ದಕ್ಕಿ ಮಾರಯ್ಯ ಉಗುಳ ನುಂಗಿದ. ಮಿಕ್ಕ ಅಕ್ಕಿಯನ್ನು ತಂದಲ್ಲಿಗೆ ಒಯ್ದು ಇರಿಸಿ ಬಂದ.

**"ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ**
**ಚಿತ್ತಶುದ್ಧನಾಗಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ**
**ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು**
**ಮಾರಯ್ಯಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ !"**

ಈ ರೀತಿ ಕೈಹಿಡಿದ ಸತಿ ಎಡಹಿದ ಪತಿಯ ಕೈಹಿಡಿದು ನಡೆಸಿ ನಿಜ ಸಹಧರ್ಮಿಣಿಯೆನಿಸಿದಳು. ಹೀಗೆ ದಾಸೋಹಿಗೆ ಕೊರಗು ಕೊರತೆಯೆಂಬುದಿಲ್ಲ, ಅತೃಪ್ತಿ ಅಸಮಾಧಾನವೆಂಬುದಿಲ್ಲ. ಭಕ್ತ ಬಡವನಲ್ಲ, ದಾಸೋಹಿ ದೀನನಲ್ಲ !

## ದಾಸೋಹಧರ್ಮ ವಿಶ್ವಮಾನ್ಯ ಧರ್ಮ :

"ದಾಸೋಹ ತತ್ತ್ವದ ತಾಯಿಬೇರು ಕಾಯಕಶುದ್ಧಿಯಲ್ಲಿದೆ. ಕಾಯಕ ಸಿದ್ಧಿಯ ಮೂಲ– ದಾಸೋಹ ತತ್ತ್ವದ ಆಚರಣೆಯಲ್ಲಿದೆ. ಇವು ಒಂದನ್ನು ಬಿಟ್ಟು ಒಂದಿಲ್ಲ. ಒಂದಕ್ಕೊಂದು ಪೂರಕವಾಗಿವೆ, ಪೋಷಕವಾಗಿವೆ. ಹೀಗೆ ಕಾಯಕಶುದ್ಧಿ,

೧ ಗವಿದೀಪ್ತಿ ಪೂಜ್ಯ ಶರಣ ಬಸವಪ್ಪ ಅಪ್ಪ—ಪುಟ ೪೦೬

ಕರ್ತವ್ಯಪ್ರಜ್ಞೆ, ನಿರ್ವಂಚನೆಯ ಸಮರ್ಪಣೆ, ಜನತಾ ಜಂಗಮ ಸೇವೆ- ಕ್ಷೇಮಕರ ವಾದುದೆಲ್ಲವೂ ದಾಸೋಹ ತತ್ತ್ವದಲ್ಲಿ ಅಡಕವಾಗಿದೆ."

ಆದರೆ ಈ ದಾಸೋಹತತ್ತ್ವ ಇಂದಿನ ಯುಗದ ಪರಿಸರಕ್ಕೆ, ಜನತೆಯ ಜಾಯ ಮಾನಕ್ಕೆ ಒಗ್ಗಬಹುದೆ ? ದಾಸೋಹಂಭಾವ ಇಂದಿನವರ ಮನಮುಟ್ಟಬಹುದೆ ? ಇಂದಿನವರ ಆಶೋತ್ತರಗಳನ್ನು ಅರಳಿಸುವಲ್ಲಿ ಅದು ಸಹಕಾರಿಯಾಗಬಹುದೆ ? ಇದನ್ನು ಪರಾಮರ್ಶಿಸಿ ನೋಡುವುದು ವಿಹಿತವಾಗಿದೆ.

ಅಂದಿನದು ಸರಳ ಸಾತ್ವಿಕ ಜೀವನ. ತೃಪ್ತಿಯ ಆಗರ. ಇಂದಿನದು ವಿಲಾಸ ಜೀವನ, ಹಲವು ಮೋಹದತ್ತ ಹರಿದಾಡುವ ಅತೃಪ್ತಿಯ ಸಂಕೀರ್ಣ ಜೀವನ. ನಿತ್ಯಸುಖದತ್ತ ಅವರ ಗಮ್ಯಗುರಿ, ಅನಿತ್ಯ ಸುಖದತ್ತ ಓಟ–ಚೆಲ್ಲಾಟ ! ಸತ್ಯದೆಡೆಗೆ ಮುಖಮಾಲಿಸಿದ ಅವರು- ಸಂಸಾರವಿದು ಮಿಥ್ಯವೆನ್ನಲಿಲ್ಲ. ಸಂಸಾರದಲ್ಲಿಯ ಮಾದ ಕತೆಯನ್ನು ಅಲ್ಲಗಳೆದರೇ ಹೊರತಾಗಿ, ಸಂಸಾರವನ್ನು ಅಲ್ಲಗಳೆಯಲಿಲ್ಲ. ಅವರು ಸಂಸಾರವನ್ನು ತುಂಬ ಪ್ರೀತಿಸಿದರು, ಗೌರವಿಸಿದರು ! ಅವರು ಪ್ರೀತಿಸಿದ ರೀತಿಯೆ ಬೇರೆ. ಸತ್ಯವನ್ನು ಮುಟ್ಟುವಲ್ಲಿ ಸಂಸಾರ ಅವರಿಗೆ ಮಾಧ್ಯಮವಾಗಿತ್ತು. ಸದಾ ಚಾರದಲ್ಲಿ ಇಹವನ್ನು ಮಹವನ್ನಾಗಿ ಮಾಡಿ ಜಯಶೀಲರಾದರು. ಹುಟ್ಟನ್ನು ಎಸೆದು ದೋಣಿಯನ್ನು ಮುಳುಗಿಸಲಿಲ್ಲ. ಸೆಳವಿನಲ್ಲಿ ಹೋದತ್ತ ಹೋಗಲಿ ಎಂದು ಕರ್ತವ್ಯವಿಮುಖರಾಗಲಿಲ್ಲ ! ಕಡೆದ ಮಜ್ಜಿಗೆಯ ಮೇಲೆ ತೇಲುವ ಬೆಣ್ಣೆಯಾದರು- ಹೊರತಾಗಿ ಮುಳುಗುವ ಜಡವಾಗಲಿಲ್ಲ !!

ಸಂಸಾರವೇ ಸರ್ವಸ್ವ ಇಂದಿನವರಿಗೆ, ವಿಲಾಸ ವೈಭವವೇ ಪ್ರಾಣದುಸಿರು. ದಾಹದ ಮಿತಿಮೀರಿದ ಭಾರದಲ್ಲಿ ಸ್ವತಃ ಮುಳುಗಿ ಹೋದರೂ ಚಿಂತೆಯಿಲ್ಲ; ಮುಳುಗಿರುವುದರಲ್ಲಿಯೇ ಇವರಿಗೊಂದು ಇವರದೇ ಆದ ಸುಖ. ಆದರೆ, ಮುಳುಗಿ ಮೇಲೆ ತಂದದ್ದು ಬರಿ ಸಿಂಪು, ಶಂಖ, ಜೊಂಡಾರಿಯನ್ನು ! ಮುಳುಗದೆಯೆ ಅವರು ತಮ್ಮ ಜೀವನವನ್ನು ರತ್ನವನ್ನಾಗಿ ಮಾಡಿಕೊಂಡರು. ವಿಕಾಳದತ್ತ ವಾಲುವ ಕರಣೇಂದ್ರಿಯವನ್ನಾಗಲಿ, ಮನವನ್ನಾಗಲಿ ಶರಣರು ದಂಡಿಸುವ ಗೋಜಿಗೆ ಹೋಗ ಲಿಲ್ಲ; ಅವುಗಳ ಓಟವನ್ನು ಸದಭಿರುಚಿಯತ್ತ, ಶಿವಮುಖದತ್ತ ವಾಲಿಸಿದರು. ಅವರ ಸಾಫಲ್ಯದ ಗುಟ್ಟು ದಾಸೋಹಂಭಾವದಲ್ಲಿದೆ, ದಾಸೋಹ ತತ್ತ್ವದ ಅನುಷ್ಠಾನದಲ್ಲಿದೆ !

ಅಂದಿನವರನ್ನು ಎತ್ತಿ ಹಿಡಿಯುವಲ್ಲಿ ಇಂದಿನವರನ್ನು ಅಲ್ಲಗಳೆಯಬೇಕೆಂಬುದು ಇದರ ಅರ್ಥವಲ್ಲ. ಇಂದಿನ ವೈಜ್ಞಾನಿಕ ಮೌಲ್ಯಗಳನ್ನು ಬದಿಗೊತ್ತಿ, ಅದು ನೀಡುವ ಸುಖ ಸೌಕರ್ಯಗಳಿಗೆ ಎರವಾಗಬೇಕೆಂಬ ಮಥಿತಾರ್ಥವೂ ಅಲ್ಲ. ವೈಜ್ಞಾನಿಕ ಸೌಲಭ್ಯಗಳು ಮಾನವ ಕುಲದ ಅಭ್ಯುದಯಕ್ಕೆ – ಪೋಷಕವಾಗ ಬೇಕಲ್ಲದೆ ಮಾರಕವಾಗಬಾರದು. ವಿಜ್ಞಾನ ದಾಸೋಹಂಭಾವ ಬೇಡವೆನ್ನು ವುದಿಲ್ಲ. ಸಕಲ ಜೀವಾತ್ಮರ ಲೇಸ ಬಯಸುವುದಕ್ಕೆ ವಿಜ್ಞಾನ ಪ್ರತಿಕೂಲ

ವಾಗಿ ಪರಿಣಮಿಸದಂತೆ ಮಾಡಬೇಕಾದರೆ ದಾಸೋಹ ತತ್ತ್ವದಲ್ಲಿಯ ಮಾನವೀಯ ಅಂಶಗಳನ್ನು ಜೀವನದ ಪ್ರತಿಯೊಂದು ರಂಗದಲ್ಲಿ ಅಳವಡಿಸಿಕೊಳ್ಳುವುದು ಅಗತ್ಯ ವಾಗಿದೆ. ಹಾಗೆ ಪ್ರಯೋಗಿಸಿ ನೋಡಬೇಕು. ಸಮತಾವಾದ. ವರ್ಗ–ವರ್ಣರಹಿತ ಜೀವನ, ಸದುವಿನಯ, ಸದ್ವರ್ತನೆ, ಏಕೋಭಾವ, ಮಾನವಕುಲದ ಶುಭ ಚಿಂತನೆ– ಮುಂತಾದುದನ್ನು ಅಂದಿನವರು ಸಾಧಿಸಿದಂತೆ, ಇಂದಿನವರು ಏಕೆ ಸಾಧಿಸುತ್ತಿಲ್ಲ ? ಆವರೆ, ಈ ಸದ್ವಿಚಾರವನ್ನು ಇಂದಿನವರ ಬಾಯಿ ಸಾರುತ್ತದೆ. ಕೈ ಹಿಂಜರಿಯುತ್ತದೆ ! ಹಾಗೆ ನೋಡಿದರೆ, ಅಂದಿನವರಿಗಿಂತ ಇಂದಿನವರಿಗೆ ದಾಸೋಹತತ್ತ್ವ ಹೆಚ್ಚು ಅಗತ್ಯವಾಗಿದೆ. ಜೀವನ ಶುದ್ಧಿಯಿಲ್ಲದೆ, ದಾಸೋಹಂಭಾವವಿಲ್ಲದೆ, ಪ್ರಾಮಾಣಿಕ ಪ್ರಯತ್ನವಿರದೆ –ಇಂಥ ಯತ್ನಕ್ಕೆ ಅಪಜಯುವೇ ಅಂತಿಮ ಪರಿಣಾಮ !

ಸಕಲ ಜೀವಕುಲ ಹಿತ ಬಯಸುವ ಈ ತತ್ತ್ವ ಅಂದಿಗೇ ಮುಗಿದುಹೋಯಿತು, ಇಂದು ಪ್ರಸ್ತುತವಲ್ಲ – ಎನ್ನುವುದು ತಪ್ಪು. ಅದು ಜೀವಂತವಾಗಿದೆ ಎನ್ನುವುದಕ್ಕೆ ಅಂದಿನಿಂದ ಇಂದಿನವರೆಗೆ ಆಗಿ ಹೋದ ಹಾಗು ಈಗಿರುವ ಶರಣ ಸತ್ಪುರುಷರ ಪ್ರತ್ಯಕ್ಷ ಬದುಕಿದ ರೀತಿ ಹಾಗು ಈಗ ಬದುಕುತ್ತಿರುವ ನೀತಿ ನಮಗೆ ಖಚಿತ ಋಜು ವಾಗಬಲ್ಲುದು. ಕಲಬುರ್ಗಿಯ ಶರಣ ಬಸವೇಶ್ವರ ಪೀಠದ ೭ ನೆಯ ಪೀಠಾಧಿಪತಿ ಪೂಜ್ಯ ದೊಡ್ಡಪ್ಪ ಅಪ್ಪ ಅವರು, ಅಥಣಿಯ ಶಿವಯೋಗಿಗಳು. ಸುತ್ತೂರು ಮಠದ ಶ್ರೀಗಳು, ಭಾಲ್ಕಿಯ ಚೆನ್ನಬಸವ ಪಟ್ಟದ್ದೇವರು, ಗದುಗಿನ ತೋಂಟದಾರ್ಯಪೀಠದ ಶ್ರೀ ಸಿದ್ಧಲಿಂಗ ಮಹಾಸ್ವಾಮೀಜಿಯವರು, ಚಿತ್ತರಗಿಯ ವಿಜಯ ಮಹಾಂತೇಶ್ವರ ಸಂಸ್ಥಾನಮಠದ ಶ್ರೀ ಮಹಾಂತ ಸ್ವಾಮಿಗಳವರು, ಮದರ ಥೆರೆಸಾ–ಮುಂತಾದ ಕೆಲವು ಪೂಜ್ಯರು ದಾಸೋಹತತ್ತ್ವನಿಷ್ಠರಲ್ಲಿ ಬರುವರು. ಇನ್ನು ಕೆಲವು ಮಹಾನುಭಾವರು ಈ ಪಂಕ್ತಿಯಲ್ಲಿ ಬರುವ ಅರ್ಹತೆಯನ್ನು ಪಡೆದವರಿದ್ದಾರೆ. ದೀರ್ಘವಾಗಬಾರ ದೆಂದು ಕೆಲವರನ್ನು ಮಾತ್ರ ಹೆಸರಿಸಲಾಗಿದೆ. ಈ ಪುಣ್ಯವರೇಣ್ಯರು ಅನ್ನ– ಜ್ಞಾನ–ಆಧ್ಯಾತ್ಮ – ಆರೈಕೆ – ಮೊದಲಾದುದನ್ನು ಒಮ್ಮನದಿಂದ ಮಾಡಿ ನೀಡಿ, ದಾಸೋಹ ತತ್ತ್ವವನ್ನು ಬದುಕಿಸಿ, ಮಾನವಕುಲ ಶಿವಪಥದಲ್ಲಿ ಸಾಗಿ ಕೃತಾರ್ಥ ವಾಗುವಂತೆ ಪ್ರಯತ್ನಿಸಿದವರಾಗಿದ್ದಾರೆ.

ಅಸಮತೆ, ಅಸೂಯೆ, ದ್ವೇಷ, ಅತೃಪ್ತಿ –ಇವುಗಳಿಂದ ಮುಕ್ತಮಾಡಬಲ್ಲ, ನುಡಿಯುವಲ್ಲಿ ನಡೆಯುವಲ್ಲಿ, ಕೊಡುವಲ್ಲಿ, ಕೊಳ್ಳುವಲ್ಲಿ 'ಇವನಮ್ಮವ'ನೆಂಬ ವಿಶ್ವಾಸ ಮೂಡಿಸಬಲ್ಲ ದಾಸೋಹಂಭಾವ ವಿಶ್ವಾದ್ಯಂತ ಬೆಳೆಯುವಂತೆ ಮುಕ್ತ ಅವಕಾಶ ಕಲ್ಪಿತವಾಗಬೇಕು. ಇಂದಿನ ದುರ್ವ್ಯವಹಾರದ ಕತ್ತಲೆಯಲ್ಲಿ ಕಣ್ಣಿದ್ದೂ ಕಣ್ಣು ಕಳೆದುಕೊಂಡ ಮಾನವಕುಲಕ್ಕೆ 'ದಾಸೋಹಂಭಾವ'ದ ಬೆಳಕು ಪಡೆಯುವಲ್ಲಿ ಯಾವ ಭ್ರಾಂತಿಗೂ ಒಳಗಾಗದಿರುವುದು ಲೇಸು. ಈ ದಾಸೋಹತತ್ವ ಒಂದು ಧರ್ಮಕ್ಕೆ ಅನ್ವಯಿಸಿದೆ ಎಂದೂ, ಉಳಿದ ಮಾನವಕುಲಕ್ಕೆ ಅಥವಾ ಧರ್ಮದವರಿಗೆ

ಅನ್ವಯಿಸುವಂಥದಲ್ಲವೆಂದೂ ವಿಮುಖ ಧೋರಣೆಯನ್ನು ತಳೆಯುವುದು ಸಲ್ಲದು. ಒಳ್ಳೆಯದೆಲ್ಲವೂ ಎಲ್ಲ ಕಾಲಕ್ಕೂ ಎಲ್ಲರಿಗೂ ಸ್ವೀಕಾರಯೋಗ್ಯವಾದುದು. ಹಿತಕರವಾದ ಗಾಳಿ ಯಾವ ದಿಕ್ಕಿನಿಂದ ಬೀಸಿದರೇನು–ನಮ್ಮ ಮನದ ಬಾಗಿಲು ತೆರೆದು ಅದನ್ನು ಬರಮಾಡಿಕೊಳ್ಳುವಲ್ಲಿ ಬುದ್ಧಿವಂತಿಕೆ ಇದೆ.

ಆದ್ದರಿಂದ ಈ ನಿಟ್ಟಿನಲ್ಲಿ ಹೊಸ ಜನಾಂಗದ ರುಚಿಯನ್ನು ಶುಚಿಗೊಳಿಸಿ, ಅಭಿರುಚಿಯನ್ನು ಸದಭಿರುಚಿಯತ್ತ ವಾಲಿಸಿ ಹೊಸ ಜೀವನ ಪಡೆಯುವಲ್ಲಿ— ದಾಸೋಹ ತತ್ತ್ವವನ್ನು ಪ್ರಯೋಗಿಸಿ ನೋಡಬೇಕು. ಯಾವ ಧರ್ಮವೇ ಇರಲಿ, ಅದರಲ್ಲಿ ದಾಸೋಹ ತತ್ತ್ವವನ್ನು ಅನುಬಂಧಗೊಳಿಸಿದಲ್ಲಿ ಕಲ್ಯಾಣವುಂಟಾಗುವುದಲ್ಲದೆ ಅಕಲ್ಯಾಣವುಂಟಾಗುವುದಿಲ್ಲ ! ಹೀಗೆ ಮತಾತೀತ, ಧರ್ಮಾತೀತ, ದಾಸೋಹತತ್ತ್ವ ಮಾನವೀಯ ಮೌಲ್ಯಗಳಿಂದಲೂ ಪಾರಮಾರ್ಥ ಚಿಂತನಾಂಶಗಳಿಂದಲೂ ಕೂಡಿಕೊಂಡಿರುವುದರಿಂದ ವಿಶ್ವಮಾನ್ಯ ತತ್ತ್ವವಾಗಿದೆ !!

# ೬.

# ಈ ಕಾಲದ ಇತರ ವಚನಕಾರರು

---

ಹನ್ನೆರಡನೆಯ ಶತಮಾನದಲ್ಲಿ ನಡೆದು ಹೋದ ಶಿವಶರಣರ ಕ್ರಾಂತಿ ಸರ್ವದೃಷ್ಟಿಯಿಂದ ಅವಿಸ್ಮರಣೀಯವಾದುದು. ಆ ಕ್ರಾಂತಿಯ ಮಂಥನದಲ್ಲಿ ಉದ್ಭವಸಿ ಬಂದ ಅಮೂಲ್ಯವಸ್ತುಗಳಲ್ಲಿ ವಚನ ಸಾಹಿತ್ಯವೊಂದು ಅದ್ವಿತೀಯ ರತ್ನವಾಗಿದೆ. ಶರಣರ ಕ್ರಾಂತಿಕಾರಕ ಮನದಲ್ಲಿ ಉಕ್ಕಿಬಂದ ಅನುಭವ ರಸಾವೇಶ ತಾಳಿ, ಭಾವಕ್ಕನುಗುಣವಾದ ಭಾಷೆಯ ಭಟ್ಟಿಯಲ್ಲಿ ಇಳಿದು, ವಚನ ಸಾಹಿತ್ಯ ಪ್ರಕಾರವೊಂದು ಮೂಡಿಬಂತು. ಸ್ವಯಂ ಸ್ಫೂರ್ತಿಯಿಂದ ಸೆಲೆಯೊಡೆದು ಬಂದ ಈ ವಚನಗಳು ಕನ್ನಡ ಸಾಹಿತ್ಯವನ್ನು ಬೆಳಗಿದವು, ಮಾನವ ಕುಲದ ಮನವನ್ನು ತೊಳೆದವು.

ಕಲ್ಯಾಣ ಕ್ರಾಂತಿಯ ನಂತರ ಆ ಓಘ, ಆ ರಸಾವೇಶ ಥಟ್ಟನೆ ನಿಂತು ಹೋಯಿತು. ದೀರ್ಘ ಕಲಾವಧಿಯವರೆಗೆ ವಚನರಚನೆ ಮೂಕವಾಯಿತು. ಆದರೆ ಅದರ ಸತ್ವ ಅಳಿಯಲಿಲ್ಲ, ಪ್ರಭಾವ ಕುಂದಲಿಲ್ಲ, ಆ ಮೇಲೆ ಅತ್ಯಲ್ಪ ಕಾಲದಲ್ಲಿ ಬಂದ ಹರಿಹರ, ರಾಘವಾಂಕ ಮೊದಲಾದ ಕವಿಗಳ ಕಾವ್ಯದಲ್ಲಿ ವಚನ ಸಾಹಿತ್ಯದ ತಿರುಳು-ತಿಳಿವು ಪ್ರಭಾವ ಬೀರಿರುವದನ್ನು ಕಾಣುತ್ತೇವೆ, ತತ್ವಜ್ಞಾನಕ್ಕೂ ಕಾವ್ಯಕ್ಕೂ ಒಂದು ಬಗೆಯ ಹೆಚ್ಚಿನ ಹತ್ತುಗಡೆಯನ್ನು ತಂದದ್ದು ವಚನಸಾಹಿತ್ಯ, ಈ ಅಂಟು-ನಂಟಿನ ಸೊಗಸು-ಸೊಬಗನ್ನು ನಾವು ಹರಿಹರ, ರಾಘವಾಂಕ, ಚಾಮರಸ- ಮುಂತಾದವರ ಕಾವ್ಯಗಳಲ್ಲಿ ಕಾಣಬಲ್ಲೆವು.

ಬಳಿಕ ೧೫ ನೆಯ ಶತಮಾನದಲ್ಲಿ ಪ್ರೌಢದೇವರಾಯನ ಆಳ್ವಿಕೆಯು-ಹೊಸ ಜೀವದಾನಗೈವ ಮೃಗ-ಮಳೆಯಾಗಿ ಬಂದು, ಕನ್ನಡ ಸಾಹಿತ್ಯದ ಹೊಸ ಪಚ್ಚೆ ಪೈರಿಗೆ ನವಚೇತನವನ್ನು ನೀಡುವಂತಾಯಿತು. ಹೀಗೆ ಆ ಸಾಮ್ರಾಜ್ಯದ ಪ್ರೌಢದೇವರಾಯ ಮತ್ತು ವಿರೂಪಾಕ್ಷರಾಯ ಈ ದೊರೆಗಳಿಬ್ಬರ ಕಾಲದಲ್ಲಿ ವಚನ ಸಾಹಿತ್ಯದ ಹೊಸ ಹುಟ್ಟು, ಮತ್ತು ಅದನ್ನು ಕುರಿತು ವಿವೇಚನೆ, ವಿಮರ್ಶೆ, ಸಂಕಲನ, ಸಂಪಾದನೆ ಮುಂತಾದ ಚಟುವಟಿಕೆ ನಡೆದು, ಅದರ ಮಹತ್ವ ಬೆಳೆದು, ಅದಕ್ಕೊಂದು ವೃದ್ಧಿ-ಸಿದ್ಧಿ ಪ್ರಾಪ್ತವಾಯಿತೆಂದು, ಹೇಳಬಹುದು.

ಇಷ್ಟು ವಿಸ್ತಾರದ ನಾಲ್ಕೈದು ದಶಕಗಳ ಅವಧಿಯಲ್ಲಿ (೧೫ ರಿಂದ ೧೯ ಶತಕ) ಐದಾರು ಜನ ಮಾತ್ರ ವಚನಕಾರರಾಗಿದ್ದಾರೆ. ಅವರಲ್ಲಿಯೂ ಬಸವಾದಿ ಶರಣರ

ಅನುಕರಣವಿದೆ. ಸ್ವತಂತ್ರವೆನ್ನಬಹುದಾದ ತೇಜಸ್ಸು ಕಡಿಮೆ. ಅವರಲ್ಲಿ ಕೆಲವರ ಅನುಭಾವಿಕಸಿದ್ಧಿ ಉನ್ನತವಾದುದೆಂಬುದರಲ್ಲಿ ಸಂಶಯವಿಲ್ಲ, ಆದರೆ ಅದನ್ನು ಸಾಹಿತ್ಯ ರೂಪಕ್ಕೆ ಇಳಿಸಿ ಹೇಳಬಲ್ಲ ಪ್ರತಿಭೆ ಅಸಾಧಾರಣವಲ್ಲ. ಅವರ ವಚನಗಳ ಗುಣವಿಶೇಷವನ್ನು ಮೆಚ್ಚಿಯೂ ಈ ಮಾತನ್ನು ಹೇಳಬಹುದು'೧.

ಇವರಲ್ಲಿ ತೋಂಟದ ಸಿದ್ಧಲಿಂಗ ಯತಿಗಳು, ಸ್ವತಂತ್ರ ಲಿಂಗೇಶ್ವರ, ಘನಲಿಂಗಿದೇವ – ಇವರು ಈ ಶತಮಾನದ ವಚನಕಾರರಲ್ಲಿ ಮುಖ್ಯರಾದವರು. ಹಾಗು ತೋಂಟದ ಸಿದ್ಧಲಿಂಗ ಯತಿಗಳು ಶಿಷ್ಯ ಸಮೂಹವನ್ನು ಪಡೆದ ಗುರುವರೇಣ್ಯರು, ಶಿವಯೋಗಸಂಪನ್ನರು, ಧರ್ಮೋದ್ಧಾರಕರು. ಇಂಥ ಮಹಿಮಾ ಶಾಲಿಗಳ ಶಿಷ್ಯವೃಂದದಲ್ಲಿ ಸಿದ್ಧಲಿಂಗೇಶ್ವರ, ಕಂಬಳಿದೇವ, ಸಿದ್ಧನಂಜೇಶ್ವರ, ಚೆನ್ನದೇವರು, ದೊಡ್ಡ ಸಿದ್ಧಲಿಂಗೇಶ್ವರ, ಸಿದ್ಧಮಲ್ಲೇಶ್ವರ, ಗುಮ್ಮಳಾಪುರದ ಸಿದ್ಧಲಿಂಗೇಶ್ವರ, ಸಿದ್ಧ ವೀರಣ್ಣೊಡೆಯ, ಘನಲಿಂಗದೇವರು –ಮುಂತಾದವರು ಪ್ರಮುಖರಾದವರೆಂದೂ ಚನ್ನಬಸವ ಪುರಾಣದಿಂದ೨ ತಿಳಿದು ಬರುತ್ತವೆ.

ಈಗ ಸ್ವತಂತ್ರ ಸಿದ್ಧಲಿಂಗೇಶ್ವರ ಹಾಗು ಘನಲಿಂಗಿದೇವ ಈ ವಚನ ಕಾರರಿಬ್ಬರನ್ನು ಕುರಿತು ಬರೆಯುವದು ಈ ಲೇಖನದ ಉದ್ದೇಶವಾಗಿದೆ. ಸಿದ್ಧಲಿಂಗ ಯತಿಗಳ ಶಿಷ್ಯಂದಿರ ಹೆಸರುಗಳ ಮೇಲಿನ ಉಲ್ಲೇಖದಲ್ಲಿ ಘನಲಿಂಗದೇವರ ಹೆಸರು ಉಕ್ತವಾದದ್ದು ಕಂಡು ಬರುತ್ತದೆ. ಆದರೆ ಸ್ವತಂತ್ರ ಸಿದ್ಧಲಿಂಗೇಶ್ವರ ಎಂಬ ಹೆಸರಿನ ಉಲ್ಲೇಖ ಕಂಡು ಬರುವದಿಲ್ಲ,

ಸ್ವತಂತ್ರ ಸಿದ್ಧಲಿಂಗೇಶ್ವರರ ಜನ್ಮಸ್ಥಳ ವಾಣಿಜ್ಯಪುರವೆಂದು, ಇವರು ಷಟಸ್ಥಲ ಚಕ್ರವರ್ತಿಗಳೂ ಶಿವಯೋಗ ಸಿದ್ಧರೂ ಆದ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರ ಪರಮಶಿಷ್ಯರೆಂದೂ ತಿಳಿದು ಬರುತ್ತದೆ. ಈ ಅಂಶಗಳ ಬಗೆಗೆ ಬೆಳಕುಬೀರುವ ಐತಿಹಾಸಿಕ ಆಧಾರಗಳು ಇನ್ನೂ ಲಭ್ಯವಾಗಬೇಕಾಗಿವೆ೩. ಈ ನಿಟ್ಟಿನಲ್ಲಿ ಈ ವಿಷಯವನ್ನು ಆಧಾರಗಳಿಂದ ವಿವೇಚಿಸಿ ನಿರ್ಣಯಿಸುವದು ಉಚಿತವಾದುದು.

ಸಿದ್ಧಲಿಂಗಯತಿಗಳ ಶಿಷ್ಯಸಮೂಹದ ಮೇಲಿನ ಉಲ್ಲೇಖದಲ್ಲಿ ಗುಮ್ಮಳಾಪುರದ ಸಿದ್ಧಲಿಂಗೇಶ್ವರ ಎಂಬ ಹೆಸರನ್ನು ಬಿಟ್ಟಮೇಲೆ, ಸಿದ್ಧಲಿಂಗೇಶ್ವರ, ದೊಡ್ಡ ಸಿದ್ಧಲಿಂಗೇಶ್ವರ ಎಂಬ ಹೆಸರಿನ ಉಲ್ಲೇಖವುಳ್ಳವರು ಇಬ್ಬರು. ಇವರಿಬ್ಬರಲ್ಲಿ

---

೧ ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ೧೯೭೧, ಪು. ೨೯೬.

೨ ವಿರೂಪಾಕ್ಷ ಪಂಡಿತ : ಚನ್ನಬಸವ ಪುರಾಣ ೧೯೩೪,
ಪು. ೭೬೫–೬೬, ಶ್ಲೋಕ : ೪೭–೫೦.

೩ ಎಚ್. ಪಿ. ಮಲ್ಲೇದೇವರು : ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೭೫,
ಪು. ೪ (ಪ್ರಸ್ತಾವನೆ)

ಸ್ವತಂತ್ರ ಸಿದ್ಧಲಿಂಗೇಶ್ವರ ಎಂಬವರು ಒಬ್ಬರಾಗಿರಬೇಕು ಎಂಬುದು ಕೆಲವು ವಿದ್ವಾಂಸರ ತರ್ಕವಾಗಿದೆ. ಸ್ವತಂತ್ರ ಸಿದ್ಧಲಿಂಗೇಶ್ವರ ವಚನವನ್ನು ಸ್ವತಂತ್ರ ಸಿದ್ಧಲಿಂಗನೆಂಬ ಕವಿಯು ಬರೆದಿರುತ್ತಾನೆ. ಇದರಲ್ಲಿ ೪೩೦ ವಚನಗಳಿದ್ದು, ಕೆಲವು ಮಾತ್ರ ಬೆಡಗಿನ ವಚನಗಳಿರುತ್ತವೆ. ಈ ಕವಿಯು ಜಂಗಮರಗಳೆ ಮತ್ತು ಮುಕ್ತ್ಯಂಗನಾ ಕಂಠಮಾಲಾ ಎಂಬುವ ಬೇರೆ ಎರಡು ಗ್ರಂಥಗಳನ್ನು ಬರೆದಿರುತ್ತಾನೆ. ತೋಂಟದ 'ಸಿದ್ಧಲಿಂಗಯತಿಗೆ' 'ಸಿದ್ಧಲಿಂಗೇಶ್ವರ' 'ದೊಡ್ಡಸಿದ್ಧಲಿಂಗ' ಎಂಬುವ ಹೆಸರಿನ ಇಬ್ಬರು ಶಿಷ್ಯರಿದ್ದರೆಂದು ಚೆನ್ನಬಸವ ಪುರಾಣದಿಂದ ತಿಳಿದುಬರುತ್ತದೆ. ಆದ್ದರಿಂದ ಆ ಇಬ್ಬರಲ್ಲಿ ಈ ಗ್ರಂಥಕಾರರೊಬ್ಬರಾಗಿರಬಹುದೆಂದು ಕರ್ನಾಟಕ ಕವಿ ಚರಿತ್ರೆಕಾರರು ತರ್ಕವನ್ನು ಮಾಡುತ್ತಾರೆ.[೪]

ಸ್ವತಂತ್ರ ಸಿದ್ಧಲಿಂಗೇಶ್ವರರ ಸಮಕಾಲೀನರಾಗಿ, ಅವರ ಲೋಕೋತ್ತರ ವ್ಯಕ್ತಿತ್ವ ಮತ್ತು ಅನುಭವಪೂರ್ಣ ವಚನಗಳಿಗೆ ಮಾರು ಹೋಗಿ ವ್ಯಾಖ್ಯಾನ ಬರೆದ ಚೆನ್ನದೇವರು ತಮ್ಮ 'ಮುಕ್ತ್ಯಂಗನಾ ಕಂಠಮಾಲೆ'ಯ ಕೊನೆಯಲ್ಲಿ ಹೇಳಿದ ಪದ್ಯದ ಆರಂಭದಲ್ಲಿ 'ದಯೆಯಿಂ ಶ್ರೀಗುರು ಸಿದ್ಧಲಿಂಗಯತಿವರ್ಯಂ....' ಎಂದು ಅವರ ಬಗೆಗೆ 'ಶ್ರೀಗುರು' ಮತ್ತು 'ಯತಿವರ್ಯಂ' ಎಂಬುದಾಗಿ ಹೇಳಿರುವದರಿಂದ ಇದು ವ್ಯಾಖ್ಯಾನಕಾರರ ಪೂಜ್ಯ ಭಾವನೆಯನ್ನು ವ್ಯಕ್ತಪಡಿಸುವದಲ್ಲದೆ ಸ್ವತಂತ್ರ ಸಿದ್ಧಲಿಂಗೇಶ್ವರರು ಹಿರಿಯರೂ, ಮಹಾನುಭಾವಿಗಳೂ, ಆಗಿ ಅಸದೃಶ್ಯ ವ್ಯಕ್ತಿತ್ವ ಹೊಂದಿ ದೊಡ್ಡವರಾಗಿದ್ದಾರೆಂದೂ ತಿಳಿದು ಬರುವದು. ಜಂಗಮ ರಗಳೆಯಲ್ಲಿ ಬರುವ 'ಇಂತೀ ಜಂಗಮದಿರವಂ ಸಂತಸದಿಂ ಪೇಳ್ದ ಸಿದ್ಧಲಿಂಗೇಶ್ವರನ' ಎಂಬ ವಾಕ್ಯವು ಇದರ ಕರ್ತೃ ಸಿದ್ಧಲಿಂಗೇಶ್ವರ ಎಂಬುದನ್ನು ಖಚಿತವಾಗಿ ಹೇಳುವದು. ಆದರೆ ವಿರಕ್ತ ತೋಂಟದಾರ್ಯ ಮತ್ತಿತರ ಕವಿಗಳು ಪ್ರಾಯಶಃ ವಯಸ್ಸಿನಲ್ಲಿ ಅನುಭಾವದಲ್ಲಿ ಹಿರಿಯರಾದ ಅವರನ್ನು ಇತರರಿಂದ ಪ್ರತ್ಯೇಕಿಸಲು 'ದೊಡ್ಡ ಸಿದ್ಧಲಿಂಗೇಶ' 'ಗುರುದೊಡ್ಡಸಿದ್ದೇಶ' ಮೊದಲಾಗಿ ಅತ್ಯಂತ ಗೌರವಪೂರ್ವಕವಾಗಿ ಹೇಳಿರುವರು. ಆದುದರಿಂದ ವಿರಕ್ತ ತೋಂಟದಾರ್ಯರ 'ದೊಡ್ಡಗುರುಸಿದ್ದೇಶ' ಚೆನ್ನದೇವರ 'ಶ್ರೀಗುರು ಸಿದ್ಧಲಿಂಗ ಯತಿವರ್ಯ' ವಿರೂಪಾಕ್ಷ ಪಂಡಿತನ 'ದೊಡ್ಡ ಸಿದ್ಧಲಿಂಗೇಶ್ವರ' ಈ ಮೂವರೂ ಒಬ್ಬರೆ. ಅವರೇ ಸ್ವತಂತ್ರ ಸಿದ್ಧಲಿಂಗೇಶ್ವರರೆಂದು ಹೇಳಬಹುದು.'[೫]

ಚೆನ್ನಬಸವ ಪುರಾಣದಲ್ಲಿಯು ದೊಡ್ಡ ಸಿದ್ಧಲಿಂಗೇಶ್ವರನೇ ಸ್ವತಂತ್ರ ಸಿದ್ಧಲಿಂಗೇಶ್ವರನೆಂದು ತಿಳಿಸುವದು ಮೇಲಿನ ಹೇಳಿಕೆಯ ತಾತ್ಪರ್ಯವಾಗಿದೆ.

---

೪ ಚಂದ್ರಶೇಖರ ಶಾಸ್ತ್ರಿ : ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೬೨, ಪ್ರಸ್ತಾವನೆ, ಪು. ೮-೯.

೫ ಎಚ್. ಪಿ. ಮಲ್ಲೇದೇವರು : ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೬೫, ಪ್ರಸ್ತಾವನೆ, ಪು. ೧.

ಆ ಉಕ್ತಿಯಲ್ಲಿಯ ತರ್ಕವೂ ಮೆಚ್ಚುವಂತಹದು; ಆದರೆ ಆ ನಿರ್ಧಾರವನ್ನು ಅಹುದೆನ್ನಲೂಬಾರದು. ಅಲ್ಲವೆಂದು ಅಲ್ಲಗಳೆಯಲೂ ಬಾರದು, ಮೇಲಿನ ವಿವರಣೆ ಯಿಂದ ಇನ್ನೊಂದು ರೀತಿಯ ವಿಚಾರಕ್ಕೆ ಸುಳಿವು ಸಿಕ್ಕುವುದು; ಜಂಗಮ ರಗಳೆಯನ್ನು ರಚಿಸಿದ ಕರ್ತೃ ಸ್ವತಂತ್ರ ಸಿದ್ಧಲಿಂಗೇಶ್ವರನೆಂದು ತಿಳಿದ ಮೇಲೆ, ಅದರ ಕೊನೆಯಲ್ಲಿ ಬರುವ 'ಇಂತೀ ಜಂಗಮದಿರವಂ ಸಂತಸದಿಂ ಪೇಳ್ದ ಸಿದ್ಧಲಿಂಗೇಶ್ವರನ....' ಎಂಬ ಸ್ವಂತ ಕರ್ತೃವಿನ ಹೇಳಿಕೆಯನ್ನೇ ಆಧಾರವಾಗಿಸಿಕೊಂಡು ನಿರ್ಧರಿಸುವದಾದರೆ, ಜಂಗಮ ರಗಳೆಯಲ್ಲಿಯ ಸಿದ್ಧಲಿಂಗೇಶ್ವರ ಮತ್ತು ಚೆನ್ನಬಸವ ಪುರಾಣದಲ್ಲಿಯ ಸಿದ್ಧಲಿಂಗೇಶ್ವರ ಇಬ್ಬರೂ ಒಬ್ಬರೇ ಎಂದು ಹೇಳಬೇಕಾಗುವದು. ಯಾಕೆಂದರೆ ಈ ಎರಡೂ ಹೆಸರಿನಲ್ಲಿ ಭಿನ್ನತೆ ಇಲ್ಲವೆಂಬುದು ಸ್ಪಷ್ಟ. ಆದ್ದರಿಂದ 'ಜಂಗಮರಗಳೆ'ಯ ಸಿದ್ಧಲಿಂಗೇಶ್ವರನು ಸ್ವತಂತ್ರ ಸಿದ್ಧಲಿಂಗೇಶ್ವರನೆಂದು ಖಚಿತವಾದ ಮೇಲೆ ಚೆನ್ನಬಸವ ಪುರಾಣದ ಸಿದ್ಧಲಿಂಗೇಶ್ವರನು ಸಹ ಸ್ವತಂತ್ರ ಸಿದ್ಧಲಿಂಗೇಶ್ವರನೇ ಇರಬೇಕೆಂದು ನಿರ್ಧಾರಕ್ಕೆ ಬರುವದು ತಪ್ಪೇನಲ್ಲ. ಮತ್ತು ಸಿದ್ಧಲಿಂಗೇಶ್ವರನೆಂಬುದೆ ಈತನ ನಿಜವಾದ ಹೆಸರು ಇದ್ದಿರಬೇಕು ಹಾಗು ವಚನಾಂಕಿತಕ್ಕಾಗಿ 'ಸ್ವತಂತ್ರ' ಎಂಬ ವಿಶೇಷಣವನ್ನು ಸೇರಿಸಿ 'ಸ್ವತಂತ್ರ ಸಿದ್ಧಲಿಂಗೇಶ್ವರ'ನೆಂದು ತಾನಾಗಿ ಇರಿಸಿಕೊಂಡಿರ ಬೇಕು. ಇನ್ನೂ ಹೆಚ್ಚಿನ ಐತಿಹಾಸಿಕ ಆಧಾರಗಳು ಮುಂದೆ ಸಿಕ್ಕರೆ ಈ ವಿಷಯದಲ್ಲಿ ಇನ್ನಿಷ್ಟು ಸ್ಪಷ್ಟವಾದ ಬೆಳಕು ಹರಡಿ, ಒಂದು ನಿರ್ಧಾರಕ್ಕೆ ಬರಲು ಅನುಕೂಲ ವಾಗುವದು.

ಈತನು 'ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ' ಎಂಬ ಅಂಕಿತವನ್ನು ಇರಿಸಿ ಕೊಂಡು ವಚನಗಳನ್ನು ಮತ್ತು 'ಜಂಗಮರಗಳೆ' ಹಾಗು 'ಮುಕ್ತ್ಯಾಂಗನಾ ಕಂಠಮಾಲೆ' —ಇವುಗಳನ್ನು ರಚಿಸಿದ್ದಾನೆ. ಈತನ ಈ ಮೂರು ಕೃತಿಗಳನ್ನು ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು ಎಂಬ ಒಂದೇ ಸಂಪುಟದಲ್ಲಿ ಸಂಗ್ರಹಿಸಿ, ಕರ್ತೃವಿನ ಚಾರಿತ್ರಿಕ ಅಂಶಗಳ ಬಗೆಗೆ ಪ್ರಸ್ತಾವನೆಯಲ್ಲಿ ಹೆಚ್ಚಿನ ಸಂಗತಿಗಳನ್ನು ಒದಗಿಸಿಕೊಟ್ಟು ಎಚ್. ಪಿ. ಮಲ್ಲೆದೇವರು ವಚನಾಭ್ಯಾಸಿಗಳ ಕೃತಜ್ಞತೆಗೆ ಪಾತ್ರರಾಗಿ ದ್ದಾರೆ. ಅದು ಇತ್ತೀಚೆಗೆ ಪ್ರಕಟವಾದ ಗ್ರಂಥವಾದ ಮೂಲಕ ಇದನ್ನು ಆಧರಿಸಿ ಸ್ವತಂತ್ರ ಸಿದ್ಧಲಿಂಗೇಶ್ವರರನ್ನು ಕುರಿತು ಮಹತ್ವದ ಕೆಲವು ಸಂಗತಿಗಳನ್ನು ನಿರೂಪಿಸ ಲಾಗುವದು.

ಸ್ವತಂತ್ರ ಸಿದ್ಧಲಿಂಗೇಶ್ವರನ ಜನ್ಮಸ್ಥಳ ವಾಣಿಜ್ಯಪುರ. ಆ ಸ್ಥಳಕ್ಕೆ ವಾಣಿಜ್ಯಪುರ ಎಂಬ ಹೆಸರು ಬರುವದಕ್ಕೆ ಅಲ್ಲಿ ನಡೆದುಹೋದ ಪವಾಡವೇ ಕಾರಣ. ಸಹಸ್ರಾರು ವರ್ಷಗಳ ಹಿಂದೆ ನಡೆದ ಘಟನೆ ಇದು. ಮದುರೆಗೆ ವ್ಯವಹಾರಕ್ಕೆಂದು ಹೊರಟ ವರ್ತಕರು ನಡುವೆ ದಟ್ಟಡವಿಯಲ್ಲಿ ಬೀಡುಬಿಟ್ಟಲ್ಲಿ ಅಮೃತವಸರುವ ಲಿಂಗವೊಂದನ್ನು

ಕಂಡು ಪುನೀತರಾದರು. ಅದುವೇ ದಿವ್ಯ ಲಿಂಗೇಶವಾಗಿ ಅದರ ಮೇಲೆ ಆ ವರ್ತಕರಿಂದ ಅಮೃತೇಶ್ವರವೆಂಬ ಗುಡಿಗೋಪುರ ನಿರ್ಮಾಣವಾಯಿತು. ಅಲ್ಲಿಯೇ ನೆಲೆಸಿದ ಆ ವರ್ತಕರಿಂದ ಆ ಸ್ಥಳವು ಪಟ್ಟಣವಾಗಿ ವಾಣಿಜ್ಯಪುರವೆಂಬ (ಹರದನಹಳ್ಳಿ) ಹೆಸರನ್ನು ಪಡೆಯಿತು. ಸಮಯಾಚಾರಕ್ಕೆ ಮಠವೊಂದು ಸ್ಥಾಪಿತವಾಗಿ ಅದಕ್ಕೆ ಅನಾದಿ ಗಣೇಶ್ವರನೆಂಬ ಚರಮೂರ್ತಿ ಮಠಾಧಿಪತಿಯಾದನು. ಈ ಅನಾದಿ ಗಣೇಶ್ವರನ ಪೀಠಪರಂಪರೆಯಲ್ಲಿ ಬಂದ ಗುರುಗೋಸಲ ಚೆನ್ನಬಸವೇಶ್ವರರು ತೋಂಟದ ಸಿದ್ಧಲಿಂಗಯತಿಗಳ ಗುರುವರ್ಯರು. ಸಿದ್ಧಲಿಂಗಯತಿಗಳ ಶಿಷ್ಯನಾಗುವ ಭಾಗ್ಯ ಪಡೆದವನು ಸ್ವತಂತ್ರ ಸಿದ್ಧಲಿಂಗೇಶ್ವರನು.

ಸ್ವತಂತ್ರ ಸಿದ್ಧಲಿಂಗೇಶ್ವರನು ಗುರುಗಳೊಂದಿಗೆ ಷಟ್‌ಸ್ಥಲವನ್ನುದ್ಧರಿಸುವ ಮಹಿಹದಲ್ಲಿ ಪಾಲುಗೊಂಡಿದ್ದನೆ. ಹುಟ್ಟಿ ಬೆಳೆದದ್ದು ವಾಣಿಜ್ಯಪುರವಾದರೂ, ಈತನು ಬೆಳೆದು ಬೆಳಕಾದುದು ಗಜರಾಜಗಿರಿಯಲ್ಲಿ. ಈತನ ಶಿವಯೋಗ ಮಹಿಮೆಯಿಂದ ಗಜರಾಜಗಿರಿ ಶಿವಗಿರಿಯಾಯಿತು. ಈ ಭಾಗದ ಜನರು ತಮ್ಮ ಮಕ್ಕಳಿಗೆ ಸ್ವತಂತ್ರಪ್ಪ, ಸಿದ್ಧಲಿಂಗಪ್ಪ ಎಂದು ಹೆಸರಿಡುವ ಪರಿಪಾಠ ಈಗಲೂ ರೂಢಿಯಲ್ಲಿದೆ.[೬]

ತೋಂಟದ ಸಿದ್ಧಲಿಂಗ ಯತಿಗಳ ಕಾಲಾವಧಿಯ ಖಚಿತತೆಯ ಮೇಲೆ ಸ್ವತಂತ್ರ ಸಿದ್ಧಲಿಂಗೇಶ್ವರನ ಕಾಲಾವಧಿಯನ್ನು ಗೊತ್ತುಪಡಿಸಬಹುದಾಗಿದೆ. ಸಿದ್ಧಲಿಂಗ ಯತಿಗಳು ವಿಜಯನಗರದ ವಿರೂಪಾಕ್ಷರಾಯನ ಕಾಲದಲ್ಲಿದ್ದಂತೆ (ಕ್ರಿ.ಶ. ೧೪೬೫–೮೫) ಚೆನ್ನಬಸವ ಪುರಾಣದಿಂದ (೧೮೫೪) ಊಹಿಸಬಹುದಾಗಿದೆ ಎಂದು ಕವಿ ಚರಿತೆಕಾರರು ಹೇಳಿದ್ದಾರೆ.[೭]

**ಎಲೆ ರಾಮ ಕೇಳ್ಪುದಾ ಪ್ರೌಢದೇವೇಂದ್ರನಿರು**
**ತಳಿವನವನಂಶದೆ ವಿರೂಪಾಕ್ಷರಾಯನಂ**
**ದಿಳಿಯನಾಳುತ್ತುಮಿರಲ್**[೮]

ಹೀಗೆ ಚೆನ್ನಬಸವ ಪುರಾಣದ ೬೩ನೆಯ ಸಂಧಿಯನ್ನು ೩೯ನೆಯ ಪದ್ಯದಿಂದ ೪೭ನೆಯ ಪದ್ಯದವರೆಗೆ ಅವಲೋಕಿಸಿದಾಗ ಅವರು ಬದುಕಿದ್ದ ಕಾಲದ ಮೇಲೆ ಮತ್ತು ಕೈಕೊಂಡ ಅಪೂರ್ವ ಸಾಧನೆಯ ಮೇಲೆ ಬೆಳಕು ಬೀಳಬಹುದು.

ಆದರೆ ಎಲ್. ಬಸವರಾಜು ಅವರ ಅಭಿಪ್ರಾಯ ಬೇರೆಯಾಗಿದೆ. ೧೪೭೦ರಲ್ಲಿ ಇದ್ದನೆನ್ನಲಾದ ಗುಬ್ಬಿ ಮಲ್ಲಣಾರ್ಯನು ತನ್ನ ಗಣಭಾಷಿತ ರತ್ನಮಾಲೆಯಲ್ಲಿ ಮತ್ತು ಆತನ ಮೊಮ್ಮಗನಾದ ೨ನೆಯ ಮಲ್ಲಣಾರ್ಯನು ತನ್ನ ವೀರಶೈವಾಮೃತ ಮಹಾ

೬ ಎಚ್. ಪಿ. ಮಲ್ಲೇದೇವರು : ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೭೫, ಪ್ರಸ್ತಾವನೆ, ಪು. ೪–೧೬.

೭ ಆರ್. ನರಸಿಂಹಾಚಾರ್ಯ : ಕವಿಚರಿತೆ, ಭಾಗ ೨, ೧೯೭೩, ಪು. ೫೮.

೮ ವಿರೂಪಾಕ್ಷ ಪಂಡಿತ : ಚನ್ನಬಸವ ಪುರಾಣ, ೧೯೩೪, ಪು. ೭೬೩, ಶ್ಲೋಕ : ೩೯.

ಪುರಾಣದಲ್ಲಿ (೧೫೩೦) ತೋಂಟದ ಸಿದ್ಧಲಿಂಗಯತಿಗಳ ಬಗ್ಗೆ ಪ್ರಸ್ತಾಪ ಮಾಡಿರುವದಿಲ್ಲ. ಆದ್ದರಿಂದ ಆ ಕಾಲದವರೆಗೆ ಅವರು ಬೆಳೆದು ಪ್ರಸಿದ್ಧಿಯನ್ನು ಪಡೆದಿರಲಿಲ್ಲ. ಅಲ್ಲದೆ ೨ನೆಯ ಮಲ್ಲಣಾರ್ಯನ ಮಗನಾದ ಕಾಂತೇಶನು ತನ್ನ ಸಿದ್ಧೇಶ್ವರ ಪುರಾಣದಲ್ಲಿ 'ಧರೆಯೊಳಿರ್ಪಂ ಚಾರು ತೋಂಟದ ಸಿದ್ಧಗುರುಲಿಂಗಂ' ಎಂದು ಹೇಳಿರುವದನ್ನು ನೋಡಿದರೆ, ಆ ಕವಿಯ ಕಾವ್ಯರಚನೆಯ ಕಾಲದಲ್ಲಿ (ಕ್ರಿ. ಶ. ೧೫೬೧) ಸಿದ್ಧಲಿಂಗಯತಿಗಳು ಜೀವಿಸಿದ್ದರೆಂಬುದು ಖಚಿತ. ಇದು ಎಲ್. ಬಸವರಾಜು ಅವರ ಅಭಿಪ್ರಾಯವಾಗಿದೆ.[೯]

ಮೇಲಣ ಪದ್ಯದ ಉದ್ಧರಣೆಯ ಮೇಲಿಂದ ಇರ್ಪಂ ಎಂಬುದನ್ನು ವರ್ತಮಾನ ಕಾಲದ ಅರ್ಥಮಾಡಬಹುದಾದರೂ ಅದೇ ಪದ್ಯದಲ್ಲಿಯ 'ಪರಮೇಶನಂಗಂ' ಎಂಬ ವಿಶೇಷಣ ಪದದಿಂದ ಪರಮೇಶನ ಅಂಗವಾಗಿದ್ದರು (ಲಿಂಗೈಕ್ಯರಾಗಿದ್ದರು) ಎಂದೂ ಅರ್ಥಮಾಡಬಹುದಾಗಿದೆ. ಮತ್ತು ಮೇಲಣ ಎರಡೂ ಕಾವ್ಯಗಳಲ್ಲಿ ಸಿದ್ಧಲಿಂಗ ಯತಿಗಳ ಪ್ರಸ್ತಾಪ ಬಂದಿಲ್ಲವೆಂದು ಅವರ ಕಾಲಾವಧಿಯನ್ನು ಮುಂದಕ್ಕೆ ಒಯ್ಯುವ ವಿಚಾರ ಅಷ್ಟೊಂದು ಸಮರ್ಪಕ ತೀರ್ಮಾನವೆನಿಸಲಿಕ್ಕಿಲ್ಲ. ಎಲ್. ಬಸವರಾಜು ಅವರ ಅಭಿಪ್ರಾಯವನ್ನು ಎಚ್. ಪಿ. ಮಲ್ಲೇದೇವರು ಅಲ್ಲಗಳೆದು, ಕವಿ ಚರಿತೆಕಾರರ ಅಭಿಪ್ರಾಯದ ಸರಣಿಯಲ್ಲಿ ತಮ್ಮ ಅಭಿಪ್ರಾಯ ತಿಳಿಸಿದ್ದಾರೆ. ಅದು ಹೀಗಿದೆ :

ನಿರಂಜನ ವಂಶ ರತ್ನಾಕರದಲ್ಲಿಯ ಉಲ್ಲೇಖದ[೧೦] ಪ್ರಕಾರ ಗೋಸಲ ಚೆನ್ನಬಸವೇಶ್ವರರಿಂದ ೧ನೆಯ ಮಲ್ಲಣಾರ್ಯನು ಷಟ್‌ಸ್ಥಲ ಜ್ಞಾನೋಪದೇಶ ಪಡೆದಿದ್ದನೆಂದು ತಿಳಿದು ಬರುವುದು. ಆದ್ದರಿಂದ ಅದೇ ಗೋಸಲ ಚೆನ್ನಬಸವೇಶ್ವರರ ಕರಕಮಲ ಸಂಜಾತರಾದ (ಶಿಷ್ಯಂದಿರಾದ) ತೋಂಟದ ಯತಿಗಳು ಮತ್ತು ೧ನೆಯ ಮಲ್ಲಣಾರ್ಯನು ಸಮಕಾಲೀನರೆಂದು ಹೇಳಬಹುದು. ಆದ್ದರಿಂದ ಮಲ್ಲಣಾರ್ಯನ ಕಾಲದಲ್ಲಿ (ಕ್ರಿ. ಶ. ೧೪೭೦) ತೋಂಟದ ಯತಿಗಳು ಇದ್ದಿರಬೇಕು.

೨ನೆಯ ಮಲ್ಲಣಾರ್ಯನ ಮಗನಾದ ಶಾಂತೇಶನು ಸಿದ್ಧೇಶ್ವರ ಪುರಾಣದ ಪ್ರತಿ ಸಂಧಿಯ ಕಡೆಯಲ್ಲಿ ಹೀಗೆ ಹೇಳಿರುತ್ತಾನೆ. '....ಗುರು ತೋಂಟದಾರ್ಯನ ಪದಕಮಲ ಷಟ್ಚರಣನೆನಿಸುವ.... ಸನ್ಮಲ್ಲಣಾರ್ಯನ ಕುಲಶರಧಿಚಂದ್ರ.... ಶಾಂತೇಶನೊರೆದೀ.... ಸಿದ್ಧೇಶ್ವರ ಪುರಾಣವ....' ಇಲ್ಲಿ ಷಟ್ಚರಣನೆನಿಸುವವನು ಯಾರು ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಕುಲಶರಧಿಚಂದ್ರ ಇದರ ಅರ್ಥ ಸ್ಪಷ್ಟತೆಯ ಮೇಲೆ ಈ ಪ್ರಶ್ನೆ ಪರಿಹಾರವಾಗಬಹುದು. ಕುಲಶರಧಿಚಂದ್ರ ಎಂಬುದಕ್ಕೆ ಮಗನೆಂಬ ಅರ್ಥಗ್ರಹಿಸಿ, ಷಟ್ಚರಣನಾದವನು ಶಾಂತೇಶನ ತಂದೆಯಾದ ೨ನೆಯ ಮಲ್ಲಣಾರ್ಯನೆಂದು ಎಲ್. ಬಸವರಾಜು ಅವರು ಅಭಿಪ್ರಾಯಪಡುತ್ತಾರೆ.

---

೯ ಎಲ್. ಬಸವರಾಜು : ವಚನಕಾರ ಸಿದ್ಧಲಿಂಗಯತಿ, ೧೯೭೨, ಪು. ೧೭-೧೯.

೧೦ ಫ. ಗು. ಹಳಕಟ್ಟಿ (ಸಂ) : ನಿರಂಜನವಂಶ ರತ್ನಾಕರ, ೧೯೩೨, ಪು. ೩೭.

ಷಟ್ಚರಣನಾಗಿದ್ದಾತ ಶಾಂತೇಶನ ಮುತ್ತಾತನಾದ ೧ನೆಯ ಮಲ್ಲಣಾರ್ಯನೆಂದು ಎಚ್. ಪಿ. ಮಲ್ಲೇದೇವರು ಅವರ ಅಭಿಪ್ರಾಯವಾಗಿದೆ. ಆರ್. ಸಿ. ಹಿರೇಮಠ ಅವರು ಸಹ ಇದೇ ರೀತಿ ಅಭಿಪ್ರಾಯ ಹೇಳುತ್ತಾರೆ.[೧೧]

ತೋಂಟದ ಯತಿಗಳ ಗುರುಗಳಿಂದ ೧ನೆಯ ಮಲ್ಲಣಾರ್ಯನು ಷಟ್‌ಸ್ಥಲ ಜ್ಞಾನೋಪದೇಶ ಪಡೆದುಕೊಂಡಿದ್ದರೂ, ಆಧ್ಯಾತ್ಮ ಮಾರ್ಗದಲ್ಲಿ ನಿಷ್ಪತ್ತಿ ಸಾಧಿಸಿಕೊಂಡ ತೋಂಟದ ಯತಿಗಳ ಷಟ್ಚರಣನಾಗಿ ಭಕ್ತಿಭರಿತನಾಗಿದ್ದರೂ ಆಗಿರ ಬಹುದು. ಆದ್ದರಿಂದ ೧ನೆಯ ಮಲ್ಲಣಾರ್ಯನ ಕಾಲದಲ್ಲಿ (ಕ್ರಿ. ಶ. ೧೪೭೦) ತೋಂಟದ ಸಿದ್ಧಲಿಂಗ ಯತಿಗಳು ಇದ್ದಿರಬೇಕು. ಮತ್ತು ಅವರ ಶಿಷ್ಯನಾಗಿ ವಯಸ್ಸಿನಲ್ಲಿ ಚಿಕ್ಕವನಾಗಿ ಸ್ವತಂತ್ರ ಸಿದ್ಧಲಿಂಗೇಶ್ವರನು ೧೫ನೆಯ ಶತಮಾನದ ಉತ್ತರಾರ್ಧದಲ್ಲಿ ಮತ್ತು ೧೧ನೆಯ ಶತಮಾನದ ಆದಿಯಲ್ಲಿ ಇದ್ದಿರಬೇಕೆಂದು ಸಧ್ಯಕ್ಕೆ ನಿರ್ಧರಿಸಬಹುದಾಗಿದೆ.[೧೨]

ಇವರಿಬ್ಬರ ಕಾಲನಿರ್ಣಯವನ್ನು ಖಚಿತವಾಗಿ ಗೊತ್ತುಪಡಿಸುವಲ್ಲಿ ತೃಪ್ತಿಕರ ವಾದ ಐತಿಹಾಸಿಕ ಆಧಾರಗಳು ಸಿಗುವವರೆಗೆ ಕವಿ ಚರಿತೆಕಾರರ ಅಭಿಪ್ರಾಯವನ್ನೇ ಸಧ್ಯಕ್ಕೆ ಒಪ್ಪಿಕೊಳ್ಳುವದು ಯೋಗ್ಯವೆನಿಸುತ್ತದೆ.

೧೨ನೆಯ ಶತಮಾನದಲ್ಲಿ ವಚನ ಯುಗವೊಂದು ಆಗಿ ಹೋಗಿದೆ; ಶರಣರ ಅನುಭಾವಕ್ಕೊಂದು ಅಭಿವ್ಯಕ್ತಿ ಮೂಡಿ; ತನ್ನದೇ ಆದ ವಿಶಿಷ್ಟ ಸಿದ್ಧಸಾಹಿತ್ಯ ಪ್ರಕಾರವನ್ನು ಅದು ಪಡೆದುಕೊಂಡದ್ದಾಗಿದೆ. ಒಬ್ಬೊಬ್ಬ ವಚನಕಾರನ ವಚನೋಕ್ತಿ ತತ್ತ್ವವಾಗಿ ಕಾವ್ಯೋಕ್ತಿಯೆನಿಸಿ ಸ್ವಂತಿಕೆಯ ಮುದ್ರೆಯನ್ನು ಗಳಿಸಿಕೊಂಡಿದ್ದಾಗಿದೆ. ಕಾಲಾನಂತರ ರಚಿಸಿದ ವಚನಕಾರರಿಗೆ ವಿಷಯ ನಿರೂಪಣೆಯಲ್ಲಿ ಮತ್ತು ತಂತ್ರ ನೈಪುಣ್ಯದಲ್ಲಿ ಹೊಸತನವನ್ನು ಕಲ್ಪಿಸುವದಾಗಲಿ ಸಾಧಿಸುವದಾಗಲಿ ದುಸ್ತರವೆನಿಸಿದ್ದರೆ ತಪ್ಪೇನಲ್ಲ. ಹೀಗೆ ಒಂದು ಸಾಹಿತ್ಯ ಪ್ರಕಾರವಾಗಿ ಗಟ್ಟಿಗೊಂಡ ವಚನ ವಾಙ್ಮಯದ ರೂಪರೇಷೆಯನ್ನು ಹೊಸದಾಗಿ ಬರೆಯುವವರು ಮಾದರಿಯನ್ನಾಗಿ ಇರಿಸಿಕೊಂಡು ಹೋಗುವದು ಸ್ವಾಭಾವಿಕ. ಎಂಥ ಪ್ರತಿಭಾವಂತನೂ ಸಹ ಪ್ರಾರಂಭಾವಸ್ಥೆಯಲ್ಲಿ ಅನುಕರಣದ ಮಾಯಾಜಾಲದಲ್ಲಿ ಸಿಕ್ಕಿಬೀಳುವ ಸಂಭವವುಂಟು. ಲೇಖಕನು ಲೇಖನದಲ್ಲಿ ಪರಿಣತಿಯನ್ನು ಸಾಧಿಸಿಕೊಂಡಂತೆ, ಅನುಕರಣದ ಮಾಯೆಯಿಂದ ಮುಕ್ತನಾಗಿ ಉತ್ತರೋತ್ತರವಾಗಿ ಸ್ವಂತ ಶೈಲಿಯನ್ನು ಅಳವಡಿಸಿಕೊಳ್ಳಲು ಸಮರ್ಥ ನಾಗಬಲ್ಲ. ಈ ದೃಷ್ಟಿಯಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳನ್ನು ಪರಾಮರ್ಶಿಸುವದು ಉಚಿತವೆನಿಸುತ್ತದೆ.

---

೧೧. ಆರ್. ಸಿ. ಹಿರೇಮಠ ಷಟ್‌ಸ್ಥಲಪ್ರಭೆ, ೧೯೬೬, ಪು. ೩೦೪.

೧೨. ಎಚ್. ಪಿ. ಮಲ್ಲೇದೇವರು: ಸ್ವತಂತ್ರ ಸಿದ್ಧಲಿಂಗೇಶ್ವರ ವಚನಗಳು, ೧೯೭೫, ಪು. ೨೧–೨೫.

ಸಂಸಾರ ಹೇಯಸ್ಥಲದಲ್ಲಿಯು ಬಸವಣ್ಣನವರ ವಚನಗಳು ಪರಿಣಾಮ ಬೀರುವಲ್ಲಿ ಅದ್ವಿತೀಯವಾಗಿವೆ, ಸ್ವತಂತ್ರ ಸಿದ್ಧೇಶ್ವರನೂ ಅಂಥ ಕೆಲವು ವಚನ ಗಳನ್ನು ರಚಿಸಿದ್ದಾನೆ. ತೌಲನಿಕವಾಗಿ ಇವರಿಬ್ಬರ ಇಂಥ ವಚನಗಳನ್ನು ಪರಿಶೀಲಿಸೋಣ :

**"ಸಂಸಾರಸಾಗರ ಉರದುದ್ದವೆ ? ಹೇಳಾ !**
**ಸಂಸಾರಸಾಗರ ಕೊರಳುದ್ದವೆ ? ಹೇಳಾ !**
**ಸಂಸಾರಸಾಗರ ಶಿರದುದ್ದವಾದ ಬಳಿಕ ಏನ ಹೇಳುವೆನಯ್ಯಾ**
**ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ !" (ಬ. ವ. ೬-೮)**

ಇಂಥ ದಿಙ್ಮೂಢಜೀವದ ಹುಯ್ಯಲನ್ನು ಕೇಳಿ ಕರಗದವರಾರು ?

**"ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯಾ**
**ಪಶುವೇನಬಲ್ಲದು ಹಸುರೆಂದೆಳೆಸುವದು !" (ಬ. ವ. ೨೫-೫೧)**

ಭಾವಕ್ಕೆ ತಕ್ಕಂಥ ರೂಪಕ ! ರೂಪಕದಲ್ಲಿಯ ಶಬ್ದಚಿತ್ರ ಮನೋಜ್ಞವಾಗಿದೆ.

ಹೀಗೆ ಮನಮುಟ್ಟುವ ಭಾವಾಭಿವ್ಯಕ್ತಿಯಲ್ಲಿ ಕಾವ್ಯದ ತಂತಿ ಮಿಡಿಯುತ್ತದೆ; ಕರುಳ ತಂತಿ ಕಂಪಿಸುತ್ತದೆ. ಅಂತಃಕರಣ ಕರಗುತ್ತದೆ. ಇಲ್ಲಿ ಸಂಸಾರದ ಗೋಳಾಟ ವನ್ನು ಚಿತ್ರಿಸುವಲ್ಲಿ ಆಚ್ಛೊತ್ತಿ ನಿಲ್ಲುವ ಪ್ರತಿಮೆಗಳು ಸಹಜವಾಗಿ ಪರಿಣಾಮ ಬೀರಿರುವದನ್ನು ಗಮನಿಸಬೇಕು. ಹೀಗೆ ಅನುಭಾವಿಯೊಬ್ಬ ಕವಿಯಾಗಿದ್ದರೆ ಬಸವ, ಅಲ್ಲಮರಂತೆ ಮಾತನ್ನು ಜ್ಯೋತಿರ್ಲಿಂಗವನ್ನಾಗಿ ಬೆಳಗಿಸಬಲ್ಲ. ಈ ನಿಟ್ಟಿನಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರನ ಹಲವು ವಚನಗಳನ್ನು ಪರಿಶೀಲಿಸೋಣ :

**"ಸಂಸಾರವೆಂಬ ವಿಷವೃಕ್ಷಕ್ಕೆ**
**ಪಂಚೇಂದ್ರಿಯಂಗಳೇ ಪಂಚ ಕ್ಲೇಶಂಗಳೇ ಫಲಂಗಳು,**
**ಪಂಚ ಶಾಖೆಗಳು ವಿಷಯಂಗಳೇ ಈ ಫಲವ ಬಯಸಿ ಮೆದ್ದವರೆಲ್ಲ**
**ಮರಣಕ್ಕೊಳಗಾದವರ ರಸವು**
**ಅದನರಿದರಿದು ಆ ಫಲವ ನಾನು ಮುಟ್ಟೆನು" (ಸ್ವ. ಸಿ, ೭-೨೭)**

ಇಲ್ಲಿಯೂ ರೂಪಾಲಂಕಾರವಿದೆ. ಆದರೆ ಭಾವದ ತೀವ್ರತೆ ಇಲ್ಲದೆ ಅಷ್ಟೊಂದು ಪರಿಣಾಮಕಾರಿಯೆನಿಸುವದಿಲ್ಲ.

**"ಸಂಸಾರವೆಂಬ ಮಹಾಘೋರಾರಣ್ಯದಲ್ಲಿ**
**ಹೊಲಬುದಪ್ಪಿ ಬಳಲುತ್ತಿದೆ ನೋಡಯ್ಯಾ !**
**ಇರುಳು ಹಗಲೆನ್ನದೆ ಸಂಸಾರದಲ್ಲಿ ಸಾವುತ್ತಿದೆ ನೋಡಯ್ಯಾ**
**ಇಂತಪ್ಪ ಸಂಸಾರಾರಣ್ಯದಲ್ಲಿ ಹೊಲಬುಗೆಟ್ಟು**
**ನೆಲೆಯಗಾಣದೆ ಹೋದರು" (ಸ್ವ. ಸಿ. ೭-೨೪)**

ಭಾವಾಭಿವ್ಯಕ್ತಿಯಲ್ಲಿ ಇದು ಮೊದಲಿಗಿಂತ ಮಿಗಿಲಾದುದು. ಸ್ವತಃ ಸಂಸಾರಿಯಾಗಿ ಅಧ್ಯಾತ್ಮದತ್ತ ಒಲವಿದ್ದ ಬಸವಣ್ಣನ ಹುಯ್ಯಲಿನಲ್ಲಿ ಸ್ವಾನುಭವವಿದೆ, ಸಹಜತೆಯಿದೆ. ಅದರಿಂದಾಗಿ ಬಸವಣ್ಣನ ನುಡಿಯಲ್ಲಿ ಪರಿಣಾಮದ ಕಾವು ಮೈಗೂಡಿ ಬಂದಿದೆ. ಸಂಸಾರಿಯಲ್ಲದ ವಿರಕ್ತನಾದ ಸ್ವತಂತ್ರ ಸಿದ್ಧಲಿಂಗೇಶ್ವರನ ನುಡಿಯಲ್ಲಿ ಲೋಕಾನುಭವದಿಂದ ಪಡೆದ ಮಿಡಿತವಿದೆ. ಉಂಡ ಅನುಭವವೊಂದು, ಕಂಡ ಅನುಭವವಿನ್ನೊಂದು. ಎರಡರಲ್ಲಿಯು ಭಾವ-ಭಿನ್ನತೆಯನ್ನಿಲ್ಲಿ ಮನಗಾಣಬೇಕು. ಕಂಡ ಅನುಭವವಾದರೂ, ಅದನ್ನು ತನ್ನದನ್ನಾಗಿ ಮಾಡಿಕೊಂಡು ಅದಕ್ಕೆ ರಸದೀಕ್ಷೆ ನೀಡಬಲ್ಲ ಕವಿಹೃದಯವಾದರೂ ಬೇಕು.

ಆದರೂ ಸ್ವತಂತ್ರ ಸಿದ್ಧಲಿಂಗೇಶ್ವರನು ಅಧ್ಯಾತ್ಮ ವಿಷಯದಲ್ಲಿ ಅನುಭವವನ್ನು ಪಡೆದು ಅನುಭಾವಿಯೆನಿಸಿಕೊಂಡಿದ್ದಾನೆ. ಯೋಗಾನುಸಂಧಾನದಲ್ಲಿ ಸೃಷ್ಟಿಸ್ವರೂಪವನ್ನು ಕಂಡುಕೊಂಡಿದ್ದಾನೆ. ಆ ಅನುಭಾವವೇ ಸಹಜವಾಗಿ ವಚನವಾಗಿ ಮೂಡಿಬಂದುದನ್ನಿಲ್ಲಿ ನೋಡಬೇಕು;

**"ನಿರಾಳದಿಂದ ಸಹಜವಾಯಿತ್ತು, ಸಹಜದಿಂದ ಸೃಷ್ಟಿಯಾಯಿತ್ತು**
**ಸೃಷ್ಟಿಯಿಂದ ಸಂಸಾರವಾಯಿತ್ತು, ಸಂಸ್ಕಾರದಿಂದ ಅಜ್ಞಾನವಾಯಿತ್ತು**
**ಅಜ್ಞಾನದಿಂದ ಬಳಲುವ ಜೀವರ ಬಳಲಿಕೆಯ ತೊಲಗಿಸಲು ಜ್ಞಾನವಾಯಿತ್ತು**
**ಜ್ಞಾನದಿಂದಲಾಯಿತ್ತು ಗುರುಕರಣ**
**ಗುರುಕರಣದಿಂದಲಾಯಿತ್ತು ಸುಮನ..."**

**(ಸ್ವ. ಸಿ. ೨೧–೭೭)**

ನಿರರ್ಗಳ ನಿರೂಪಣೆ 'ಸಹಜ'ದಿಂದ 'ಶಿವತತ್ತ್ವ'ದ ವರೆಗೆ ಸಂಬಂಧ ಕಲ್ಪನೆಯಲ್ಲಿಯ ಕ್ರಮಬದ್ಧತೆ, ತೊಡಕು ಬಿಚ್ಚಿ ಹೇಳುವ ಸರಳತೆ –ಹೀಗೆ ತನ್ನ ಸಹಜ ಗುಣಧರ್ಮದಿಂದ ಈ ವಚನ ಹೃದ್ಯವೆನಿಸುವದು.

ಈತನ ವಚನಗಳ ಕುರಿತು ಬಲ್ಲ ವಿಮರ್ಶಕರು ವ್ಯಕ್ತಗೊಳಿಸಿದ ಅಭಿಪ್ರಾಯವನ್ನು ಅವಲೋಕಿಸೋಣ :

'ಸ್ವತಂತ್ರ ಎಂಬ ವಿಶೇಷಣ ತಾನೇ ಹಚ್ಚಿಕೊಂಡಿದ್ದರೂ ಅವನ ವಚನಗಳಲ್ಲಿ ಕೆಲವು ಹಿಂದಿನ ವಚನಕಾರರನ್ನು ನೆನಪಿಸುತ್ತವೆ. ವಚನ ಸಮಯವೊಂದು ಬೆಳೆದು ಬಂದಿತ್ತೆನ್ನುವಂತೆ ಕೆಲವು ವಚನಗಳ ರಚನೆಯಿದೆ. ಇವನ ಕವಿತಾಶಕ್ತಿಯನ್ನು ತಿಳಿಯಲು ಹೆಚ್ಚಿನ ಆಧಾರಗಳು ಬೇಕು.'[೧೩]

---

೧೩. ರಂ. ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ, ೧೯೭೧, ಪು. ೨೯೮.

'ಸಾಹಿತ್ಯದೃಷ್ಟಿಯಿಂದ ಈತನ ಯಾವ ಗ್ರಂಥವೂ ಗಮನಾರ್ಹವಾಗಿಲ್ಲ. ವಚನಗಳಲ್ಲಿ ಇರಬೇಕಾದ ಸರಳತೆಯೇನೋ ಇದೆ. ಆದರೆ ಸಂಗ್ರಹ ಗುಣ ನಿಶಿತತೆಗಳು ಇಲ್ಲ. ಬರವಣಿಗೆಯ ವಿಷಯ ಗರ್ಭಿತವಾಗಿದ್ದರೂ ಸಾರವತ್ತಾಗಿಲ್ಲ.'[೧೪]

'ಈತನ ಕವಿತಾಶಕ್ತಿಯನ್ನು ತಿಳಿಯಲು ಹೆಚ್ಚಿನ ಆಧಾರಗಳು ಬೇಕು' ಎನ್ನುವ ರಂ. ಶ್ರೀ. ಮುಗಳಿ ಅವರ ಅಭಿಪ್ರಾಯವನ್ನು ಅಲ್ಲಗಳೆಯುವಂತಿಲ್ಲ. ಆದರೆ 'ಸಾಹಿತ್ಯ ದೃಷ್ಟಿಯಿಂದ ಈತನ ಯಾವ ಗ್ರಂಥವೂ ಗಮನಾರ್ಹವಾಗಿಲ್ಲ' ಎಂಬ ಹೇಳಿಕೆ ಕಟು ವಿಮರ್ಶೆಯೆನ್ನುವದಕ್ಕಿಂತ ಅವಸರದ ವಿಮರ್ಶೆಯೆನ್ನಬಹುದು. ಶರಣನೊಬ್ಬನ ಅನುಭವಕ್ಕೆ, ಅವನು ಸಾಧನೆಯಿಂದ ಪಡೆದ ಅನುಭಾವಕ್ಕೆ, ಅಂಥ ಅನುಭಾವದ ತಿಳುವಿನಲ್ಲಿ ಹೊಳೆವ ನುಡಿಗೆ ಒಂದು ವಿಶಿಷ್ಟ ಮೌಲ್ಯವಿರಬಹುದೋ, ಇಲ್ಲವೋ ಎಂಬುದನ್ನು ತೂಗಿನೋಡಿ ಹೇಳುವುದು ವಿಮರ್ಶೆಯ ದಾರಿಯಾದರೆ ಲೇಸು. ಗೊತ್ತಿರದ ಕಣ್ಣಿನಿಂದ ಕಂಡು ಹೇಳುವದಕ್ಕಿಂತ, ಗೊತ್ತುಹಚ್ಚಿದ ಕಣ್ಣಿನಿಂದ ಕಂಡು ಹೇಳುವುದು ವಿಮರ್ಶೆಯ ವಾಣಿಯಾಗಬೇಕು.

ಸದಾಚಾರದತ್ತ ಮನಬಾಗುವಂತೆ ತಿಳಿವನ್ನು ನೀಡುವುದು ವಚನಗಳ ಪರಮೋದ್ದೇಶ. ಅಂಥ ತಿಳಿವನ್ನು ನೀಡುವ ವಚನ ಶಾಸ್ತ್ರವಾಗಿ ಜಡವೆನಿಸದೆ, ಸ್ವಾದಿಷ್ಟವೆನಿಸುವಷ್ಟು, ಸಾಹಿತ್ಯದ ರಸದೀಕ್ಷೆ ಪಡೆದು, ಮನದಲ್ಲಿ ಮೂಡಿ ಪರಿಣಾಮ ಬೀರುವಂತಾದರೆ ಸಾಕು. ಹಾಗೆ ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳಲ್ಲಿ ಅನುಭಾವದ ಆಳವಿರುವದನ್ನೂ ಆದರೊಂದಿಗೆ ಸ್ವಾದಿಷ್ಟ ಗುಣವಿರುವದನ್ನು ಪರಿಶೀಲಿಸಿ ನೋಡಬಹುದು.

**"ಕೊರಳುದ್ದಕ್ಕೆ ಹೂಳಿಸಿಕೊಂಡು ಮುಗಿಲುದ್ದಕ್ಕೆ**
**ನೆಗೆದಿಹನೆಂಬವನ ಹಾಂಗೆ**
**ಶಿವನ ಜೋಕೆಯನ್ನರಿಯದೆ ಮಾತನಾಡುವ ಮಾತೆಲ್ಲವು**
**ಮಾತಿನ ಮಾಲೆಯಲ್ಲದೆ ಅಲ್ಲಿ ನಿಜವಿಲ್ಲ...."**

**(ಸ್ವ. ಸಿ. ೨೪–೧೦೨)**

ಮಾತಿನ ಮಾಲೆಗಾರನ ಮಾತಿನ ಜೊಳ್ಳುತನವನ್ನು ವಿಡಂಬಿಸುವಲ್ಲಿ ಮೇಲಿನ ಪ್ರತಿಮೆಯ ಪರಿಣಾಮಕರ ಗುಣವನ್ನು ವೀಕ್ಷಿಸಬೇಕು. ಶಿವನ ಜೋಕೆಯನ್ನರಿಯದೆ ಹೀಗೆ ಮಾತನಾಡುವದಕ್ಕೆ ಕಾರಣವೇನು ? ಮಾಯೆ ! ಆ ಮಾಯಾಜಾಲದ ಶಬ್ದ ಚಿತ್ರವನ್ನು ನೋಡಿ :

---

೧೪. ತ. ಸು. ಶಾಮರಾಯ, ಮೋ. ರಾಜೇಶ್ವರಯ್ಯ: ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ೧೯೬೪, ಪು. ೫೩೫.

**"ಜಗದಗಲ ಮಾಯಾಜಾಲವ ಹಿಡಿದು**
**ಕಾಲನೆಂಬ ಜಾಲಗಾರ ಜಾಲವ ಬೀಸಿದ ನೋಡಯ್ಯಾ**
**ಆ ಜಾಲಕ್ಕೆ ಹೊರಗಾದವರೊಬ್ಬರನೂ ಕಾಣೆ...."(ಸ್ವ. ಸಿ. ೯-೨೭)**

ಈ ಮಾಯಾಜಾಲದಿಂದ ಪಾರಾಗುವ ಹಂಚಿಕೆಯನ್ನು ಸ್ವಾನುಭವದಿಂದ ಹೇಳಿದ್ದಾನೆ ಈತನು :

**ಈ ಮನಕ್ಕೆ ಜ್ಞಾನಶಾಸ್ತ್ರವಕೊಟ್ಟು ಕಲಿಮಾಡಿ**
**ಸನ್ನಿಧಿಯಲ್ಲಿ ನಿರ್ಮಾಳಾಗಿರಿಸಿಕೊಳ್ಳಯ್ಯಾ ಈ ಮನವನು"**
**(ಸ್ವ. ಸಿ. ೧೧-೪೧)**

ಆತ್ಮಶಕ್ತಿಯನ್ನು ಬೆಳೆಸಿಕೊಂಡು ಕಲಿಯಾಗಿ ಹೋರಾಡಬಲ್ಲವನೇ ಈ ಮಾಯೆಯನ್ನು ಗೆಲ್ಲಬಲ್ಲ.

**"ಸವಿಪಾಲು ಸಕ್ಕರೆಯನುಣಕಲಿಸಿ ಬೇವನುಣಿಸಿಹೆನೆಂದರೆ**
**ಅದು ಹಿತವಹುದೆ ?**
**ನಿನ್ನ ನಿಜಸುವನುಣಗಲಿಸಿ**
**ಸಂಸಾರ ಸುಖವನುಣಿಸಿಹೆನೆಂದರೆ ಮನಕೊಂಬುದೆ ?"**
**(ಸ್ವ. ಸಿ. ೧೫-೫೯)**

ನಿಜಸುಖ ಮತ್ತು ಸಂಸಾರಸುಖ ಇವುಗಳಲ್ಲಿರುವ ಅಂತರವನ್ನು ತಿಳಿಸುವಲ್ಲಿ ಸವಿಪಾಲು ಮತ್ತು ಬೇವಿನ ದೃಷ್ಟಾಂತದ ಸಾರ್ಥಕತೆಯನ್ನು ಗಮನಿಸಬೇಕು.

ನಿಜಸುಖದ ದಾರಿಯನ್ನು ಅನುಭಾವಿಯು ಅನುಭಾವದಲ್ಲಿಯೇ ಕಾಣಬೇಕು.

**"ಸ್ವಸ್ಥಸಿದ್ಧಾಸನದಲ್ಲಿ ಕುಳ್ಳಿರ್ದು ಅತ್ತಿತ್ತ ಕಂಪಿಸದೆ**
**ನಿಟ್ಟೆಲವ ನೆಟ್ಟನೆ ಮಾಡಿ**
**.................................................**
**ಥಳಥಳಿಸಿ ಹೊಳೆವ ಲಿಂಗದ ಬೆಳಗಿನೊಳಗೆ**
**ಮನವಳಿದಾತನೆ ಉನ್ಮನಿವವನಿತೆಗೆ ವಲಭನೆನಿಸುವ"**
**(ಸ್ವ. ಸಿ. (೭೪-೨೭೨)**

ಯೋಗದ ಒಳದಾರಿ ಯೋಗಿಯ ಒಳಗಣ್ಣಿಗೆ ಮಾತ್ರ ಗೊತ್ತು. ಲಿಂಗದ ಬೆಳಗಿನ ಮಹಿಮೆಯನ್ನು ಥಳಥಳಿಸಿ ಹೊಳೆವ ಮಾತಿನಲ್ಲಿಯೇ ಬಣ್ಣಿಸಿದ್ದಾನೆ ಈತನು. ಭಾವಕ್ಕೆ ತಕ್ಕಂಥ ಶಬ್ದ-ಸಂಯೋಜನೆ ಕವಿಗಲ್ಲದೆ ಇನ್ನಾರಿಗೆ ಗೊತ್ತು ?

**"ಲಿಂಗವೇ ತಾನಾಗಿ, ತಾನೇ ಲಿಂಗವಾಗಿ ಲಿಂಗಲೀಯವಾದ**
**ಲಿಂಗೈಕ್ಯಂಗೆ**
**ವಿಶ್ವಮೋಹಿನೀಶಕ್ತಿ ಮೋಹಕವಿಲ್ಲದೆ ಹೋಯಿತ್ತು"**
**(ಸ್ವ. ಸಿ. ೧೧೧-೪೧೮)**

ಹೀಗೆ ಲಿಂಗವೇ ತಾನಾಗಿ ತಾನೇ ಲಿಂಗವಾದ ಯೋಗಿಗೆ ವಿಷಯದಾಸೆ ಇಲ್ಲ. ಅಂದ ಮೇಲೆ ವಿಶ್ವಮೋಹಿನೀ ಶಕ್ತಿಯ ಬಾಧೆ ಇಲ್ಲ. ಇಲ್ಲಿ ಅನುಭಾವದ ಆಳವನ್ನು ತಿಳಿಸುವಲ್ಲಿ ಬಳಸಿದ ಭಾಷೆಯ ಲಾಲಿತ್ಯವನ್ನು ಅದರಿಂದುಂಟಾಗುವ ಪರಿಣಾಮಕರ ಗುಣವನ್ನು ನೋಡಬೇಕು.

**"ತಿರುಳ ಕರಗಿದ ಬೀಜ ಮರಳಿ ಹುಟ್ಟಬಲ್ಲುದೆ ಅಯ್ಯಾ ?**
**ತೊಟ್ಟುಬಿಟ್ಟ ಹಣ್ಣು ಮರಳಿ ತೊಟ್ಟ ಹತ್ತುವದೆ ಅಯ್ಯಾ ?**
**ನೆಟ್ಟನೇ ಪ್ರಾಣಲಿಂಗದ ನಿಜವನರಿದವ**
**ಮರಳಿ ಹುಟ್ಟಬಲ್ಲನೆ ಹೇಳಾ...."**

**(ಸ್ವ. ಸಿ. ೬೮–೨೫೧)**

ಕವಿಯ ಭಾವವನ್ನು ಸಹೃದಯನ ಹೃದಯ ಭಕ್ತಿಯಲ್ಲಿ ಮೂಡಿಸುವಲ್ಲಿ ದೃಷ್ಟಾಂತವು ಬಹು ಪರಿಣಾಮಕಾರಿಯಾದ ಅಲಂಕಾರವಾಗಿದೆ. ಬೀಜ ಹಣ್ಣಿನ ದೃಷ್ಟಾಂತದಲ್ಲಿ ಅಂಥ ಗುಣವಿರುವುದನ್ನಿಲ್ಲಿ ಗಮನಿಸಬಹುದು.

**"ಬಡಕಲು ಪಶುವಿಂಗೆ ಬಲುದಂಡಿಯ ಕಟ್ಟಿದರೆ**
**ಎಳೆದೆಳೆದು ಸಾವಂತೆ ಸಾವುತ್ತಿದೆ ನೋಡಾ !**
**ಅಜ್ಞಾನ ಜಡಜೀವರು ದೇಹವೆಂಬ ದಂಡಿಯ ಕಟ್ಟಿಸಿಕೊಂಡು**
**ಬಿಡಲು ಪಾಯವ ಕಾಣದೆ ಹೊತ್ತು ತೊಳಲುತ್ತಿದ್ದರಲ್ಲಾ...."**
**(ಸ್ವ. ಸಿ. ೧೨–೪೩)**

ಬಡಕಲ ಪಶುವಿನ ಉಪಮೆ– ಈ ಉಪಮೆಯಲ್ಲಿ ಮೂಡಿದ ಪ್ರತಿಮೆ– ಜಡಜೀವರ ತೊಳಲಾಟದ ಚಿತ್ರಕ್ಕೆ ಕನ್ನಡಿಯಾಗಿದೆ.

ಗಹನವಾದ ಅಧ್ಯಾತ್ಮವನ್ನು ಅರ್ಥಗರ್ಭಿತವಾಗಿ ಹೇಳುವಲ್ಲಿಯೆ ಬೆಡಗಿನ ವಚನಗಳ ಸ್ವಾರಸ್ಯ ಅಡಕವಾಗಿದೆ. ಸ್ವತಂತ್ರ ಸಿದ್ಧಲಿಂಗೇಶ್ವರನ ಒಂದೆರಡು ವಚನಗಳನ್ನು ನೋಡೋಣ :

**"ಏಳುನೆಲೆಯಲ್ಲಿ ಹೂಳಿದ ನಿಧಾನವ ಸಾಧಿಸ ಹೋದರೆ**
**ಸಾಧಕನಂದು ನುಂಗಿತ್ತು ನೋಡಾ,**
**ಸಾಧಿಸಹೋದ ಕಲಿಗಳೆಲ್ಲಾ ನಿಧಾನವ ಸಾಧಿಸಹೋಗಿ**
**ತಾವೇ ನಿಧಾನಕ್ಕೆ ಬಲಿಯಾದರು**
**ಬಲ್ಲಿದರೆಲ್ಲರನು ನುಂಗಿ ಬಡವರನುಳಿಯಿತ್ತು**
**ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನೆಂಬ ನಿಧಾನವ**
**ಸಾಧಿಸಿದ ನಾನು ಬದುಕಿದೆನು" (ಸ್ವ. ಸಿ. ೭೧–೨೬೨)**

ನಿಧಾನದ ಪ್ರತೀಕದಿಂದ ಪರಮಾತ್ಮನನ್ನು ಅಲಂಕರಿಸಲಾಗಿದೆ. (ಭಕ್ತಿಯಲ್ಲಿ) ಬಲ್ಲಿದರಾದವರನ್ನು ನುಂಗಿ, (ಭಕ್ತಿಯಲ್ಲಿ) ಬಡವರಾದವರನ್ನು ಉಳಿಯಿತ್ತು—

ಎಂಬ ವಿರೋಧಾಭಾಸದಲ್ಲಿ ಅವ್ಯಕ್ತವಾದ ಅರ್ಥ ಪ್ರಕಾಶ ವ್ಯಕ್ತವಾದಲ್ಲಿ ಈ ವಚನದ ಮೌಲ್ಯ ಮನದಟ್ಟಾಗುವದು.

"ಗುರು ಶಿಷ್ಯನ ಕೊಂದು ಶಿಷ್ಯನಾದನು
ಶಿಷ್ಯ ಹೋಗಿ ಮರಳಿ ಗುರುವ ಕೊಂದು ಗುರುವಾದನು
ಗುರುಶಿಷ್ಯರೊಬ್ಬರನ್ನೊಬ್ಬರು ಕೊಂದು ಇಬ್ಬರೂ ಸತ್ತರು!
ತಲೆಬಾಗಿಲ ತೆಗೆದು ನೋಡಲು.... ಒಬ್ಬನೊಳಗಿಳಿದು ಒಬ್ಬನೈದಾನೆ
ಇಂತಿವರಿಬ್ಬರೂ ಸತ್ತ ಸಾವನಾರಿಗೂ ಅರಿಯಬಾರದು
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ
ಕರುಣವುಳ್ಳವರಿಗಲ್ಲದೆ" (ಸ್ವ. ಸಿ. ೮೪-೩೧೯)

'ಕೊಂದು' ಎಂಬುದಕ್ಕೆ ಅಜ್ಞಾನವ ಕಳೆದು ಎಂದು ಮತ್ತು 'ಸತ್ತರು' ಎಂಬುದಕ್ಕೆ ಅಂಗಗುಣವಡಗಿ ಲಿಂಗಗುಣ ಪಡೆದರು ಎಂದು ಅರ್ಥಮಾಡಿದರೆ, ಅರ್ಥ ಸ್ವಾರಸ್ಯ ಪ್ರಕಟವಾಗಿ, ಈ ಬೆಡಗಿನ ವಚನದ ಬೆಡಗು ಥಳಥಳಿಸುವದು. ಗುರುಶಿಷ್ಯರಿಬ್ಬರೂ ಪರಸ್ಪರ ಪೂರಕ ಸಹಾಯದಿಂದ ಜಡತ್ವವನ್ನಳಿದು, ಅಭಿನ್ನರೂಪ ತಾಳಿ, ಪರತತ್ತ್ವ ಪಡೆದ ಬಗೆಯನ್ನು ಈ ವಚನ ಸ್ವಾರಸ್ಯಕರವಾಗಿ ನಿರೂಪಿಸಿದೆ. ಇಂಥ ಹಲವುವಚನಗಳಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರ ಅನುಭಾವದೆತ್ತರವನ್ನೂ, ಕಾವ್ಯ ಶಕ್ತಿಯನ್ನೂ ಕಾಣಬಲ್ಲೆವು.

ಹಲ ಕೆಲವರು ಹೇಳುವಂತೆ, ಬಸವಾದಿ ವಚನಕಾರರ ಪ್ರಭಾವದಿಂದ ಈತನ ವಚನೋಕ್ತಿ ಮುಕ್ತವಾಗಿಲ್ಲ. ಹಲವು ನುಡಿಗಳಲ್ಲಿ, ಹಲವು ಬಗೆಗಳಲ್ಲಿ ಬಹುಶಃ ವಚನದ ಪ್ರಾರಂಭದಲ್ಲಿ ಅನುಕರಣದ ಮಾಯೆ ಮುಸುಕಿದಂತಿದೆ. ಸದಾ ನಾಲಿಗೆಯ ಮೇಲೆ ನಲಿದಾಡಬಲ್ಲ ಪಲ್ಲವಿಯಂಥ (ವಚನದ) ಪ್ರಥಮ ಚರಣ ಯಾರನ್ನಾದರೂ ಆಕರ್ಷಿಸಬಲ್ಲವು. ಅದಕ್ಕಾಗಿ ಬಸವಣ್ಣನವರ ವಚನ ಪ್ರಭಾವ ಈತನ ವಚನಗಳ ಮೇಲೆ ಹೆಚ್ಚಾದಂತಿದೆ. ವಚನಯುಗ ಮುಗಿದ ಮೇಲೆ ಕಾಲಾನಂತರ ಬಂದ ವಚನಕಾರರಲ್ಲಿ ಅನುಕರಣವಿರುವದು ಸ್ವಾಭಾವಿಕ. ಈ ಮಾತನ್ನು ಮೊದಲೇ ವಿವರಿಸಲಾಗಿದೆ.

"ಇಂದಿಗೆಂತು ನಾಳಿಗೆಂತು ಬೆಂದ ಒಡಲಿಂಗೆ ಚಿಂತಿಸಿ
ಭ್ರಮೆಗೊಂಡು ಬಳಲಬೇಡ ಮರುಳೇ" (ಸ್ವ. ಸಿ. ೩೩-೧೧೭)

ಈ ವಚನ ಬಸವಣ್ಣನವರ

"ಇಂದಿಂಗೆಂತು ನಾಳಿಂಗೆಂತು ಎಂದು ಬೆಂದ
ಒಡಲ ಹೊರೆಯ ಹೋಯಿತೆನ್ನ ಸಂಸಾರ''
(ಬ. ವ. ೧೦-೧೭)

ಎಂಬ ವಚನವನ್ನು ಹೋಲುತ್ತದೆ. ಇಂಥ ಹಲವು ವಚನಗಳನ್ನು ಎತ್ತಿ ತೋರಿಸಬಹುದು. ಆದರೆ ಈತನ ಎಲ್ಲ ವಚನಗಳು ಅನುಕರಣಕ್ಕೆ ಗುರಿಯಾದವುಗಳಲ್ಲ. ಸಾಧನೆಯ ತುತ್ತತುದಿಗೆ ಪರಿಣತಿ ಪಕ್ವತೆ ಬರುವದೆಂಬುದನ್ನು ಈತನ ಹಲವಾರು ವಚನಗಳು ತೋರಿಸಿಕೊಡುತ್ತವೆ. ಅಂಥ ವಚನಗಳಲ್ಲಿ ಪ್ರತಿಭೆಯ ಮಿಂಚು ಇದೆ, ಸ್ವಂತ ಶೈಲಿಯೂ ಇದೆ.

**ಅಂತರಂಗದಲ್ಲಿ ಆಡುವ ಪಕ್ಷಿಯ ಅಂತವನಾರು ಬಲ್ಲರು ಹೇಳಾ**
**ಅಂತರ ಮಹದಂತರವನೊಡಗೂಡಿ ಸ್ವತಂತ್ರವಾಗಿ ನಿಂದ ನಿಲವನು**
**ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ**
**ನಿಮ್ಮ ಶರಣರಾದ ಮಹಾಂತರೇ ಬಲ್ಲರು (ಸ್ವ. ಸಿ. ೮೩–೩೦೬)**

ಈತನು ಸಾಧಿಸಿದ ಆತ್ಮೋನ್ನತಿಗೂ ಈ ವಚನವೇ ಸಾಕ್ಷಿ! ಉತ್ತರೋತ್ತರವಾಗಿ ಗಳಿಸಿದ ಕಾವ್ಯೋನ್ನತಿಗೂ ಸಾಕ್ಷಿ! ಸ್ವತಂತ್ರ ಸಿದ್ಧಲಿಂಗೇಶ್ವರನು ಅಂತರಂಗದಲ್ಲಿ ಸ್ವತಂತ್ರನಾಗಿ ನಿಂದ ನಿಲುವಿನ ನಿರೂಪಣೆಯಿದೆ ಇಲ್ಲಿ, ವಚನೋಕ್ತಿಯಲ್ಲಿಯೂ ಸ್ವತಂತ್ರ ಶೈಲಿ ಸಂಪಾದಿಸಿರುವದನ್ನು ಇದು ಪರ್ಯಾಯವಾಗಿ ಸೂಚಿಸುತ್ತದೆ.

ಷಟ್‌ಸ್ಥಲಜ್ಞಾನ, ಪ್ರಸಾದ, ಪಂಚಕೋಶ ಮುಂತಾದ ಅನುಭಾವಿಕ ವಿಚಾರಗಳನ್ನು ಕುರಿತು ಬರೆದ ವಚನಗಳ ಸವಿಸೊಬಗನ್ನು ಓದಿಯೇ ಸವಿಯಬೇಕು. ಹೀಗೆ ಹಲವಾರು ವಚನಗಳಲ್ಲಿ ಅಲ್ಲಲ್ಲಿ ಕಾವ್ಯದ ಕೈವಾಡ ಮೋಡಿಯನ್ನು ಬೀಸಿದ್ದುಂಟು. ಒಪ್ಪ ಓರಣದ ಗಾಡಿ ತೀಡಿದ್ದುಂಟು. ತಿಳಿಯಾದ ಮಾತಿನಲ್ಲಿ ಮುತ್ತನ್ನು ಪವನಿಸುವ ಕೌಶಲ ಈತನಲ್ಲಿಯೂ ಇರುವುದನ್ನು ಓದಿ ಅರಿತುಕೊಳ್ಳಬಹುದು.

## ಮುಕ್ತ್ಯಂಗನಾ ಕಂಠಮಾಲೆ :

ಸ್ವತಂತ್ರ ಸಿದ್ಧಲಿಂಗೇಶ್ವರನು ತನ್ನ ನಿಜಾನುಭಾವದ ವಚನಾಮೃತ ಶರಧಿಯೊಳಗನರ್ಘ್ಯವಾದ ರತ್ನಂಗಳನೆ ತೆಗೆದು ಸರಂಗೊಳಿಸಿ ಮುಕ್ತ್ಯಂಗನಾ ಕಂಠಮಾಲೆ ಎನಲೊಪ್ಪುವ ಹೆಸರಿಟ್ಟನು. ಆ ವಚನಂಗಳೊಳಗೆ ಅತ್ಯಂತ ಗೋಪ್ಯವಾದ ವಚನಂಗಳನೆ ತೆಗೆದು.... ತೊಳಗಿ ಬೆಳಗಲೆಂದು ಕನ್ನಡಿಸಿ ಪೇಳ್ವೆನದೆಂತೆಂದಡೆ.[೧೫]

ಮುಕ್ತ್ಯಂಗನಾ ಕಂಠಮಾಲೆಗೆ ವ್ಯಾಖ್ಯಾನ ಬರೆದಂಥ ಚೆನ್ನದೇವರು ತನ್ನ ವ್ಯಾಖ್ಯಾನದಲ್ಲಿ ಮೇಲಿನಂತೆ ತಿಳಿಸಿದ್ದಾನೆ. ಅನುಭಾವದಿಂದ ಅಮೂಲ್ಯವಾದ ಕೆಲವು ವಚನಗಳನ್ನು ಸಂಗ್ರಹಿಸಿದವನು ಸ್ವತಂತ್ರ ಸಿದ್ಧಲಿಂಗೇಶ್ವರನು. ಆದಕ್ಕೆ 'ಮುಕ್ತ್ಯಂಗನಾ ಕಂಠಮಾಲೆ' ಎಂದು ಹೆಸರಿಟ್ಟವನು ಅವನೇ; ವ್ಯಾಖ್ಯಾನ ಬರೆದವನು

---

೧೫. ಎಚ್. ಪಿ. ಮಲ್ಲೇದೇವರು: ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೭೫, ಪು. ೨೬, (ಪ್ರಸ್ತಾವನೆ)

ಮಾತ್ರ ಚೆನ್ನದೇವರು. ಆದರೂ ಸಹೃದಯರ ಅವಲೋಕನೆಗಾಗಿ ಒಂದು ವಚನ ಮತ್ತು ಅದರ ವ್ಯಾಖ್ಯಾನವನ್ನಿಲ್ಲಿ ನಿರೂಪಿಸಲಾಗುವದು.

**ನನ್ನಿಂದ ಅರಿದೆನೆಂದೆನೇ, ನನ್ನಿಂದ ಅರಿದವನಲ್ಲ**
**ನಿಮ್ಮಿಂದ ಅರಿದೆನೆಂದೆನೇ, ನಿಮ್ಮಿಂದ ಅರಿದವನಲ್ಲ**
**ಅದೇನು ಕಾರಣವೆಂದರೆ**
**ಕಣ್ಣಬೆಳಗು ಸೂರ್ಯಬೆಳಗು ಕೂಡಿ ಕಾಂಬಂತೆ**
**ನನ್ನ ನಿನ್ನರವಿನ ಸಂಬಂಧ ಚೆಂಬಳಿಯಲಿ ಅರಿದೆನು ಕಾಣಾ**
**(ಸ್ವ. ಸಿ. ೫–೧೫)**

ಇದರ ವ್ಯಾಖ್ಯಾನ : 'ಮೂಲಜ್ಞಾನವೆಂಬ ಚಿದಾಕಾಶವು ಹಂಸ ಸ್ವರೂಪವಾದ ಮೂಲಾಂಹಕಾರದ ಅರಿವಿಗೆ ಗೋಚರಿಸದು. ಚಿದಂಹಕಾರದ ಅರಿವಿಗೂ ಗೋಚರಿಸದು. ಅದೆಂತೆಂದೊಡೆ ಒಂದಾನೊಂದು ಆಕಾಶದಲ್ಲಿ ಕಾವಳ ಬೆಡಗು ಅಡಗಿ ತೋರುವದಲ್ಲದೆ ರೂಪಾಂತರವಾಗಿ ಬೇರೆ ತೋರಲರಿಯದ ಹಾಗೆ ಎರಡನ್ನೂ ಗರ್ಭಿಸಿಕೊಂಡು ತೋರುವದೆಂಬುದೀಗ ತಾತ್ಪರ್ಯಾರ್ಥ.'[೧೬]

ಗಹನವೆನಿಸುವ ಆತ್ಮಜ್ಞಾನ ವಿಷಯವನ್ನೂ ತಿಳಿಯಾಗಿ ಹೇಳಿರುವದನ್ನು ಇಲ್ಲಿ ಕಾಣುತ್ತೇವೆ. ಆತ್ಮಜ್ಞಾನದ ರಹಸ್ಯವರಿಯುವದಕ್ಕೆ ಇಂಥ ವ್ಯಾಖ್ಯಾನವೂ ಸಹಕಾರಿಯಾಗಬಲ್ಲದು. ಸ್ವತಂತ್ರ ಸಿದ್ಧಲಿಂಗೇಶ್ವರನ ಸಮಕಾಲೀನನಾದ ಚೆನ್ನದೇವರು ಬರೆದ ವ್ಯಾಖ್ಯಾನವೇ ಇಲ್ಲಿ ಪ್ರಧಾನವಾದುದು. ಆತನ ವಚನಕ್ಕೊಂದು ಕೈಪಿಡಿಯೆನಿಸುವದು. ಇದನ್ನು ಕುರಿತು ಹೆಚ್ಚಿನ ವಿವೇಚನೆ ಅನಗತ್ಯವಿಲ್ಲ.[೧೭]

**ಜಂಗಮರಗಳೆ :**

ಸ್ವತಂತ್ರ ಸಿದ್ಧಲಿಂಗೇಶ್ವರನು ರಚಿಸಿದ ನಾಲ್ಕೈದು ಪುಟವುಳ್ಳ ಪುಟ್ಟ ಪುಸ್ತಿಕೆಯಿದು. ಷಟ್‌ಸ್ಥಲ ಸಿದ್ಧಾಂತದಲ್ಲಿ ಗುರು–ಲಿಂಗ-ಜಂಗಮಕ್ಕೆ ಮಹತ್ತರವಾದ ಸ್ಥಾನವಿದೆ. ಶಿವನ ಜಾಗೃತ ಸ್ವರೂಪವೇ ಜಂಗಮರೂಪ. ಈ ಜಂಗಮ ಮಹಿಮೆಯನ್ನು ಬಣ್ಣಿಸುವ ಪುಸ್ತಿಕೆಯಿದು.

**ಇಂತಿ ಜಂಗಮದಿರವಂ**
**ಸಂತಸದಿಂ ಪೇಳ್ದ ಸಿದ್ಧಲಿಂಗೇಶ್ವರನ**
**ಸಂತತ ಬರೆದೋದಿ (ದಗಂ)**
**ಚಿಂತಿಸಿದುದನೀವನವಗೆ ಗುರುಬಸವೇಶಂ**

---

೧೬. ಎಚ್. ಪಿ. ಮಲ್ಲೇದೇವರು: ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೭೫ ಪು. ೧೭೬.

೧೭: ಅದೇ ಪು. ೩೦. (ಪ್ರಸ್ತಾವನೆ)

ಜಂಗಮ ರಗಳೆಯ ಕೊನೆಯಲ್ಲಿ ಬರುವ ಈ ಪದ್ಯದಿಂದ ಇದರ ಕರ್ತೃ ಸ್ವತಂತ್ರ ಸಿದ್ಧಲಿಂಗೇಶ್ವರನೆಂದು ತಿಳಿಯುವುದು.

**"ಶ್ರೀ ಶಿವ ಜಂಗಮದಿರವಂ**
**ದಾಸೋಹ (ವ) ಮುಂದುಗೊಂಡು ಮೃದುನುಡಿಯಿಂದಂ**
**ಬೇಸರುಮಿನಿತಿಲ್ಲದೆ ನಾಂ**
**ಲೇಸಾಗಿಯೆ ನುತಿಸಿ ಜನನ ಪಾಶವ ಪರಿವೆಂ"**

ಜಂಗಮ ರಗಳೆಯ ಪ್ರಾರಂಭದಲ್ಲಿ ಬರುವ ಈ ಪದ್ಯದಿಂದ ಇದರ ಉದ್ದೇಶ ವಿದಿತವಾಗುವದು.

**"ಜಂಗಮವೆ ಗುರುವೆನಗೆ ಜಂಗಮವೆ ಪರವೆನಗೆ**
**ಜಂಗಮವೆ ಮತಿಯೆನಗೆ (ರ)ಕ್ಷಿಸೆಲೆ ಜಂಗಮವೆ"**

ಹೀಗೆ ಜಂಗಮದ ಮಹೋನ್ನತ ಘನತೆ ಗೌರವವನ್ನು ವರ್ಣಿಸುವ ಕೃತಿಯಿದು, ಸರಳತೆಯೇ ಇದರ ಪ್ರಧಾನಗುಣ. ಆದರೆ ಸಾಹಿತ್ಯವಲ್ಲ. ಏನಿದ್ದರೂ ಸ್ವತಂತ್ರ ಸಿದ್ಧಲಿಂಗೇಶ್ವರನ ಸ್ವಂತಿಕೆಯನ್ನಾಗಲಿ ಸಾಹಿತ್ಯ ಸ್ವರೂಪವನ್ನಾಗಲಿ ಅವನ ವಚನಗಳಲ್ಲಿ ಕಾಣಬೇಕು.

**ಘನಲಿಂಗಿದೇವ :**

**"ಎಲೆ ತಂಗಿ**
**ಶರಣಸತಿ ಲಿಂಗಪತಿಯಾದ ಪತಿವ್ರತಾಭಾವದ ಚಿನ್ಹೆ**
**ನಿನ್ನ ನಡೆನುಡಿಯಲ್ಲಿ ಹೊಗರುದೋರುತ್ತಿದೆ**
**ನಿನ್ನ ಪೂರ್ವಾಪರವಾವುದವ್ವಾ ?**
**ಸುತ್ತೂರು ಸಿಂಹಾಸನದ ಪರ್ವತದೇವರ ಶಿಷ್ಯರು**
**ಭಂಡಾರಿ ಬಸವಪ್ಪೊಡೆಯರು**
**ಆ ಭಂಡಾರಿ ಬಸವಪ್ಪೊಡೆಯದೇವರ ಶಿಷ್ಯರು ಕೂಗಲೂರು**
**ನಂಜಯ್ಯದೇವರು**
**ಆ ನಂಜಯ್ಯದೇವರ ಕರಕಮಲದಲ್ಲಿ ಉದಯವಾದ**
**ಶರಣವೆಣ್ಣಯ್ಯ ನಾನು !**
**ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ**
**ತೋಂಟದಾರ್ಯನಿಗೆ**
**ಗುರುಭಕ್ತಿಯಿಂದೆನ್ನ ಶರಣು ಮಾಡಿದರು**
**ಆ ತೋಂಟದಾರ್ಯನು ತನ್ನ ಕೃಪೆಯೆಂಬ ತೊಟ್ಟಿಲೊಳಗೆ**
**ಮಲಗಿಸಿ**
**ಪ್ರಮಥಗಣಂಗಳ ವಚನ ಸ್ವರೂಪಾರ್ಥವೆಂಬ ಹಾಲು ತುಪ್ಪವಂ**

ಸದಾ ದಣಿಯಲೆರದು, ಅಕ್ಕರಿಂದ ರಕ್ಷಣೆಯಂ ಮಾಡಿ
ಘನಲಿಂಗಿಯೆಂಬ ನಾಮಕರಣಮಂ ಕೊಟ್ಟು ಪ್ರಾಯ
ಸಮರ್ಥೆಯಂ ಮಾಡಿ
ಸತ್ಯ ಸದಾಚಾರ ಜ್ಞಾನ ಕ್ರಿಯೆಗಳೆಂಬ ದಿವ್ಯಾಭರಣಂಗಳಂ ತೊಡಿಸಿ,
ಅರುಹೆಂಬ ಬಣ್ಣವ ಸಿರಿವಿಡಿದುಡಿಸಿ,
ಅರ್ತಿಯ ಮಾಡುತಿಪ್ಪ ಸಮಯದಲ್ಲಿ
ಘನಲಿಂಗಿ ಮೋಹದ ಚನ್ನಮಲ್ಲಿಕಾರ್ಜುನ ತನಗೆ
ನಾನಾಗಬೇಕೆಂದು ಬೇಡಿ ಕಳುಹಲು
ಎಮ್ಮವರು ಅವರಿಂಗೆ ಮಾತನಿಕ್ಕಿದರವ್ವಾ !"

(ಘ. ೭-೧೧)

ಆತ್ಮವೃತ್ತಾಂತವನ್ನು ಕುರಿತು ಘನಲಿಂಗಿದೇವನೇ ಹೇಳುವ ವಚನವಿದು. ಈತನ ಶರಣ ಜೀವನದ ರೂಪರೇಷೆಯ ಈ ಚಿತ್ರ ಹೃದಯಂಗಮವಾಗಿದೆ. ಈತನ ವಚನೋಕ್ತಿಯು ಕಾವ್ಯದ ಮಿಂಚು, ಪ್ರಥಮ ದರ್ಶನದಲ್ಲಿಯೇ ಕಾವ್ಯಾರ್ಥಿಯ ಕಣ್ಣು ಕುಕ್ಕಿಸಿ, ಕೈಬೀಸಿ ಕರೆಯುವಂತಿದೆ. ಬಸವಾದಿ ಶರಣರ ವಚನಗಳ ಸವಿಯುಂಡು ತಣಿದ ಮೇಲೆ, ಅಂಥ ಸವಿಗಾಗಿ ಹಂಬಲಿಸುತ್ತಿದ್ದ ಸಹೃದಯರ ಅಭಿಲಾಷೆಗೆ ದೀರ್ಘಕಾಲಾವಧಿಯವರೆಗೆ ನಿರಾಶೆ ಮುಸುಕಿದಂತಾಗಿತ್ತು. ಅಂಥ ವಾತಾವರಣದಲ್ಲಿ ಘನಲಿಂಗದೇವನ ವಚನಗಳು ಬೇಸಿಗೆಯಲ್ಲಿ ತಂಪನ್ನೆರೆಯುವ ತಂಗಾಳಿಯಾಗಿ ಮೂಡಿಬಂದವು ಎಂದು ಹೇಳಿದರೆ ತಪ್ಪಲ್ಲ.

ಪೂಜ್ಯಪೀಠವೆಂದು ಖ್ಯಾತಿವೆತ್ತ ಸುತ್ತೂರು ಘನಲಿಂಗಿದೇವನ ಜನ್ಮಸ್ಥಳ ವಾಗಿದೆ. ತೋಂಟದ ಸಿದ್ಧಲಿಂಗಯತಿಗಳ ಶಿಷ್ಯ ಸಮೂಹದಲ್ಲಿ ಈತನೂ ಒಬ್ಬನೆಂಬ ವಿಷಯವನ್ನು ಮೊದಲೇ ತಿಳಿಸಲಾಗಿದೆ. ಆ ಮಹಾತ್ಮನ ಜನ್ಮಸ್ಥಳವಾದ ಹರದನಹಳ್ಳಿಯು ಕವಿಯ ಜನ್ಮಸ್ಥಳವಾದ ಸುತ್ತೂರಿಗೆ ಅನತಿದೂರದಲ್ಲಿದೆ. ಅಲ್ಲದೆ ನಿಜಗುಣ ಶಿವಯೋಗಿಯ ಶಂಭುಲಿಂಗದೇವರ ಬೆಟ್ಟ, ರೇವಣಾರಾಧ್ಯನ ಸೋಸಲೆ, ಷಡಕ್ಷರದೇವನ ಎಳಂದೂರು -ಇತ್ಯಾದಿ ಪ್ರಖ್ಯಾತ ಸಾಹಿತ್ಯ ಕ್ಷೇತ್ರಗಳೆಲ್ಲವೂ ವಚನಕಾರ ಘನಲಿಂಗಿದೇವರ ಸ್ಥಳಕ್ಕೆ ಸುತ್ತುವರೆದಿದೆ. ಹೀಗೆ ಒಳ್ಳೆಯ ಕ್ಷೇತ್ರ ಮಹಾತ್ಮ್ಯೆ, ಶ್ರೇಷ್ಠನಾದ ಗುರುವಿನ ಸಾನಿಧ್ಯ ಪವಿತ್ರವಾದ ಗುರುಪರಂಪರೆ, ಮಿಗಿಲಾದ ಜನ್ಮಸಂಸ್ಕಾರ, ಪುಣ್ಯಪ್ರದವಾದ ತೋಂಟದಾರ್ಯನ ಆಶೀರ್ವಾದ -ಇತ್ಯಾದಿಗಳಿಂದ ಕೂಡಿದ ಪಕ್ವತ ವಚನಕಾರನು ಆಧ್ಯಾತ್ಮಿಕ ಸ್ಫೂರ್ತಿಯಿಂದ ಶ್ರೇಷ್ಠ ವಚನಗಳನ್ನು ಬರೆದಿರುವದು ಸಹಜವಾಗಿಯೇ ಇದೆ.೧೮

೧೮. ಬಿ. ಶಿವಮೂರ್ತಿಶಾಸ್ತ್ರಿ: ಘನಲಿಂಗಿದೇವರ ವಚನ, ೧೯೫೦, ಪು. ೧-೨ (ಪ್ರಸ್ತಾವನೆ).

ಸುತ್ತೂರು ಮಠದ ಪೀಠವು ಬಹು ಪುರಾತನವಾದದು. ಈ ಪುಣ್ಯ ಪೀಠದ ಆದಿಗುರುಗಳು ಶಿವರಾತ್ರೀಶ್ವರ ಸ್ವಾಮಿಗಳು. ಈ ಮಹಾಪೀಠಕ್ಕೆ ಅಧಿಪತಿಗಳಾಗಿ ಬಂದವರು ಪವಾಡಪುರುಷರೂ ಪಂಡಿತರೂ ಸಾಹಿತಿಗಳೂ ಆಗಿದ್ದರು. ಇಂಥ ಉಜ್ವಲ ಪರಂಪರೆಯ ಸುತ್ತೂರು ಪೀಠಕ್ಕೆ ವಚನಕಾರನಾದ ಘನಲಿಂಗಿದೇವನು ಪೀಠಾಧಿಕಾರಿಯಾಗಿ ಬಂದಿದ್ದಾನೆ.

ಘನಲಿಂಗಿದೇವನ ಕಾಲನಿರ್ಣಯ ಕುರಿತು ಹೆಚ್ಚಿಗೆ ಚರ್ಚಿಸುವ ಅಗತ್ಯವೆನಿಸುವದಿಲ್ಲ. ತೋಂಟದ ಸಿದ್ಧಲಿಂಗಯತಿಗಳು ವಿಜಯನಗರದ ವಿರೂಪಾಕ್ಷನ ಕಾಲದಲ್ಲಿ (ಕ್ರಿ. ಶ. ೧೪೭೦) ಇದ್ದಿರಬೇಕೆಂದು ತಿಳಿಸಿದ ಕವಿಚರಿತೆಕಾರರ ಅಭಿಪ್ರಾಯವನ್ನೇ ಸಧ್ಯಕ್ಕೆ ಒಪ್ಪಿಕೊಳ್ಳಲಾಗಿದೆ. ಆದ್ದರಿಂದ ಆ ಯತಿಗಳ ಶಿಷ್ಯನಾದ ಸ್ವತಂತ್ರ ಸಿದ್ಧಲಿಂಗೇಶ್ವರನೂ ಹೆಚ್ಚು ಕಡಿಮೆ ಸಮವಯಸ್ಕನಾಗಿ ೧೬ನೆಯ ಶತಮಾನದ ಆದಿಯಲ್ಲಿ ಇದ್ದಿರಬೇಕು.

ಈವರೆಗೆ ಸಿಕ್ಕ ವಚನಗಳ ಮೇಲಿಂದ ಹೇಳುವದಾದರೆ, ಘನಲಿಂಗಿದೇವರು ಬರೆದ ವಚನಗಳ ಸಂಖ್ಯೆ ೬೫, ಶರಣಸತಿ, ಲಿಂಗಪತಿ ಭಾವದ ವಚನಗಳೇ ಹೆಚ್ಚಾಗಿವೆ. ಅಷ್ಟೇಯಲ್ಲ, ಅಂಥ ವಚನಗಳಲ್ಲಿ ಒಂದು ಬಗೆಯ ಕಾವ್ಯಸತ್ವ ಅಡಕವಾಗಿದೆ. 'ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ' ಎಂಬುದು ಈತನ ವಚನಾಂಕಿತವಾಗಿದೆ. ಈತನ ವಚನಾಂಕಿತವು ಶರಣಸತಿ ಲಿಂಗಪತಿ ಭಾವವನ್ನು ಸೂಚಿಸುವಂತಿದೆ.

"ಈ ಗ್ರಂಥವು ೧೯೦೭ರಲ್ಲಿ ನನ್ನ ವಿದ್ಯಾಗುರುಗಳಾಗಿದ್ದ ಕರಿಬಸವಶಾಸ್ತ್ರಿಗಳ ಶಿಷ್ಯರಾದ ಎಂ. ಬಸವಲಿಂಗಶಾಸ್ತ್ರಿಗಳಿಂದ ಮೈಸೂರಿನಲ್ಲಿ ಪ್ರಕಟವಾಗಿದೆ. ಮತ್ತೆ ೧೯೨೭ರಲ್ಲಿ ಬಿಜಾಪುರದಲ್ಲಿ ಶಿವಾನುಭವ ಗ್ರಂಥಮಾಲೆಯಲ್ಲಿ ಫ. ಗು. ಹಳಕಟ್ಟಿಯವರಿಂದ ಪ್ರಕಟವಾಗಿದೆ. ಮೈಸೂರಿನ ಪ್ರತಿಯಲ್ಲಿ ೬೩ ವಚನಗಳು, ಬಿಜಾಪುರದ ಪ್ರತಿಯಲ್ಲಿ ೬೦ ವಚನಗಳೂ ಇವೆ. ಈಗ ನಾವು ಪ್ರಕಟಿಸಿರುವ ಗ್ರಂಥದಲ್ಲಿ ೬೫ ವಚನಗಳಿವೆ. ಹೀಗೆ ವಚನಗಳ ಸಂಖ್ಯೆ ಹೆಚ್ಚು ಕಡಿಮೆಯಾಗಲು ಹಸ್ತಪ್ರತಿ ಮತ್ತು ತಾಳೆಯೋಲೆ ಪ್ರತಿಗಳಲ್ಲಿ ಹಿಂದಿನವರ ಸಂಗ್ರಹವು ಏಕಪ್ರಕಾರವಾಗಿ ಇಲ್ಲದಿರುವದೇ ಕಾರಣವಾಗಿದೆ. ತಮಗೆ ಈ ಕವಿಯ ವಚನಗಳ ತಾಳೆಯೋಲೆಯ ಗ್ರಂಥ ಸಿಕ್ಕಿಲ್ಲವಾದ್ದರಿಂದ ನಮ್ಮಲ್ಲಿರುವ ಒಂದು ಹಸ್ತಪ್ರತಿಯ ಆಧಾರದಿಂದ ಪ್ರಕೃತ ಘನಲಿಂಗಿದೇವರ ವಚನಗಳನ್ನು ಸಂಗ್ರಹಿಸಿ ಪ್ರಕಟಿಸಿರುತ್ತೇವೆ. ಇತರರ ವಚನಗಳಲ್ಲಿಯೂ ಘನಲಿಂಗಿಯ ವಚನಗಳು ಸೇರಿ ಹೋಗಿವೆ. ಅವನ್ನೆಲ್ಲ ಸಂಶೋಧಿಸುವದಗತ್ಯ."[೧೯]

---

೧೯. ಬಿ. ಶಿವಮೂರ್ತಿಶಾಸ್ತ್ರಿ: ಘನಲಿಂಗಿದೇವರ ವಚನ, ೧೯೫೦, (ಪ್ರಸ್ತಾವನೆ) ಬಿನ್ನಹ ಭಾಗ.

ಘನಲಿಂಗಿದೇವನು ಬರೆದ ವಚನಗಳು ಬಹಳವಿರದಿದ್ದರೂ, ಅಷ್ಟರಿಂದಲೇ ಈತನ ವಚನಗಳಲ್ಲಿ ಅಡಕವಾದ ವಿಚಾರಸರಣಿಯನ್ನು, ಅನುಭಾವ ಸಾಹಿತ್ಯ ಸೊಬಗನ್ನು ಅರಿತುಕೊಳ್ಳಬಹುದು.

ವಚನ ರಚನೆ ಶರಣರ ಉದ್ದೇಶವಲ್ಲ. ಶರಣ ಜೀವನವೊಂದು ಪ್ರಯೋಗಾಲಯ. ಅಲ್ಲಿ ಅವರು ಪಡೆದ ಅನುಭಾವವೊಂದು ಅಳಿಯದ ಅಧ್ಯಾತ್ಮ ಸಂಪತ್ತಿ. ಹೀಗೆ ಶರಣರ ಅನುಭಾವದ ಉದ್ಗಮವೆ ವಚನ. ಇದೆಲ್ಲ ಒಂದೆರಡು ದಿನಗಳಲ್ಲಿ ಪಡೆಯು ವಂಥ ಪರಿಣತಿಯಲ್ಲ. ಅಂಥವನು ಸಾಧಕನಾಗಿ ಸಾಧನೆ ಮಾಡಬೇಕು. ಆತ್ಮನಿರೀಕ್ಷೆ ಪರೀಕ್ಷೆ ನಡೆಯಬೇಕು. ಮನದ ಕೊಳೆಯನ್ನು ತೊಳೆದುಕೊಳ್ಳಬೇಕು. ತಿಳಿಮನದವ ನಾಗಿ ನಿಲ್ಲಬೇಕು. ಅಂಗಹೋಗಿ ಲಿಂಗವಾಗುವ ಮುನ್ನ ಈ ಕ್ರಿಯೆ ಎಡೆಬಿಡದೆ ನಡೆಯಬೇಕು. ಇಂಥ ಪ್ರಯೋಗಾಲಯದಲ್ಲಿ ತಾವು ಪಟ್ಟ ಕಷ್ಟ ಕೋಟಲೆಯನ್ನು ಪಡೆದುಕೊಂಡ ದಿವ್ಯ ಅನುಭವವನ್ನು ಎಲ್ಲ ವಚನಕಾರರೂ ತಮ್ಮ ವಚನಗಳ ಮೂಲಕ ತೋಡಿಕೊಂಡಿದ್ದಾರೆ. ಆ ರೀತಿ ಘನಲಿಂಗಿದೇವನೂ ತನ್ನ ವಚನಗಳಲ್ಲಿ ಅಂತರಂಗವನ್ನು ತೋಡಿಕೊಂಡಿದ್ದಾನೆ.

**ಒಂದು ದಿವಸ ಸವಿಯೂಟ ತಪ್ಪಿದರೆ**
**ಹಲವ ಹಂಬಲಿಸಿ ಹಲ್ಲುಗಿರಿದು**
**ಎನ್ನ ಕೊಂದು ಕೂಗುತ್ತಿದೆ ನೋಡಾ !**
**ಶ್ವಪಚನುತ್ತಮನ ಕೂಡೆ ಸಂಕಲೆಯನಿಕ್ಕುವರೆ ಅಯ್ಯಾ ?**

(ಘ. ೨-೨)

ಭೋಗದ ಮೇಲೆ ಚಪಲವುಳ್ಳ ವಸ್ತುಗಳಲ್ಲಿ ಪರಮಾತ್ಮನ ಚುಳುಕಾದ ರೂಪ ಹೊತ್ತುಬಂದ ಜೀವಾತ್ಮನೆಲ್ಲಿ ! ಅಂಥ ಚಪಲೇಂದ್ರಿಯಗಳ ಸಂಗಡ ಇಂಥ ಆತ್ಮ ಸಂಬಂಧ ಕಲ್ಪಿಸಿರುವದು ಉಚಿತವೆ ? ಎಂಬ ಪ್ರಶ್ನೆ ಮಾರ್ಮಿಕವಾಗಿದೆ. ವಿಸಂಗತ ಜೊತೆಯ ದುಷ್ಪರಿಣಾಮವನ್ನು ಸೂಚ್ಯವಾಗಿ ತಿಳಿಸುವ ಪ್ರಸ್ತುತ ದೃಷ್ಟಾಂತದ ಔಚಿತ್ಯವನ್ನಿಲ್ಲಿ ಗಮನಿಸಬೇಕು,

**ಕಪಿಕಳ್ಳಕುಡಿದು, ಕಡಲ ದಾಂಟುವನೆಂದು**
**ಲಂಘಿಸಿ ನೀರಿನಲ್ಲಿ ಬಿದ್ದು,**
**ಮೀನು ಮೊಸಳೆಗೆ ಆಹಾರವಾದಂತಾಯಿತಯ್ಯ ಎನ್ನ ಬಾಳು**

(ಘ. ೨-೩)

ಆಧ್ಯಾತ್ಮಿಕ ಸಿದ್ಧಿಯನ್ನು ಪಡೆಯುವದು ವಿಸ್ತಾರವಾದ ಕಡಲ ದಾಟುವದ ಕ್ಕಿಂತಲೂ ಪ್ರಯಾಸಕರವಾದುದು. ಇಲ್ಲಿ ಕಪಿಯ ಪ್ರತಿಮೆ ಈ ಬಿಕ್ಕಟ್ಟನ್ನು ಹೃದಯ ಸ್ಪರ್ಶಿಯಾಗಿ ಚಿತ್ರಿಸುವಲ್ಲಿ ಸಫಲವಾಗಿದೆ.

"ಎನಗೆ ವಿರಕ್ತಿ ಎಂಬ ಲಾಂಛನವ ಕೊಟ್ಟುದು
ಕೋಪದ ಕಾರಣವಲ್ಲದೆ ಕೃಪೆಯಲ್ಲವಯ್ಯಾ
ಅದೇನು ಕಾರಣವೆಂದೊಡೆ
ಬಟ್ಟೆಬಡಿದ ಕಳ್ಳಬಂಟನ ಭೂಪಾಲರು ದೇಹವನಿಕ್ಕಿ ಹಿಡಿತರಿಸಿ
ನಾಳೆ ಶೂಲಕ್ಕೆ ತೆಗೆಸುವರೆ ಇಂದು ಕಳ್ಳಬಂಟಂಗೆ
ಹೂವಿನ ದಂಡೆಯು ಕೊರಳುದುಂಡೆಯು ಉರದೊಳಗೆ ಅಡ್ಡಹಾಕಿ
ಹಾಲು ತುಪ್ಪ ಹಣ್ಣುಗಳಂ ಉಣಕೊಟ್ಟು ಅಡಕೆಲೆಯಂ
ಮೇಲೆಕೊಟ್ಟು
ವೀರವೃಂದದ ಹಲಗೆ ಕಹಳೆಯಂ ಅವನ ಮುಂದೆ
ಸಂಭ್ರಮಿಸುವ ಬರಿಯುಪಚಾರದಂತೆ
ನಾನು ಮಾಡಿದ ಸರ್ವದ್ರೋಹಕೆ ನಿನ್ನ ಮನನೊಂದು
ಎನ್ನಂ ಎಕ್ಕಲ ನರಕಕ್ಕೆ ನೂಂಕುವುದಕ್ಕೋಸ್ಕರ ಕೊಟ್ಟೆ
ಸಟೆಯ ಉಪಚಾರ ಲಾಂಛನಕ್ಕಲ್ಲದೆ ದಿಟದೊಲವಲ್ಲವಯ್ಯಾ"
(ಘ. ೩-೪)

ನಿಜವೈರಾಗ್ಯವನ್ನು ಕುದುರಿಸುವ ಮೊದಲು ಈ ವಿರಕ್ತಿ ಎಂಬ ಲಾಂಛನವನ್ನೇಕೆ ಕೊಟ್ಟೆ ? ಇದು ಎಂಥ ಶಿಕ್ಷೆ ಎಷ್ಟು ಅವಮಾನ ! ಸಾಧನೆಯ ಮಾರ್ಗದಲ್ಲಿ ಘನಲಿಂಗಿದೇವನು ಅನುಭವಿಸಿದ ಅನುಭವವೇ ಇಲ್ಲಿ ವಚನವಾಗಿ ಮೂಡಿ ಬಂದಿದೆ. ಭಾವಕ್ಕೆ ತಕ್ಕಂಥ ಭಾಷೆಯನ್ನು ಬಳಸಿಕೊಳ್ಳುವಲ್ಲಿ ಕವಿಯ ಸಾಮರ್ಥ್ಯ ಕಂಡು ಬರುತ್ತದೆ. ಈ ಭಾಷೆಯಲ್ಲಿ ರೂಪಕವಾಗಿ ಆ ರೂಪಕ ಪ್ರತಿಮೆಯಾಗಿ ಪ್ರಕೃತ ಭಾವವನ್ನು ದೀಪ್ತಗೊಳಿಸುವಲ್ಲಿ ಯಶಸ್ವಿಯಾಗಿದೆ.

"ಏನೆಂಬುವೆಯನಯ್ಯಾ ಮತಿಗೆಟ್ಟು ಮಾನವ ಲೋಕಕ್ಕೆ ಬಂದೆ
ಬಂದ ಬರವಿನಲ್ಲಿಯೇ ಭವವೆಂಬ ಭೂಪತಿ ಎನ್ನ ಸೆರೆಹಿಡಿದು
ಕಾಲಕಾಮರ ವಶಕ್ಕೆ ಕೊಟ್ಟನಯ್ಯಾ
ಕಾಲಂಗೆ ಕಾಯದ ದಂಡವ ತೆತ್ತುದು ಲೆಕ್ಕವಿಲ್ಲ
ಮನಸಿಜಂಗೆ ಮನವ ದಂಡವಿತ್ತುದು ಲೆಕ್ಕವಿಲ್ಲ
ಹೋದಹೆನೆಂದರೆ ಒಳಕಾವಲವರು ಹೊರಕಾವಲವರು
ಹೋಗಲೀಸರು
ನನ್ನ ಸೆರೆಯಲ್ಲಿ ನಾನು ಬಿಡಿಸಿಕೊಂಡು ಹೊದಹೆನೆಂದರೆ
ನಾನು ದರಿದ್ರನಯ್ಯಾ, ಎನ್ನ ಸೆರೆಯ ಬಿಡಿಸಿಕೊಳ್ಳಿರಯ್ಯಾ
ಬಸವಾದಿ ಪ್ರಮಥರೇ ನಿಮ್ಮ ಸೆರಗೊಡ್ಡಿ ಬೇಡಿಕೊಂಬೆನಯ್ಯಾ !"
(ಘ. ೪-೭)

ಭಾವಾಭಿವ್ಯಕ್ತಿಗಾಗಿ ರೂಪಕವನ್ನು ಶಕ್ತಿಶಾಲಿಯಾದ ಮಾಧ್ಯಮವನ್ನಾಗಿ ಉಪಯೋಗಿಸಿಕೊಳ್ಳುವಲ್ಲಿ ಘನಲಿಂಗಿದೇವನು ಸಮರ್ಥನೆನೆಸಿದ್ದಾನೆ. ಭವಬಂಧನದಲ್ಲಿ ತೊಳಲಾಡುವಂಥ ಜೀವದ ಅಸಹಾಯಕತೆಯನ್ನು ಕರುಳು ತಟ್ಟುವಂತೆ ಚಿತ್ರಿಸುವಲ್ಲಿ ಸಮರ್ಥವಾದ ಮೇಲಣ ರೂಪಕದ ಔಚಿತ್ಯವನ್ನು ಅವಲೋಕಿಸಬೇಕು.

**"ಆನೆ ಮದವೆದ್ದು ಸೋಮವೀಥಿಯ ಸೂರೆಮಾಡಿತೆಂದು**
**ಆಡು ಮದವೆದ್ದು ಬೇಡಗೇರಿಗೆ ಹೋಗಿ ಕೊರಳ ಮುರಿಸಿಕೊಂಬಂತೆ**
**ಅಂದಿನ ಕಾಲದ ಹನುಮ ಲಂಕೆಯ ದಾಂಟಿದನೆಂದು**
**ಇಂದಿನ ಕಾಲದ ಕಪಿ ಹಳ್ಳವ ದಾಂಟಿದಂತೆ !**
**ಬಲಮುರಿಯ ಶಂಖ ಭುಗಿಲು ಭುಗಿಲೆಂದು ಝೇಂಕರಿಸಿತೆಂದು**
**ಕೆರೆಯೊಣಗಣ ಗುಳ್ಳೆ ಕೀಚು ಕೀಚು ಎಂಬಂತೆ !**
**ತಮ್ಮರವ ತಾವರಿಯದೆ ಬಾಳುವ ಕಾಲದಲ್ಲಿ**
**ಮರಣದ ಮದ್ದುಕೊಂಬ ಈ ಖೂಳ ಮಾನವರ**
**ಎನಗೊಮ್ಮೆ ತೋರದಿರಯ್ಯಾ ಘನಲಿಂಗಿಯ ಮೋಹದ**
**ಚೆನ್ನಮಲ್ಲಿಕಾರ್ಜುನ"**
**(ಘ ೨೪-೩೭)**

ಮೇಲಾದ ಮಹಿಮರಲ್ಲಿ ಮತ್ಸರಿಸಿ ಅವರೊಡನೆ ಸೆಣಸುವದೆಂದರೆ ಸೆಣಸುವಂಥ ಅಲ್ಪ ಮತಿಗಳಿಗೇ ಹಾನಿಯಾಗದಿರದು. ಹಾಗೆ ಮಾಡುವುದು ಒಂದೆ, ಮರಣದ ಮದ್ದುಕೊಂಬುವದು ಒಂದೆ ! ಈ ಅನುಭವವನ್ನು ಮನದಟ್ಟು ಮಾಡಿಕೊಡುವಲ್ಲಿ ಮೇಲಿನ ಲೋಕಾನುಭವದ ದೃಷ್ಟಾಂತಗಳನ್ನು ಬಳಸಿಕೊಂಡಿರುವ ರೀತಿ ಕವಿಯ ಕೌಶಲವನ್ನು ತೋರಿಸುತ್ತದೆ.

**"ತಾಯಿಯ ಗರ್ಭದಲ್ಲಿ ಶಿಶುವು ಇಕ್ಕಿದ ಕುಕ್ಕುಟಾಸನದ ತೆಗೆಯದು**
**ಶೀತ ಉಷ್ಣವೆಂದೆನ್ನದು, ಉಪಾಧಿ ಎಂದು ನುಡಿಯದು**
**ಮುಚ್ಚಿದ ಕಣ್ಣು ಮುಗಿದ ಕೈಯಾಗಿ ಉಗ್ರತಪಸ್ಸಿನಲ್ಲಿರುವುದು**
**ಅದಕ್ಕೆ ಮುಕ್ತಿಯಾದರೆ ಇವಳಿಗೆ ಮುಕ್ತಿಯುಂಟು**
**ಬರಿಯ ವೈರಾಗ್ಯ ಭವಕ್ಕೆ ಬೀಜವಾಯಿತ್ತು !"**
**(ಘ. ೯-೩೦)**

ತಾಯ ಗರ್ಭದಲ್ಲಿಯ ಶಿಶುವಿನ ಪ್ರತಿಮೆಯನ್ನೊಡ್ಡಿ ಬರಿಯ ವೈರಾಗ್ಯವನ್ನು ವಿಡಂಬಿಸುವ ರೀತಿ ಮೆಚ್ಚುವಂತಹುದು. ರಸವತ್ತಾದ ಪ್ರತಿಮೆಗಳನ್ನು ಸಹಜವಾಗಿ ರೂಪಿಸಿ, ಉದ್ದಿಷ್ಟ ವಿಷಯವನ್ನು ಅರ್ಥಗರ್ಭಿತವಾಗಿ ಚಿತ್ರಿಸುವ ಕಲಾವಂತಿಕೆ ಸಮರ್ಥ ಕವಿಗಳ ಲಕ್ಷಣವಾಗಿದೆ. ಇಂಥ ಪ್ರತಿಮೆಗಳನ್ನು ಹೆಣೆಯುವಲ್ಲಿ ಬಸವಣ್ಣನ

ಲೇಖನಿಗಿದ್ದ ಶಕ್ತಿ ಅಗಾಧವಾದುದು. 'ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ' (೧೧೫) ಮತ್ತು 'ಕೆಸರಲ್ಲಿ ಬಿದ್ದ ಬಡಪಶುವಿನಂತೆ(೫೨) –ಮೊದಲಾದ ಬಸವಣ್ಣನ ವಚನಗಳು ಈ ವಿಷಯದಲ್ಲಿ ಗಮನಾರ್ಹವಾಗಿವೆ, ಘನಲಿಂಗಿದೇವನೂ ಅಂಥ ಶಕ್ತಿಯನ್ನು ಪಡೆದುಕೊಂಡಿದ್ದಾನೆ.

ಯಾವುದೇ ವಿಷಯವಿರಲಿ, ಈತನ ವಚನಗಳಲ್ಲಿ ಭಾವ ಮೈದುಂಬಿಕೊಂಡು ಬಂದಿರುವದನ್ನು ನೋಡಿದರೆ ಈತನು ಭಾಷೆಯ ಮೇಲೆ ಪ್ರಭುತ್ವ ಪಡೆದಿರುವದನ್ನು ಕಾಣುತ್ತೇವೆ. ದೃಷ್ಟಾಂತ, ನಾಣ್ಣುಡಿ, ಶಬ್ದಾಲಂಕಾರ, ಅರ್ಥಾಲಂಕಾರಗಳು ಹೂವಿನೆಡೆಗೆ ಹಾತೊರೆದು ಬರುವ ದುಂಬಿಗಳಂತೆ ಈತನ ವಚನಗಳಲ್ಲಿ ಮಾಲೆ ಮಾಲೆಯಾಗಿ ಬರುತ್ತವೆ. ಇಂಥ ಶಬ್ದ ಶಿಲ್ಪದಲ್ಲಿಯೆ ಈತನ ವಚನೋಕ್ತಿಯ ಜೀವಾಳ ಅಡಕವಾಗಿದೆ. ಶಬ್ದ ಬರಿ ಶಬ್ದವಾಗಿ ನಿಂತಲ್ಲಿ ಕಾವ್ಯಾಂಕುರವಾಗದು. ಶಬ್ದ ನಿಶಬ್ದಗೊಂಡಾಗ ಅರ್ಥ ಗೌರವವರಳಿ ಭಾವಸೌರಭ ಸೂಸಿ, ಕಾವ್ಯ ಶೋಭೆ ಮನತಣಿಸಬಲ್ಲದು. ಅಂಥ ಭಾಷಾ ಪ್ರಭುತ್ವ, ಅದನ್ನು ಉಚಿತವಾಗಿ ಬಳಸಿಕೊಳ್ಳುವ ಕವಿಕೌಶಲ ಎರಡರ ಮೇಳದಲ್ಲಿ ಈತನ ವಚನ ಬಹುತರವಾಗಿ ಕಾವ್ಯ ತೇಜಸ್ಸನ್ನು ಪಡೆದುದುಂಟು.

ಲಿಂಗ ಪತಿಯನ್ನಾಗಿ ಮಾಡಿಕೊಂಡು, ಶರಣ ಸತಿಯಾಗಿ ನಿಂದು, ಓಲೈಸಿ ಓಲಾಡುವದೊಂದು ಶರಣಭಕ್ತಿಯ ರೀತಿಯಾಗಿದೆ. ಈ ತೆರೆದ ಭಕ್ತಿಯಲ್ಲಿ ಅವಿನಾ ಭಾವವಿದೆ, ನಿಷ್ಕಾಮ ನಿರ್ಮಲ ಪ್ರೀತಿಯಿದೆ, ಭಕ್ತಿಯಲ್ಲಿ ಶೃಂಗಾರರಸ ಮೇಳಗೊಂಡು ಮೂಡಿಬಂದ ಬಗೆಯ ವಚನಗಳು ಹೊಸ ಜೀವಕಳೆಯಿಂದ ಕಂಗೊಳಿಸುತ್ತವೆ. ಅಲೌಕಿಕ ರಸಾನಂದವನ್ನುಂಟು ಮಾಡುತ್ತವೆ. ಘನಲಿಂಗಿದೇವನು ಈ ಬಗೆಯ ಹಲವು ವಚನಗಳನ್ನು ರಚಿಸಿದ್ದಾನೆ; ಅಷ್ಟೇಯಲ್ಲ ಇಂಥ ವಚನಗಳಲ್ಲಿಯೇ ಈತನ ಕವಿತ್ವ ಶಕ್ತಿಯ ವಿಶೇಷತೆಯನ್ನು ಕಾಣಬಹುದಾಗಿದೆ. ಬಸವಾದಿ ವಚನಕಾರರು ರಚಿಸಿದ ಇಂಥ ವಚನಗಳ ಮೋಡಿಗೆ ಒಳಗಾಗದೆ, ಈತನ ಇಂಥ ವಚನಗಳು ತಮ್ಮದೇ ಆದ ವಿಶಿಷ್ಟ ಒಪ್ಪ ಓರಣದಿಂದ ಮನೋಜ್ಞವೆನಿಸುತ್ತವೆ. ತೌಲನಿಕವಾಗಿ ಇಂಥ ಕೆಲವು ವಚನಗಳನ್ನು ಪರಿಶೀಲಿಸೋಣ :

**ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ**
**ನಮ್ಮನಲ್ಲ ಸುಳಿಯಲಿಲ್ಲ, ಸುಳಿದು ಸಿಂಗಾರವ ಮಾಡಲಿಲ್ಲ**
**ಕೂಡಲ ಸಂಗಮದೇವ ತನ್ನೊಳಗೆ ಬೈಚಿಟ್ಟನಾಗಿ**

**(ಬ. ವ. ೩೪೬-೮೪೯)**

ಪಲ್ಲವಿಯಂಥ ಮೊದಲ ನುಡಿಯಲ್ಲಿ ಲೌಕಿಕ ಗಂಡರ ಪರಿಯನ್ನು ಹೇಳ ಲಾರದಂತೆ ಹೇಳಿ, ಎರಡನೆಯ ಚರಣದಲ್ಲಿ ಅಲೌಕಿಕ ಗಂಡನ ಲೋಕಕ್ಕೆ ಹೊರತಾದ ವಿಲಕ್ಷಣವೆನಿಸುವ ರೀತಿಯನ್ನು ತಿಳುಹಿ, ಕಡೆಯ ಚರಣದಲ್ಲಿ ತನ್ನೊಳಗೇ ಬೈಚಿಟ್ಟು

ಕೊಳ್ಳುವಂಥ ಅನ್ಯೋನ್ಯ ಪ್ರೀತಿಯಲ್ಲಿಯ ಸುಖಸಾಮರಸ್ಯದ ಭವ್ಯತೆ ದಿವ್ಯತೆಯನ್ನು ತೋರಿಸಿದ ರೀತಿ ಕಲಾತ್ಮಕವಾಗಿದೆ.

**ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿದೆ**
**ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ**
**ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು**
**(ಮ. ಅ. ೧೦೮-೨೫೦)**

ಇಲ್ಲಿ ಅನುಭಾವ ಕಾವ್ಯವಾಗಿ ಮೂಡಿ, ಆ ಕಾವ್ಯದ ಎರಕದಲ್ಲಿ ಮೂಡಿನಿಂತ ಕುರುಹಿಲ್ಲದ ಪತಿಯ ಚೆಲುವಿಗೆ ಮರುಳಾಗದವರಾರು ? ಮೇಲಿನ ಎರಡೂ ವಚನಗಳಲ್ಲಿ ಪ್ರಾಸಾನುಪ್ರಾಸದ ನಾದ ಮಾಧುರ್ಯದಲ್ಲಿ ತೇಲಿಬರುವ ಭಾವದ ಬೆಡಗನ್ನು ನೋಡಿ ತಣಿಯಬೇಕು. ಘನಲಿಂಗಿದೇವನ ಇಂಥ ಕೆಲವು ವಚನಗಳನ್ನು ನೋಡಬಹುದು.

**ಅರ್ಪಿತವಲ್ಲದೆ ಅನರ್ಪಿತವ ಪರಿಮಳಿಸೆನೆಂಬ**
**ಮೌಕ್ತಿಕದ ಕಟ್ಟಾಣಿಯ ಮೂಗುತಿಯನಿಕ್ಕು,**
**ಸುಶಬ್ದವಲ್ಲದೆ ಅಪಶಬ್ದವ ಕೇಳೆನೆಂಬ**
**ರತ್ನದ ಕರ್ಣಾಭರಣಂಗಳಂ ತೊಡಿಸು**
**ಲಿಂಗಾಣತಿಯಿಂದ ಬಂದುದಲ್ಲದೆ ಅಂಗಗತಿಯಿಂದ ಬಂದುದಂ**
**ಮುಟ್ಟೆನೆಂಬ ರತ್ನದ ಕಂಕಣವಂ ಕಟ್ಟು,**
**ಪ್ರಸಾದವಲ್ಲದೆ ಭಿನ್ನರುಚಿಯ ನೆನೆಯೆನೆಂಬ**
**ತಾಂಬೂಲವನಿತ್ತು ಸಿಂಗರಂಗೆಯ್ಯಯ್ಯಾ,**
**ನಿನ್ನ ಕರುಣ ಪ್ರಸಾದವೆಂಬ ಚಪ್ಪರದಲ್ಲಿ**
**ಪ್ರಮಥಗಣಂಗಳ ಮಧ್ಯದಲ್ಲಿ ಎನ್ನ ಮದುವೆಯಾಗಯ್ಯಾ**
**ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ (ಘ. ೯-೧೨)**

ಇಲ್ಲಿ ಶರಣವೆಣ್ಣು ಬಯಸಿ ಬೇಡುವ ಸಿಂಗಾರವನ್ನು ಮತ್ತು ರೂಪಕ ಮಾಲೆಯಲ್ಲಿ ಹೆಣೆದ ಕಲಾಕುಸುರಿಯನ್ನು ನೋಡಬೇಕು. ಕೈಹಿಡಿದ ಒಡೆಯನನ್ನೇ ಲಗ್ನದ ಮುನ್ನ ನೇರವಾಗಿ ಕೇಳಿಕೊಳ್ಳುವ ಪರಿ ಹೃದ್ಯವಾಗಿದೆ,

**ಪುಷ್ಪ ಪರಿಮಳದಂತೆ ನಾನು ನೀನು ಭಯವಿಲ್ಲದಂತೆ ಕೂಡೆನ್ನ ಪ್ರಾಣೇಶನೆ !**
**ಕೂಡದಿರ್ದೊಡೆ ಗಲ್ಲವ ಪಿಡಿ....ಆಲಿಂಗಿಸದಿರ್ದೊಡೆ ಕೈವಿಡಿ**
**ಕೈವಿಡಿಯದಿರ್ದೊಡೆ ಮಾತಾಡು, ಮಾತಾಡದಿರ್ದೊಡೆ ನೋಡು**
**ನೋಡದಿರ್ದೊಡೆ ಬಾ, ಬಾರದಿರ್ದೊಡೆ**

**ಪ್ರಮಥಗಣಂಗಳೊಡನೆ ಎನ್ನವಳೆಂದು ನುಡಿ**
**ನುಡಿಯದಿರ್ದೊಡೆ ನಿನ್ನ ಮನದಲ್ಲಿ ನನ್ನವಳೆಂದು ಭಾವಿಸು**
**(ಘ. ೧೦-೧೫)**

ಶರಣಸತಿಯ ದೀನಭಾವದ ನಿವೇದನೆ, ಅಭಿವ್ಯಕ್ತಗೊಂಡ ರೀತಿ ಅಂತಃಕರಣವನ್ನೇ ಸೂರೆಗೊಳ್ಳುವಂತಿದೆ, ಇದೇ ವಚನ ಮುಂದುವರಿದಿದ್ದು ಅದು ಹೀಗಿದೆ :

**ನಿನ್ನ ನೆನೆನೆನೆದು ನನ್ನ ಮನ ಬೀಗಿ ಬೆಳೆದು**
**ತಳಿರಾಗಿ ಹೂವಿಡಿಗೊಂಬುದಯ್ಯಾ !**
**ನಿನ್ನಂ ಹಾಡಿ ಹಾಡಿ ನನ್ನ ಜಿಹ್ವೆ**
**ಅಮೃತ ಸಾಗರದೊಳೋಲಾಡುತಿಪ್ಪುದಯ್ಯಾ ! (ಘ. ೧೦-೧೫)**

ಇಲ್ಲಿ ಭಕ್ತಿರಸದ ಪ್ರಸನ್ನ ಭಾವ, ಶೃಂಗಾರರಸದ ರಮಣೀಯ ಭಾವ-ಎರಡರ ಒಡನಾಟದಲ್ಲಿ ಅಲೌಕಿಕ ರಸಾನುಭವವಾಗದಿರದು.

ಮೇಲೆ ಉದಾಹರಿಸಿದ ಒಬ್ಬೊಬ್ಬರ ವಚನದಲ್ಲಿ ಸ್ಫುರಿಸುವ ಭಾವದೀಪ್ತಿ ಒಂದೊಂದು ತರಹ. ಮನದೊಳಗಾಡಿ ಮೂಡಿನಿಲ್ಲುವ ಪರಿಣಾಮ ಮಾತ್ರ ಒಂದೇ ತರಹ. ಇಂಥ ವಚನಗಳಿಂದ ದೊರೆಯುವ ರುಚಿ ಭಿನ್ನರೀತಿಯದು; ಇದೊಂದು ಸದಭಿರುಚಿ ಇಂಥ ವಚನಗಳು ಬೀಸುವ ಕಾವ್ಯ ಮೋಡಿಯೇ ಮೋಡಿ !

ಎಲ್ಲ ವಚನಕಾರರಂತೆ ಈತನು ಸಹ ಹಲವು ಬೆಡಗಿನ ವಚನಗಳನ್ನು ರಚಿಸಿದ್ದಾನೆ. ಅಂಥದೊಂದು ವಚನವಿದು :

**ಇನ್ನೇವೆ ನಿನ್ನೇವೆನೆಲೆ ತಂದೆ**
**ಹೆಣ್ಣು ಬಾಲೆಯು ಮೊರೆಯು ಕೇಳಯ್ಯಾ**
**ಮುನ್ನ ಹುಟ್ಟಿದ ಒಂಬತ್ತು ಮಕ್ಕಳ ನಗೆನುಡಿಯ ಕೇಳಲಾರೆ**
**ಮನೆಯ ಗಂಡನ ಬೆಡಗು ಬಿನ್ನಾಣವ ನೋಡಲಾರೆ**
**ನನ್ನ ಸಿರಿಯಲ್ಲಿ ನಾನು ಓಲಾಡಲಾರೆ !**
**ಎನಗೊಂದು ಮಗುವ ಕೊಡಯ್ಯ ಗುರುವೆ,**
**ಆ ಮಗುವಿನ ಕೈಯಿಂದ ಗಂಡನ ತಲೆಯ ಹೊಡೆಯಿಕ್ಕಿಸು**
**ಮಕ್ಕಳ ಕೊರಳನರಿಯಿಸು, ಎನ್ನ ದಂಡವ ಕೊಳಿಸು**
**ಪಟ್ಟಣಕ್ಕೆ ಹೋಗುವ ಹಾದಿ ಮೂರು ಬಟ್ಟೆ ಕೂಡಿದ ಮಧ್ಯದಲ್ಲಿ**
**ಮಣಿಹವ ಮಾಡತ್ತಿಪ್ಪ ಕೈಕಾಲಿಲ್ಲದ ಮೋಟಂಗೆ**
**ಮೆಚ್ಚಿ ಮರುಳಾದ ಪತಿವ್ರತೆಯಯ್ಯಾ ನಾನು**
**ಎನ್ನ ಕೊಂಡು ಹೋಗಿ ಅವನಿಗೆ ಮದುವೆಯ ಮಾಡಯ್ಯ**
**ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ (ಘ. ೯-೧೩)**

ಭಾವಗೀತೆಯ ಭಾವದೀಪ್ತಿ, ನವ್ಯಕಾವ್ಯದ ಅರ್ಥ ಚಮತ್ಕೃತಿ, ಅನುಭಾವ ಕಾವ್ಯದ ಆಧ್ಯಾತ್ಮಿಕ ಧ್ವನಿ ಮುಪ್ಪುರಿಯಿಂದ ಕೂಡಿದ ಈ ವಚನ ಈತನಲ್ಲಿಯ ಪ್ರತಿಭೆ, ಪಾಂಡಿತ್ಯ. ಅನುಭಾವಗಳಿಗೆ ಸಾಕ್ಷಿಯಾಗಿದೆ. 'ಮನೆಯ ಗಂಡ' ಅಹಂಕಾರಕ್ಕೆ 'ಮಗು' ಅರಿವಿಗೆ 'ಕೈಕಾಲಿಲ್ಲದ ಮೋಟ' ಪರಶಿವನಿಗೆ ಪ್ರತೀಕವಾಗಿ ಬಂದು ಇಡಿಯ ವಚನಕ್ಕೊಂದು ಆಧ್ಯಾತ್ಮಿಕ ಅರ್ಥಗೌರವ ಪ್ರಾಪ್ತವಾಗಿದೆ. 'ನನ್ನ ಸಿರಿಯಲ್ಲಿ ನಾನು ಓಲಾಡಲಾರೆ'– ಈ ನುಡಿಯಲ್ಲಿ ಮಿಡಿವ ಅಸಹಾಯಕತೆಯನ್ನು ಗಮನಿಸಬೇಕು. ಕರುಳ ತಟ್ಟಿ ಕನಿಕರ ಹುಟ್ಟಿಸುವಂಥ 'ಎನಗೊಂದು ಮಗುವ ಕೊಡಯ್ಯ ಗುರುವೆ' ಎಂಬ ನುಡಿಯನ್ನೂ ಅವಲೋಕಿಸಬೇಕು. ಸಿಕ್ಕ ಸುಖಕ್ಕೆ ಎರವಾಗಿ ನಿಂತವನು ಅಹಂಕಾರವೆಂಬ ಗಂಡ. ಅರಿವೆಂಬ ಮಗು ಹುಟ್ಟುವದು, ಅಹಂಕಾರ ಅಳಿದಾಗ. ಈ ಮುಂತಾದ ಮಾರ್ಮಿಕವಾದ ಅರ್ಥ ಹೊಳೆದಾಗ ಇಡಿಯ ವಚನದ ಬೆಡಗು ಅರಳಿ ನಿಲ್ಲುವದುಂಟು.

ಇನ್ನಿಷ್ಟು ಈತನ ಅನುಭಾವಪರ ವಚನಗಳನ್ನು ವೀಕ್ಷಿಸಿ. ಈತನಲ್ಲಿಯ ವಿಚಾರ ವೈಖರಿಯನ್ನು ನೋಡುವದು ಅಗತ್ಯವಾಗಿದೆ.

**ಕನ್ನವನಿಕ್ಕಿ ಚಿನ್ನವ ತಂದು**
**ಜಂಗಮಾರ್ಚನೆಯ ಮಾಡುವದಾವ ಸದಾಚಾರ ?**
**ಹಾದರವ ಮಾಡಿ ಹಾಗವ ತಂದು**
**ಜಂಗಮಾರ್ಚನೆಯ ಮಾಡುವದಾವ ಸಮಾಚಾರ ?**
**ಗಾಣವ ಹಾಕಿ ಮೀನು ಹಿಡಿದು ತಂದು**
**ಜಂಗಮಾರ್ಚನೆಯ ಮಾಡುವದಾವ ಸಮಾಚಾರ ?**
**ಇಂತಿವರೆಲ್ಲರು ಶಿವಯುಕ್ತವಾದ ಅನಾಚಾರವ ಹಿಡಿದು ಬಿಡದೆ**
**ಸದಾಚಾರಕ್ಕೊಳಗಾಗಿ ಮುಕ್ತಿ ಪಡೆದರು** **(ಶಿ. ೪೪–೪೦)**

ಕಡೆಯ ಒಂದೆರಡು ಚರಣಗಳಲ್ಲಿ ವಿರೋಧಾಭಾಸದಲ್ಲಿ ವ್ಯಕ್ತವಾದ ಅರ್ಥ ಸ್ವಾರಸ್ಯವನ್ನು ನೋಡಿ ತಣಿಯಬೇಕು.

**ಕುಂದಣಕ್ಕೆ ಒಪ್ಪುವ ಒರೆ–ಬಣ್ಣದ ಮಿಶ್ರವಂ**
**ಚಿನ್ನವರದ ಬಲ್ಲನಲ್ಲದೆ ಗೇಯ್ದುಂಬ ಒಕ್ಕಲಮಗನೆಂತು ಬಲ್ಲನಯ್ಯ ?**
**ವಸ್ತುವನೊಡಗೂಡುವ ಸಂಧಾನದ ನುಡಿಯಗಡಣದ**
**ಲಿಂಗಬೆಳಗ ಲಿಂಗಸಂಧಾನಿ ಬಲ್ಲನಲ್ಲದೆ**
**ಅರಿವು ಮರವೆಯನೊಳಕೊಂಡಿಪ್ಪ ವೇಷಧಾರಿಗಳೆಂತು**
**ಬಲ್ಲರಯ್ಯ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ**
**(ಶಿ. ೪೧–೩೬)**

ಲಿಂಗ ಸಂಧಾನಿ ಯಾರೆಂಬುದನ್ನು ತಿಳಿಸಲು ಬಳಸಿದ ದೃಷ್ಟಾಂತದ ಔಚಿತ್ಯ ವನ್ನಿಲ್ಲಿ ಮನಗಾಣಬೇಕು. ಸ್ವಾನುಭಾವ ಕಾವ್ಯವಾದುದಿಲ್ಲ,

**ಪುಷ್ಪವಿದ್ದಲ್ಲಿ ಪರಿಮಳವಿಪ್ಪುದು**
**ಲಿಂಗದ ಮೇಲೆ ಮನವಿಪ್ಪಲಿಯೇ ಶರಣ**
**ಆ ಶರಣ ನುಡಿವಲ್ಲಿಯೇ**
**ಪ್ರಣವದ ಬಳ್ಳಿ ಮನವ ಸುತ್ತುತ್ತಿದೆ**
**ಆ ಶರಣ ನೋಡುವಲ್ಲಿಯೇ**
**ಪಂಚವರ್ಣಂಗಳ ಸ್ವರೂಪು ಲಿಂಗಾರ್ಪಿತವಾಗುತ್ತಿದೆ**
**ಶರಣ ಕುಂಭಿಸುವಲ್ಲಿಯೇ ಓಂಕಾರ ಒಡಗೂಡುವದಯ್ಯ**
**ಶರಣ ಕೀಚಿಸುವಲ್ಲಿಯೇ ಪಂಚಾಕ್ಷರಂಗಳು ಎಡೆಯಾಡುತ್ತಿವೆ**
**ತತ್ತ್ವಸ್ವರೂಪ–ಧ್ಯಾನ–ಧಾರಣ–ಅರ್ಪಿತಾವಧಾನವನರಿದ ಶರಣಂಗೆ**
**ಗಮನಾಗಮನವೆಂಬುವ ಭಯವುಂಟೆ ? (ಶಿ. ೬೩–೫೨)**

ಶರಣನನ್ನು ಕುರಿತು ಬರೆದ ಭಾವಗೀತೆಯಂತಿದೆ ಈ ವಚನ. ಪುಷ್ಪ ಪರಿಮಳ ಅಭಿನ್ನವಾಗಿರುವಂತೆ ಅಂಗ–ಲಿಂಗ ಅಭಿನ್ನವಾಗಿರುವಲ್ಲಿಯೇ ಶರಣನಿರುತ್ತಾನೆ. ಎಂಬ ತಾತ್ಪರ್ಯ ಪ್ರಕಟವಾಗುವದಿಲ್ಲ.

ಅನುಭಾವದಿಂದ ಮಿಂಚಿ ಮೂಡಿದ ನುಡಿಯಿವು. ಸದಾಚಾರದಿಂದ ಹೊಳೆದ ಸದ್ವಿಚಾರಗಳಿವು. ತತ್ತ್ವಜ್ಞಾನಕ್ಕೊಂದು ಕಾವ್ಯದ ಒಪ್ಪ ಓರಣ ಕೊಟ್ಟ ತೊಡುಗೆ ಯಿವು. ಪ್ರಸಾದ, ಪಂಚಲಿಂಗ, ಷಟ್‌ಸ್ಥಲಸಿದ್ಧಾಂತ ಮುಂತಾದ ವಿಚಾರ ಕುರಿತು ಮಾರ್ಮಿಕವಾಗಿ ಬರೆದ ಈತನ ಇನ್ನುಳಿದ ಹಲವು ವಚನಗಳನ್ನು ಓದಿ ತಣಿಯಬೇಕು.

ಇಲ್ಲಿಯವರೆಗೆ ಘನಲಿಂಗಿದೇವನ ವಚನೋಕ್ತಿಯ ಒಂದು ಮುಖವನ್ನು ನೋಡಿದಂತಾಯಿತು. ಇನ್ನೊಂದು ಮುಖವನ್ನು ನೋಡೋಣವೀಗ : 'ಇವನ ವಚನಗಳು ದೊಡ್ಡವಿದ್ದರೂ, ಅವುಗಳ ಭಾಷೆಯು ಉಚ್ಚತರದ್ದಿರುತ್ತದೆ. ಅವನು ತನ್ನ ವಿಚಾರಗಳನ್ನು ಬಹು ಪ್ರೌಢ ರೀತಿಯಿಂದ ವಿಸ್ತರಿಸಿದ್ದಾನೆ.... ಇವನು ಮಾಡಿದ ಈ ಗ್ರಂಥಕ್ಕೆ ವಚನ ವಾಙ್ಮಯದಲ್ಲಿ ಒಂದು ಉಚ್ಚ ಸ್ಥಾನವನ್ನು ಕೊಡಬಹುದು.'[೨೦]

'ಕುನ್ನಿಗೆ ರನ್ನದ ಹಲ್ಲಣ ಹಾಕಿದಂತೆ ಹಂದಿಯ ತಂದು ಅಂದಣವನೇರಿಸಿದಂತೆ ಎನಗೊಲಿದು ಶಿವಲಾಂಛನವ ಕೊಟ್ಟ ಕಾರಣವೇನಯ್ಯಾ ಗುರುವೆ ?' — ಈ ಮುಂತಾದ ವಚನಗಳಲ್ಲಿ ಘನಲಿಂಗನ ಘನವಾದ ಭಾವಶಕ್ತಿಯಿದೆ. ಮೇಲಾದ ಕಲ್ಪನಾ ಶಕ್ತಿಯಿದೆ....ಆದರೂ ಘನಲಿಂಗಿದೇವನ ವ್ಯಕ್ತಿತ್ವದಲ್ಲಿ ಬುದ್ಧಿ–ಭಾವನೆಗಳ, ಪ್ರತಿಭೆ ಪಾಂಡಿತ್ಯಗಳ ಸಮರಸವು ಪೂರ್ಣವಾಗಿರಲಿಲ್ಲವೆಂಬುದನ್ನು ಅವನ ವಚನಗಳು

---

೨೦. ಫ. ಗು. ಹಳಕಟ್ಟಿ : ಘನಲಿಂಗನ ವಚನಗಳು, ಪು. ಪ್ರಸ್ತಾವನೆ.

ಸೂಚಿಸುತ್ತವೆ. ಈ ಯುಗದ ಸಮರ್ಥ ವಚನಕಾರರಲ್ಲಿ ಅವನೊಬ್ಬನೆಂಬುದೂ ಅವುಗಳಿಂದ ತಿಳಿಯುತ್ತದೆ'.೨೧

ಘನಲಿಂಗಿದೇವನ ಕಾವ್ಯಶಕ್ತಿಯ ಬಗೆಗೆ ಯಾರೂ ಆಕ್ಷೇಪದ ಧ್ವನಿಯೆತ್ತು ವಂತಿಲ್ಲ. ಕಲ್ಪನಾ ವಿಲಾಸ, ವರ್ಣನಾಚಾತುರ್ಯ, ಅಭಿವ್ಯಕ್ತಿಯಲ್ಲಿ ತನ್ನದೇ ಆದ ವಿಶಿಷ್ಟ ಪ್ರೌಢ ಶೈಲಿ–ಇವು ಈತನ ವಚನೋಕ್ತಿಯ ಲಕ್ಷಣಗಳಾಗಿವೆ. ಈತನು ಪ್ರತಿಭಾಸಂಪನ್ನನೂ ಹೌದು, ಪಾಂಡಿತ್ಯಪ್ರಿಯನೂ ಹೌದು. ಈತನ ಒಲವು ಮಾತ್ರ ಒಂದುಕಾಣಿ ತೂಕ ಪಾಂಡಿತ್ಯದತ್ತ ಬಾಗಿದಂತೆ ಅನಿಸುತ್ತದೆ. ಈತನ ಕೆಲವೊಂದು ವಚನಗಳ ಸುದೀರ್ಘವಾದ ವಿವರಣೆಯಲ್ಲಿ ಈತನ ಪಾಂಡಿತ್ಯಪೂರ್ಣತೆ ಯನ್ನು ಕಾಣಬಹುದು. ಒಮ್ಮೊಮ್ಮೆ ಕೆಲವೊಂದು ವಚನದ ಪ್ರಾರಂಭದಲ್ಲಿ ವ್ಯಕ್ತವಾದ ವಿಚಾರಕ್ಕೂ ಮುಕ್ತಾಯದಲ್ಲಿಯ ವಿಚಾರಕ್ಕೂ ಒಂದು ಹೊಂದಾಣಿಕೆ ಕಂಡು ಬರುವದಿಲ್ಲ. ಹೊಂದಾಣಿಕೆ ಇರಬಹುದಾದರೂ ಅಲ್ಲಿ ವ್ಯಕ್ತವಾದ ವಿಷಯ ಸಂಬಂಧವರಿತುಕೊಳ್ಳುವದು ಕ್ಲಿಷ್ಟವೆನಿಸುತ್ತದೆ. ಈ ನಿಟ್ಟಿನಲ್ಲಿ 'ಲೋಕದ ನಚ್ಚ ಮಚ್ಚನೆ ನೀಗಿ ನಿಚ್ಚಟನಾಗಿ, ಎಂದು ಪ್ರಾರಂಭವಾಗುವ ವಚನವನ್ನು ಉದಾಹರಿಸಬಹುದು.

ಅಲ್ಲಿ ಆಧ್ಯಾತ್ಮಿಕ ವಿಷಯವನ್ನು ಅರ್ಥಗರ್ಭಿತವಾಗಿ ರಹಸ್ಯವಾಗಿ ಹೇಳಿರ ಬಹುದು. ಹೀಗೆ ೧೨, ೧೫, ೩೪, ೪೫ ಕ್ರಮಾಂಕದ ವಚನಗಳು ಅತೀ ದೀರ್ಘವಾಗಿರುವದನ್ನು ಗಮನಿಸಬೇಕು.

ಈ ರೀತಿ ವಚನರಚನಾ ತಂತ್ರದ ಕಟ್ಟುಮೀರಿ ದೀರ್ಘತೆ ತಲೆದೋರಿದಲ್ಲಿ ಅರ್ಥಸ್ವಾರಸ್ಯಕ್ಕೆ ಬಾಧೆ ಬರುವುದುಂಟು. ಬಸವಾದಿ ವಚನಕಾರರು ಷಟ್‌ಸ್ಥಲ ಸಿದ್ಧಾಂತವನ್ನು ಅತಿ ದೀರ್ಘವಲ್ಲದ ವಚನಗಳಲ್ಲಿ ಒಡಮೂಡಿಸಿ ವಚನರೂಪಕ್ಕೊಂದು ರಚನಾ ತಂತ್ರವನ್ನು (ಅಪ್ರತ್ಯಕ್ಷವಾಗಿ) ರೂಪಿಸಿಕೊಟ್ಟಿದ್ದಾರೆ. ಯಾವುದೇ ಸಾಹಿತ್ಯ ಪ್ರಕಾರವೊಂದು ವಿಶಿಷ್ಟ ರೂಪಧಾರಣ ಮಾಡುವುದು ಹೀಗೆಯೆ. ಗಟ್ಟಿಗೊಂಡ ರಚನಾ ತಂತ್ರದ ಎಲೆಕಟ್ಟನ್ನು ಮೀರಿ ಹೋಗಬಾರದೆಂದಲ್ಲ. ಹಾಗೆ ತಂತ್ರಮೀರಿ ದೀರ್ಘವಾದದ್ದು ಹೆಚ್ಚಿನ ಸತ್ವವನ್ನು ನೀಡುವಂತಾಗಿ, ಮಿಗಿಲಾದ ಆಸ್ವಾದವನ್ನು ಕೊಡುವಂತಾದರೆ ಸಾರ್ಥಕವೆನಿಸೀತು. ವಚನ ರಚನಾ ತಂತ್ರದ ಇತಿ–ಮಿತಿಯ ಚೌಕಟ್ಟು ಈತನ ವಚನಗಳಲ್ಲಿ ಇದ್ದುದಾದರೆ ಈತನ ವಚನೋಕ್ತಿಗೆ ಇನ್ನೂ ಮಿಗಿಲಾದ ಅಚ್ಚುಕಟ್ಟು ಬರಬಹುದಾಗಿತ್ತು. ಎಲ್ಲ ವಚನಗಳೂ ದೀರ್ಘವಾಗಿ ಅರ್ಥಕ್ಲಿಷ್ಟತೆಗೆ ಪಕ್ಕಾಗಿವೆ ಎಂದೇನಲ್ಲ. ಕಿರಿದರಲ್ಲಿ ಹಿರಿದರ್ಥ ತುಂಬಿಕೊಂಡು ಮಿನುಗುವ ಕಿರಿದಾದ ವಚನಗಳೂ ಈತನ ಗ್ರಂಥದಲ್ಲಿ ಇಲ್ಲದಿಲ್ಲ.

---

೨೧. ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ೧೯೭೧, ಪು. ೨೮೮–೨೮೯.

ಎತ್ತಿ ತೋರಿಸುವಂಥ ಅನುಕರಣ ಮಾತ್ರ ಘನಲಿಂಗಿದೇವನ ವಚನಗಳಲ್ಲಿ ಕಂಡು ಬರುವದಿಲ್ಲ. ತನ್ನದೇ ಆದ ಒಂದು ಪೌಢ್ರ ಶೈಲಿಯಲ್ಲಿ ಸ್ವಂತಿಕೆಯನ್ನು ಬೆಳೆಸಿ ಕೊಂಡ ಸಮರ್ಥ ವಚನಕಾರನೀತ, ಈತನ ವಿಚಾರಸರಣಿಯ ಬಗೆಗೆ ಹೇಳಬೇಕೆಂದರೆ 'ಸಕಲ ಜೀವಾತ್ಮರಿಗೆ ಲೇಸನೆ ಬಯಸುವ .......ಶರಣರೆ ಕುಲಜರು, ಎಂಬಂತಹ ವಿಶ್ವಕೌಟುಂಬಿಕ ಮನೋಧರ್ಮ ಈತನ ವಚನಗಳಲ್ಲಿ ಬಹುತರವಾಗಿ ಕಂಡು ಬರುವದಿಲ್ಲ. ಬಸವಾದಿ ವಚನಕಾರರು ಹೇಳಿದ ವಿಚಾರವನ್ನೇ ಪುನರುಕ್ತಿ ಗೊಳಿಸುವಲ್ಲಿ ಪ್ರಯೋಜನವೇನು ಎಂದು ಅಂಥ ವಿಚಾರದತ್ತ ಈತನ ಗಮನ ಹರಿದಿರಲಿಕ್ಕಿಲ್ಲ. ಆದರೆ ಷಟ್‌ಸ್ಥಲ ಸಿದ್ಧಾಂತ ಹಾಗೂ ಗಹನವಾದ ಆಧ್ಯಾತ್ಮ ವಿಷಯ ಕುರಿತು ಅನುಭಾವ ಸಂಪತ್ತಿ ಈತನ ವಚನ ಭಂಡಾರದಲ್ಲಿ ಅವಿರಳವಾಗಿ ತುಂಬಿಕೊಂಡಿದೆ. ಅಂಥ ಗಹನ ವಿಷಯ ನಿರೂಪಣೆಯಲ್ಲಿ ಲೋಕಾನುಭವದ ತೀವ್ರತೆ ಕಂಡುಬರುತ್ತದೆ. ಈತನಲ್ಲಿ ಸಿದ್ಧಾಂತ ಬರಿ ಸಿದ್ಧಾಂತ ವಾಗಿ, ಶಾಸ್ತ್ರವಾಗಿ ನಿಲ್ಲದೆ ಕಾವ್ಯವಾಗಿ ಅರಳುವಲ್ಲಿ ಲೋಕಾನುಭವವುಳ್ಳ ದೃಷ್ಟಾಂತ ಗಳ ಕೈವಾಡವನ್ನು ವೀಕ್ಷಿಸಬೇಕು. ಕ್ಲಿಷ್ಟತೆಯೊಂದನ್ನು ಬಿಟ್ಟರೆ ಈತನ ವಚನಗಳು ಬುದ್ಧಿಗೊಂದು ಬೆಳಕನ್ನೂ, ರಸಿಕರ ಮನಸ್ಸಿಗೊಂದು ಕಾವ್ಯ ರಸರಂಜನೆಯನ್ನೂ ನೀಡುವಲ್ಲಿ ಸಂದೇಹವಿಲ್ಲ. ಒಟ್ಟಾರೆ ಘನಲಿಂಗಿದೇವನು ಶಬ್ದ ಶಿಲ್ಪಿ ಚತುರ ನಾಣ್ನುಡಿಯ ಅಕ್ಕರಿಗ, ಮಿಗಿಲಾದ ಪಂಡಿತ, ಪ್ರತಿಭಾವಂತ ಕವಿ, ಗಟ್ಟಿಗೊಂಡ ಅನುಭಾವಿ. ವಚನವಾಙ್ಮಯದಲ್ಲಿ ಘನಲಿಂಗಿದೇವನಿಗೊಂದು ವಿಶಿಷ್ಟ ಸ್ಥಾನವಿದ್ದೇ ಇದೆ.

ಹೀಗೆ ಈ ವಚನಕಾರರಿಬ್ಬರು ಈ ಕಾಲದ ವಚನ ಸಾಹಿತ್ಯಕ್ಕೆ ತಮ್ಮದೇ ಆದ ರೀತಿಯಲ್ಲಿ ಕೊಡುಗೆಯನ್ನು ಸಲ್ಲಿಸಿದ್ದಾರೆ. ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳಲ್ಲಿ ಸರಳತೆ, ನಿರರ್ಗಳತೆ ಪ್ರಧಾನ ಗುಣವಾಗಿದ್ದರೆ, ಘನಲಿಂಗಿದೇವನ ಕೃತಿಯಲ್ಲಿ ಪ್ರೌಢಿಮೆ, ಪಾಂಡಿತ್ಯ ಪ್ರಮುಖ ಗುಣವಾಗಿವೆ. ಅವನಲ್ಲಿ ಕಾವ್ಯದೋಜಸ್ಸು ಹಿತಮಿತವಾಗಿ ಬಂದರೆ, ಇವನಲ್ಲಿ ಪಾಂಡಿತ್ಯದ ಮುದ್ರೆಯಲ್ಲಿ ಮೂಡಿ ವರ್ಣರಂಜಿತ ವಾಗಿ ಬರುತ್ತದೆ. ಅನುಭಾವ ಸಾಹಿತ್ಯಕ್ಕೆ ವಿಶೇಷವಾಗಿ ವಚನ ವಾಙ್ಮಯಕ್ಕೆ ಇವರಿಬ್ಬರು ನೀಡಿದ ಕೊಡುಗೆಯಿಂದಾಗಿ ಸ್ಮರಣೀಯರು !

**ವಿಶೇಷ ಸೂಚನೆ :**

ಸ್ವ. ಸಿ.—ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೭೨,
ಸಂಪಾದಕರು : ಚಂದ್ರಶೇಖರ ಶಾಸ್ತ್ರಿಗಳು

ಘ —ಘನಲಿಂಗಿದೇವರ ವಚನ, ೧೯೫೦,
ಸಂಪಾದಕರು : ಬಿ. ಶಿವಮೂರ್ತಿಶಾಸ್ತ್ರಿ

ಶಿ — ಘನಲಿಂಗಿದೇವರ ವಚನಗಳು, ೧೯೬೪,
ಸಂಪಾದಕರು : ಶಿವರಾತ್ರಿ ರಾಜೇಂದ್ರಸ್ವಾಮಿಗಳು

(ಉದ್ಧೃತ ವಚನಗಳನ್ನು ಮೇಲಿನಂತೆ ಬರೆದು, ಅದರ ಮುಂದೆ ಪುಸ್ತಕದ ಪುಟ ಸಂಖ್ಯೆ, ಆ ಮೇಲೆ ವಚನ ಸಂಖ್ಯೆ—ಹೀಗೆ ಕಾಣಿಸಲಾಗಿದೆ.)

## ಗ್ರಂಥ ಸೂಚಿ :


ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ೧೯೭೦
ವಿರೂಪಾಕ್ಷ ಪಂಡಿತ : ಚೆನ್ನಬಸವ ಪುರಾಣ, ೧೯೩೪
ಎಚ್. ಪಿ. ಮಲ್ಲೇದೇವರು (ಸಂ): ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೭೫
ಚಂದ್ರಶೇಖರ ಶಾಸ್ತ್ರಿಗಳು : ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ೧೯೭೨
ಆರ್. ನರಸಿಂಹಾಚಾರ್ : ಕವಿಚರಿತೆ ಭಾಗ ೨, ೧೯೭೩
ಎಲ್. ಬಸವರಾಜು : ವಚನಕಾರ ಸಿದ್ಧಲಿಂಗಯತಿ, ೧೯೭೨,
ತೋಂಟದ ಸಿದ್ಧಲಿಂಗಯತಿಗಳ ಜೀವನ, ಇತಿಹಾಸ ಮತ್ತು ದಂಥಕಥೆ
ಫ. ಗು. ಹಳಕಟ್ಟಿ (ಸಂ.) : ನಿರಂಜನ ವಂಶ ರತ್ನಾಕರ, ೧೯೩೨
ಆರ್. ಸಿ. ಹಿರೇಮಠ : ಷಟ್‌ಸ್ಥಲ ಪ್ರಭೆ, ೧೯೬೬
ತ. ಸು. ಶಾಮರಾಯ ಮತ್ತು ಮೇ. ರಾಜೇಶ್ವರಯ್ಯ :
ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ೧೯೬೪
ಬಿ. ಶಿವಮೂರ್ತಿಶಾಸ್ತ್ರಿ : ಘನಲಿಂಗಿದೇವರ ವಚನ, ೧೯೫೦
ಫ. ಗು. ಹಳಕಟ್ಟಿ (ಸಂ) ಘನಲಿಂಗನ ವಚನಗಳು, ಮೊದಲನೆಯ ಮುದ್ರಣ
ಶಿವರಾತ್ರಿ ರಾಜೇಂದ್ರ ಸ್ವಾಮಿಗಳು (ಸಂ) : ಘನಲಿಂಗಿದೇವರ ವಚನಗಳು, ೧೯೬೪

# ೧೦.

# ಶ್ರೀ ಕಾಡಸಿದ್ಧೇಶ್ವರ ವಚನಗಳಲ್ಲಿ ಸಾಮಾಜಿಕ ಅಧ್ಯಯನ !

---

ಜಗತ್ತು ಎಂದ ಮೇಲೆ, ಎಲ್ಲ ತರದ ಜನರು ಇರುವುದು ಸ್ವಾಭಾವಿಕ. ಎಷ್ಟು ಮನುಷ್ಯರೊ ಅಷ್ಟು ಮನಸು, ಅಷ್ಟು ರೀತಿ ನೀತಿ, ಅಷ್ಟು ಆಚಾರ ವಿಚಾರ, ಸ್ವಭಾವ ಸಂಪ್ರದಾಯ. ಇಂಥ ವಿಸಂಗತ ವೈಪರೀತ್ಯಗಳಿಂದಾಗಿ ಪರಸ್ಪರರಲ್ಲಿ ಹೊಂದಾಣಿಕೆ ಎಂಬುದು ಅಸಾಧ್ಯವಾಗುತ್ತದೆ. ಸಾಮಾಜಿಕರಲ್ಲಿ ಮತಭೇದ ಹುಟ್ಟುತ್ತದೆ.

ಇಂಥ ಅನುಭವವೆ ಕವಿಗಳ ಕಾವ್ಯಕ್ಕೆ ಆಕರವಾಗುತ್ತದೆ. ಸಂತ ಶರಣರಲ್ಲಿ ಲೋಕಕ್ಷೇಮ ಕುರಿತು ಚಿಂತನ ಪ್ರಾರಂಭವಾಗುತ್ತದೆ. ಸಾಹಿತಿಗಳಲ್ಲಿ ವಿವಿಧ ಪ್ರಕಾರದ ಸಾಹಿತ್ಯ ಹುಟ್ಟು ಹಾಕಿದರೆ, ಸಂತ ಶರಣರಲ್ಲಿ ಅನುಭವದ ಹಾಡು ಹಾಗು ವಚನಗಳು ಸೃಷ್ಟಿಯಾಗುತ್ತವೆ.

ಕಾಡಸಿದ್ಧೇಶ್ವರರ ಕಾಲದಲ್ಲಿ ಕಂದಾಚಾರ, ಡಂಭಾಚಾರ, ಅನಾಚಾರ ಮೊದಲಾದ ಸಂಪ್ರದಾಯಗಳು ಅಸ್ತಿತ್ವದಲ್ಲಿ ಇದ್ದ ಬಗೆಗೆ, ಅವರ ವಚನಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಅವರು ಯತಿಯಾಗಿದ್ದರೂ, ಜನರ ನೋವು ನಲಿವುಗಳಿಗೆ ಪ್ರೇಮ, ಕ್ಷೇಮಗಳಿಗೆ ಕುಂದು ಕೊರತೆಗಳಿಗೆ ಸ್ಪಂದಿಸುತ್ತ ಬಂದಂಥ ಹೃದಯವಂತರು. ಹಾಗೂ ನೋಯುವಲ್ಲಿ ನೋಯುತ್ತಾರೆ. ಕನಿಕರಿಸುವ ಎಡೆಯಲ್ಲಿ ಕನಿಕರಿಸುತ್ತಾರೆ, ಖಂಡಿಸುವಲ್ಲಿ ಖಂಡಿಸುತ್ತಾರೆ. ಆದರೆ, ಅವರ ನಿಲವು– ಲೌಕಿಕರಂತೆ ತಾಳ್ಮೆಗೆಟ್ಟು ಜನರನ್ನು ದ್ವೇಷಿಸುವುದಲ್ಲ, ಪರಿವರ್ತಿಸುವುದು, ಸಾತ್ವಿಕರನ್ನಾಗಿ ರೂಪಿಸುವುದು. ಅವರ ಗಮನ ಕೇವಲ ಆತ್ಮೋದ್ಧಾರವಲ್ಲ, ಲೋಕೋದ್ಧಾರ ! ಲೋಕೋದ್ಧಾರ ಮಾಡುವಲ್ಲಿಯೆ ಶಿವಯೋಗಿಯ, ಶಿವಯೋಗದ ಸಾರ್ಥಕತೆಯಿದೆ –ಎಂದು ಭಾವಿಸಿ ಹಾಗೆ ಬದುಕಿದ ಪ್ರಾಸಾದಿಕರು. ಅವರ ವಚನಗಳಲ್ಲಿ ಖಂಡನೆ, ವಿಡಂಬನೆ ಅಧಿಕವಾಗಿದ್ದರೂ, ಅದರಲ್ಲೊಂದು ಲೋಕ ಹಿತಾರ್ಥ ಉದ್ದೇಶವಿದೆ. ಅವರ ವಚನಗಳೆ ಈ ಮಾತಿಗೆ ಋಜುವಾಗಿವೆ.

**"ಹತ್ತಕ್ಕೆ ನೀಡಿ ಹನ್ನೊಂದಕ್ಕೆ ನೀಡದಾತ ಭಕ್ತನೇ ? ಅಲ್ಲಲ್ಲ**
**ಭಿಕ್ಷವ ಕೊಡುವಲ್ಲಿ ಮುಖವ ನೋಡಿ ಕೊಡುವಾತ ಭಕ್ತನೇ? ಅಲ್ಲಲ್ಲ**
**ಗಣಾರಾಧನೆಯ ಮಾಡಿದಲ್ಲಿ ಒಳಗೊಂದು ಹೊರಗೊಂದು**

ಅದೇನು ಕಾರಣವೆಂದರೆ, ಇವರು ತಾಮಸಭಕ್ತರು,
ಇಂತಪ್ಪ ತಾಮಸ ಭಕ್ತರಿಗೆ
ಶಿವನು ಒಲಿ ಒಲಿ ಎಂದರೆ ಎಂತೊಲಿಯುವನಯ್ಯಾ ?
ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬ
ಲಿಂಗ ನಿರ್ಮಾಯ ಪ್ರಭುವೆ.” (೮೬)

ಭಕ್ತಿ ಎಂಬುದು ಧಾರ್ಮಿಕ ವಿಷಯಕ್ಕೆ ಮಾತ್ರ ಅನ್ವಯಿಸುವಂಥದಲ್ಲ, ಲೌಕಿಕ ವಿಷಯದಲ್ಲಿಯೂ ಭಕ್ತಿಯ ಪಾತ್ರ ಇದ್ದೇ ಇದೆ. ಧಾರ್ಮಿಕ ವಿಷಯದಲ್ಲಿ ಭಕ್ತಿ ಎನಿಸಿದರೆ, ಲೌಕಿಕ ಸಾಮಾಜಿಕ ವಿಷಯದಲ್ಲಿ ಅದು ಸೇವೆ ಎನಿಸುತ್ತದೆ.

ಸೇವೆ ಅನ್ಯೋನ್ಯವಾಗಿ ಏಕೀಭಾವ ತಾಳುವುದೇ ಭಕ್ತಿ ! ಮಾಡುವ, ಮಾಡಿಸಿಕೊಳ್ಳುವಲ್ಲಿ ಸಂದು ಭೇದವಿಲ್ಲದಿರುವುದೇ ಭಕ್ತಿ. ಆದರೆ ಇದಕ್ಕೆ ವ್ಯತಿರಿಕ್ತವಾದುದು ಸಮಾಜದಲ್ಲಿ ಕಂಡುಬರುತ್ತದೆ. ದಾಸೋಹ ಮಾಡುವಲ್ಲಿ, ಗಣಾರಾಧನೆಯ ಮಾಡುವಲ್ಲಿ ಇವರು ನಮ್ಮವರು, ಅವರು ಅನ್ಯರು, ಇವರು ಗಣ್ಯರು, ಅವರು ಅಗಣ್ಯರು —ಹೀಗೆ ಭೇದಭಾವದಿಂದ ಭಕ್ತಿಯೆಂಬುದು ನಡೆಯುತ್ತದೆ. ಭಕ್ತಿ ತಾರತಮ್ಯವನ್ನು ಒಪ್ಪದು. ಭಕ್ತಿಸೇವೆಯನ್ನು ಸ್ವೀಕರಿಸುವ ಮಹಾನುಭಾವರೂ ಒಪ್ಪರು.

ಒಮ್ಮೆ ಅಥಣಿಯ ಶಿವಯೋಗಿಗಳ ಮಠದಲ್ಲಿ ಭಕ್ತರೊಬ್ಬರಿಂದ ಗಣಾರಾಧನೆ ನಡೆಯುತ್ತದೆ. ಶಿವಯೋಗಿಗಳ ಲಿಂಗಾರ್ಚನೆ ಮುಗಿಯುತ್ತದೆ. ಎಡೆಮಾಡಿದ ಪ್ರಸಾದ ತಟ್ಟೆಯನ್ನು ಆ ಭಕ್ತರು ತಂದಿರಿಸಿ ಸಾಷ್ಟಾಂಗ ನಮಸ್ಕಾರ ಮಾಡಿ, ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಸಮಯ ಕಳೆದರೂ, ಶಿವಯೋಗಿಗಳು ಪ್ರಸಾದಕ್ಕೆ ಕೈಹಚ್ಚಿರಲಿಲ್ಲ. ಭಕ್ತರಿಗೆ ಇದು ದಿಗಿಲುಂಟು ಮಾಡುತ್ತದೆ.

“ಏನಯ್ಯಾ ಇಲ್ಲಿಯ ಶಿವನಿಗೆ ಬದಾಮಿ ಹೋಳಿಗೆ ಅಲ್ಲಿಯ ಶಿವನಿಗೆ ಹೂರಣ ಹೋಳಿಗೆ ! ಶಿವ ಒಬ್ಬನಲ್ಲದೆ ಹಲವರುಂಟೆ ? ಭಕ್ತಿ ಭಿನ್ನವಾಗುವುದುಂಟೆ ? ಭಕ್ತಿ ಭಿನ್ನವಾದರೆ ಲಿಂಗ ಭಿನ್ನವಾದಂತೆ. ಭಿನ್ನವಾದ ಲಿಂಗ ಪೂಜೆಗೆ ಬಾರದು. ಭಿನ್ನವಾದ ಭಕ್ತಿ ಶಿವನಿಗೆ ಸಲ್ಲದು.”

ಶಿವಯೋಗಿಗಳ ಆ ಮಾತಿನಿಂದ ಆ ಭಕ್ತರ ಮೈಯೆಲ್ಲ ಬೆವರೊಡೆಯುತ್ತದೆ. ತಪ್ಪೊಪ್ಪಿಕೊಂಡು ಅವರು ಒಳಗೆ ಕುಳಿತಂಥ ಭಕ್ತರೆಲ್ಲರಿಗೆ ಹೂರಣ ಹೋಳಿಗೆಯೊಂದಿಗೆ ಬದಾಮಿ ಹೋಳಿಗೆಯನ್ನು ಸ್ವಲ್ಪ ಸ್ವಲ್ಪ ಹಂಚುತ್ತಾರೆ. ಶಿವಯೋಗಿಗಳಿಗೆ ಹೂರಣ ಹೋಳಿಗೆಯ ಎಡೆಯನ್ನೂ ತಂದು ಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ. ಪಂಕ್ತಿ ಸಾಂಗವಾಗುತ್ತದೆ.

ಕಾಡಸಿದ್ಧೇಶ್ವರರ ವಚನದ ಆಶಯವೂ, ಶಿವಯೋಗಿಗಳು ಹೇಳಿದ ಮಾತೂ– ಒಂದೇ ನಿಲವನ್ನು ಹೊಂದಿರುವಂಥವು. ಜನರಲ್ಲಿಯ ತಪ್ಪು ತಿದ್ದಿ ತಿಳಿವಳಿಕೆಯನ್ನು ನೀಡಿ, ನಿಜವಾದ ಭಕ್ತಿಯ ದಾರಿಗೆ ಹಚ್ಚುವುದು.

**"ಸೆರೆಯ ಕುಡಿದವ ಗುರು ಎಂಬೆನೆ ? ಎನ್ನೆನಯ್ಯಾ,**
**ಹೆಂಡವ ಕುಡಿದವ ಲಿಂಗಾಂಗಿ ಎಂಬೆನೆ ? ಎನ್ನೆನಯ್ಯಾ,**
**ಕಂಡವ ತಿಂದವ ಚರಲಿಂಗವೆಂಬೆನೆ ? ಎನ್ನೆನಯ್ಯಾ !"** (೯೩)

ಬುದ್ಧಿ ಹೇಳಿ ತಿದ್ದುವ ಮಹಾನುಭಾವರೇ ಅಡ್ಡದಾರಿ ಹಿಡಿದರೆ ಹೇಗೆ ? ಕಾಡಸಿದ್ಧೇಶ್ವರರು ಕೇಳುವ ಪ್ರಶ್ನೆಯಲ್ಲಿ ಹಿತಚಿಂತನವಲ್ಲದೆ, ಅವಹೇಳನವಿಲ್ಲ. ಘೋರ ತಪವ ಮಾಡಿ ಮಹೋನ್ನತಿಯನ್ನು ಸಾಧಿಸಿದ ಮಹಿಮರು–ಇಂದ್ರಿಯ ಚಪಲಕ್ಕೊಳಗಾಗಿ, ವ್ಯಸನಾಧೀನರಾಗಿ, ಸಾಧಿಸಿದ ಶಿಖರದಿಂದ ಪಾತಾಳಕ್ಕೆ ಕುಸಿಯು ತ್ತಾರೆ. ಅರಿವನ್ನು ಹೇಳುವ ಗುರು, ಅಂಗದವಗುಣ ನೀಗಿ ಲಿಂಗಾಂಗಿಯಾದವನು, ಜ್ಞಾನಮೂರ್ತಿಯೆನಿಸಿದ ಜಂಗಮ–ದುರ್ವ್ಯಸನಕ್ಕೆ ಇಳಿದರೆ, ಅವರನ್ನೂ ಗುರು, ಲಿಂಗಾಂಗಿ, ಜಂಗಮವೆಂದು ಮನ್ನಿಸುವುದು ಹೇಗೆ ? ತಿದ್ದುವಾತ ಶುದ್ಧವಾಗಿರಬೇಕು. ಬೋಧಿಸುವಾತ ಸಚ್ಚರಿತನಾಗಿರಬೇಕು. ಇದು ಕಾಡಸಿದ್ಧೇಶ್ವರರ ಆಶಯವಾಗಿದೆ.

**"ಹೊನ್ನು ಹೆಣ್ಣು ಮಣ್ಣು ಬಿಟ್ಟು ಪ್ರಪಂಚವ ಬಿಟ್ಟೆನೆಂಬಿರಿ**
**ಬಿಟ್ಟ ಪರಿಯ ಪೇಳಿರಯ್ಯಾ !**
**ಹೊನ್ನಲ್ಲವೇ ಆತ್ಮ ? ಹೆಣ್ಣಲ್ಲವೇ ಮನಸು ?**
**ಮಣ್ಣಲ್ಲವೇ ಪೃಥ್ವಿ ತತ್ತ್ವಾಂಶಭೂತವಾದ ದೇಹವು ?**
**ಇಂತಪ್ಪ ಹೊನ್ನು ಹೆಣ್ಣು ಮಣ್ಣು ಒಳಗಿಟ್ಟುಕೊಂಡು**
**ಬಾಹ್ಯದ ಹೊನ್ನು ಹೆಣ್ಣು ಮಣ್ಣನೆ ಬಿಟ್ಟರೆ**
**ಬಿಟ್ಟಂತಾಯಿತೇ ಎಲಾ ಮರುಳ ಮಾನವರಿರಾ ?"** (೧೨೨)

ಹೊನ್ನು, ಹೆಣ್ಣು, ಮಣ್ಣು –ಮನುಷ್ಯನ ಆತ್ಮೋನ್ನತಿಗೆ ಮಾರಕವೆನ್ನುತ್ತಾರೆ ವೇದಾಂತಿಗಳು ; ಮಾರಕವಲ್ಲವೆನ್ನುತ್ತಾರೆ ಶರಣರು. ಹೊನ್ನು, ಹೆಣ್ಣು, ಮಣ್ಣು –ಇವುಗಳನ್ನು ಹಾಗೂ ಇವುಗಳಿಗೆ ಹೋಲಿಸಲಾದ ಆತ್ಮ, ಮನಸ್ಸು, ದೇಹ –ಇವು ಗಳನ್ನು ಬಿಟ್ಟು ಬದುಕುವುದು ಹೇಗೆ? ಹೊನ್ನು ಅರ್ಥಾತ್ ದುಡ್ಡು ಇಲ್ಲದೆ ವ್ಯವಹಾರ ಹೇಗೆ ? ಹೆಣ್ಣು ಅರ್ಥಾತ್ ತಾಯಿಯಿಲ್ಲದೆ ಹುಟ್ಟು ಹೇಗೆ ? ನೆಲ, ಹೊಲ ಇಲ್ಲದೆ ಆಹಾರ ಬೆಳೆಯುವುದೆಲ್ಲಿ ? ಇವು ಮೂರನ್ನೂ ಮಾಯೆಯೆಂದು ಜರಿಯುವುದರಲ್ಲಿ ಮನೋನಿಗ್ರಹದ ಸೋಲುಂಟಲ್ಲದೆ ಅರಿತು ಆಡುವ ವಿಚಾರವಲ್ಲ. ಲೌಕಿಕ ಜೀವನಾರ್ಥಕ್ಕಾಗಿ ಇವುಗಳನ್ನು ಹಿತ–ಮಿತವಾಗಿ ಬಳಸಿಕೊಳ್ಳಬೇಕಲ್ಲದೆ, ಇವುಗಳ ಮೋಹದಲ್ಲಿ ಮುಳುಗಬಾರದು. ಬೆಣ್ಣೆ ಮಜ್ಜಿಗೆಯ ಮೇಲೆ ತೇಲುವಂತೆ ತೇಲ ಬೇಕಲ್ಲದೆ, ಅದರೊಳಗೆ ಮುಳುಗಿ ಕರಗಿ ಹೋಗಬಾರದು ! ಇವುಗಳನ್ನು ಒಳಗಿರಿಸಿ

ಕೊಂಡು ಮನುಷ್ಯ ಬದುಕುತ್ತಿರುವಾಗ, ಹೊರಗಣ ಹೊನ್ನು, ಹೆಣ್ಣು, ಮಣ್ಣು ಬಿಡುವುದೆಂದರೆ ವೈರಾಗ್ಯದ ಲಕ್ಷಣವಲ್ಲ, ಮನೋದೌರ್ಬಲ್ಯದ ವಿಲಕ್ಷಣವಷ್ಟೆ! ಇವುಗಳನ್ನು ಸದುಪಯೋಗಪಡಿಸಿಕೊಂಡು, ಮನುಷ್ಯನೊಳಗಿರುವ ವಿಶೇಷತೆಯನ್ನು ಎತ್ತರಿಸಿಕೊಳ್ಳಬೇಕಲ್ಲದೆ, ಇಂದ್ರಿಯ ಚಪಲಕ್ಕೊಳಗಾಗಿ ಕುಸಿಯದಂತೆ ಎಚ್ಚರ ವಹಿಸ ಬೇಕು. ಇದು ಶಿವಶರಣರ ಆಶಯವಾಗಿದೆ. ಶರಣರ ಧೋರಣೆ-ಹತ್ತಿಕ್ಕುವುದಲ್ಲ, ಪರಿವರ್ತಿಸುವುದು, ಉನ್ನತೀಕರಿಸಿಕೊಳ್ಳುವುದು!

ಅರಣ್ಯಕ್ಕೆ ಹೋಗಿ, ಅನ್ನ, ನೀರು, ಬಿಟ್ಟು, ದೇಹವನ್ನು ದಗ್ಧ ಮಾಡ ಬಹುದಲ್ಲದೆ, ಮನದ ವಾಸನೆಯನ್ನು ದಗ್ಧ ಮಾಡಬಹುದೆ? ನೀರೊಳಗಿನ ಸೂರ್ಯ ಬಿಂಬವನ್ನು ಹೊರದೆಗೆಯುವುದು ಹೇಗೆ ಸಾಧ್ಯವಿಲ್ಲವೊ, ಹಾಗೆಯೆ ಈ ಮೂರನ್ನೂ ಹೊರದೆಗೆಯುವುದಾಗಲಿ, ಬಿಡುವುದಾಗಲಿ ಸಾಧ್ಯವಿಲ್ಲ. ಇವನ್ನು ಬಿಟ್ಟು ಸಾಧಿಸ ಬೇಕೆನ್ನುವಲ್ಲಿ ಅಳುಕು ಇದೆ, ಅರುಹಿನ ಕೊರತೆ ಇದೆ. ಇವನ್ನು ಹಿಡಿದು ಸಾಧಿಸಬೇಕೆನ್ನುವಲ್ಲಿ ಅರಿವಿನ ದಾರಿಯಿದ್ದೆ, ಆತ್ಮೋನ್ನತಿಯನ್ನು ಪಡೆಯುವ ಕಲೆಯಿದೆ. ಸಾಮಾಜಿಕರಲ್ಲಿಯ ಒಂದು ಭ್ರಮೆಯನ್ನು ದೂರ ಮಾಡುವ ವಿಚಾರ ಈ ವಚನದಲ್ಲಿದೆ.

**ಲೌಕಿಕದ ಮಧ್ಯದಲಿ ಬಾಗಿಣವನಿಕ್ಕದ ಸ್ತ್ರೀಯರ**
**ಪುರುಷರು ಮೃತವಾದಡೆ, ಮರಳಿ ಬಾಗಿಣವನಿಕ್ಕಿ ವಿವಾಹವ ಮಾಡುವರು**
**ವಿವಾಹವಾದ ಸ್ತ್ರೀಯರ ಪುರುಷರು ಮೃತವಾದಡೆ**
**ಮರಳಿ ಹಳದಿಯ ಪೂಸಿ ವಿವಾಹವ ಮಾಡುವರೆ? ಮಾಡಲಾಗದು**
**ಅದರೊಳಗೊಬ್ಬ ಪತಿವ್ರತಾ ಸ್ತ್ರೀಯಳು**
**ಎನ್ನ ಪ್ರಾಣವಲ್ಲಭನು ಮೃತವಾದನೆಂದು**
**ಆ ಪುರುಷಂಗೆ ತನ್ನ ಪ್ರಾಣ ತ್ಯಾಗ ಮಾಡುವಳು**
**ಒಬ್ಬರು ಮಂಡಿ ಬೋಳಾಗಿ, ಮೈಬತ್ತಲೆಯಿರ್ಪರು**
**ಒಬ್ಬರು ರಂಡಿಯಾಗಿರ್ಪರು**
**ಒಬ್ಬರು ಮರಳಿ ಒಬ್ಬ ಪುರುಷನ ಕೈಹಿಡಿದು**
**ಪೋಗುವುದ ಕಂಡು ಬೆರಗಾದೆನಯ್ಯಾ!"**

ಕಾಡಸಿದ್ಧೇಶ್ವರರ ಕಾಲದಲ್ಲಿ ವಿವಾಹ ಪದ್ಧತಿಯ ಮೇಲೆ ಬೆಳಕು ಬೀರುವ ವಚನವಿದು. ಒಮ್ಮೆ ಒಬ್ಬ ಸತಿಯ ಕೈಹಿಡಿದ ಪತಿ ಮರಣ ಹೊಂದಿದರೆ ಮತ್ತೆ ಲಗ್ನ ಮಾಡಿ ಕೊಡುವ ಪದ್ಧತಿ ರೂಢಿಯಲ್ಲಿತ್ತು. ಆವಾಗ ಬಾಗಿಣವನ್ನು ಕೊಡುವ ಸಂಪ್ರದಾಯವೂ ಇತ್ತು. ಆದರೆ, ಹರಿಷಣವನ್ನು ಹಚ್ಚುವ ಪದ್ಧತಿಗೆ ಸಮಾಜ ಒಪ್ಪುತ್ತಿರಲಿಲ್ಲ. ಮೊದಲ ವಿವಾಹಕ್ಕೆ ಮಾತ್ರ ಹರಿಷಣ ಲೇಪಿಸುವುದು ಕಡ್ಡಾಯ ವಾಗಿತ್ತು. ಇನ್ನೂ ಕೆಲವರು ಸತಿ ಹೋಗುವವರೂ ಇದ್ದರು. ತಲೆ ಬೋಳಿಸಿ

ಕೊಂಡು ವೈರಾಗ್ಯದಲ್ಲಿ ಕಾಲಕಳೆಯುವವರೂ ಇದ್ದರು. ಈ ಯಾವ ಕಟ್ಟು ಕಟ್ಟಳೆ ಬೇಡವೆಂದು ತನಗಿಷ್ಟವಾದ ಪುರುಷನ ಬೆನ್ನು ಹೋಗುವ ಹೆಂಗಳೆಯರೂ ಇದ್ದರು. ಬಹುಶಃ ಎಲ್ಲ ಸ್ತ್ರೀಯರ ಗಮನ ಐಹಿಕ ಸುಖ-ಭೋಗದ ಕಡೆಗೆ ಇತ್ತಲ್ಲದೆ, ಪಾರಮಾರ್ಥದ ಕಡೆಗೆ ಗಮನವಿರಲಿಲ್ಲ !

ಇಷ್ಟಕ್ಕೇ ಈ ವಚನಾರ್ಥದ ಉದ್ದೇಶ ಸೀಮಿತವಲ್ಲ. ಆಧ್ಯಾತ್ಮಿಕ ಅರ್ಥವನ್ನೂ ನಿರ್ದೇಶಿಸುವುದು ಇದರ ಮೂಲ ಉದ್ದೇಶವಾಗಿದೆ. ಶಿವಶರಣರಿಗೆ 'ಶರಣಸತಿ ಲಿಂಗಪತಿ' ಭಾವ ಮಹತ್ತರವಾದುದು. ಆಕಸ್ಮಿಕವಾಗಿ ಇಷ್ಟಲಿಂಗ ಕಳೆದು ಕೊಂಡವನು ಒಳಗೆ ಪ್ರಾಣಲಿಂಗವಿರಲು, ಮತ್ತೊಂದು ಇಷ್ಟಲಿಂಗವೇಕೆ ? ಎಂದು ಲಿಂಗವಿರಹಿತನಾಗಕೂಡದು. ಒಳಗೆ ಪ್ರಾಣಲಿಂಗವಿದೆ ಎನ್ನುವುದಕ್ಕೆ ಇಷ್ಟಲಿಂಗವೆ ಖುಜು. ಇಷ್ಟಲಿಂಗ ಪ್ರಾಣಲಿಂಗದ ಪ್ರತೀಕ, ಮತ್ತೆ ಮತ್ತೆ ಇಷ್ಟಲಿಂಗ ಧರಿಸುವ ಪ್ರಮೇಯವೇಕೆಂದು ಸ್ಥಾವರಲಿಂಗ ಪೂಜಿಸುವ ಶೈವ ಸಂಪ್ರದಾಯಕ್ಕೆ ಸೇರುವುದು. ಕೈಹಿಡಿದ ಗಂಡನ ಹಿತವಚನ ಆಲಿಸುವ ಪಾಲಿಸುವ ಗೊಡವೆಯೇಕೆಂದು ಪರಪುರುಷನ ಬೆನ್ನುಹತ್ತಿದರೆ ಹೇಗೆ ? ಮತ್ತೊಂದು ಇಷ್ಟಲಿಂಗಧಾರಣವೇಕೆಂದು ಶರಣ ಧರ್ಮಕ್ಕೆ ವ್ಯತಿರಿಕ್ತವಾಗಿ ನಡೆದರೆ 'ಶರಣ ಸತಿ ಲಿಂಗ ಪತಿ' ಭಾವದ ಪಾವಿತ್ರ್ಯಕ್ಕೆ ಕುಂದು ಬರುವುದುಂಟು. ಆದ್ದರಿಂದ, ಚಂಚಲ ಮನಸು ನೇಮ ಪಾಲನೆಯ ನಿಷ್ಠೆಗೆ ವೈರಿ. ಒಂದನ್ನು ಹಿಡಿದ ಬಳಿಕ ಮತ್ತೊಂದರ ಕಡೆಗೆ ಹರಿಯಬಾರದು ಶ್ರದ್ಧೆ !

**"ವಿಭೂತಿ ರುದ್ರಾಕ್ಷಿಯ ಧರಿಸಿ**
**ಕಾಂಚನಕ್ಕೆ ಕೈ ಒಡ್ಡುವಾತ ಮಾಹೇಶ್ವರನಲ್ಲ,**
**ಕಾವಿ ಕಾಷಾಂಬರ ಹೊದ್ದು ಶಿವಲಿಂಗಧಾರಣವಾಗಿ**
**ಮೃಷ್ಟಾನ್ನಕ್ಕೆ ಮನಸೋಲುವಾತ ಮಾಹೇಶ್ವರನಲ್ಲ,**
**ಕೌಪ ಖಟ್ವಾಂಗವ ಧರಿಸಿ,**
**ಪರಸ್ತ್ರೀಯರ ಕಂಡು ಮನವೆಳಸುವಾತ ಮಾಹೇಶ್ವರನಲ್ಲ,**
**ಜಂಗಮವ ಜರಿದು ಸ್ಥಾವರ ಪೂಜಿಸುವಾತ ಮಾಹೇಶ್ವರನಲ್ಲ !"**
**(೧೩೩)**

ಮಹೇಶ್ವರ ಸ್ಥಲದ ಮುಖ್ಯ ಲಕ್ಷಣ-ನಿಷ್ಠೆ, ಷಟ್‌ಸ್ಥಲಗಳು ಆತ್ಮೋನ್ನತಿಗೆ ಏರುವ ಮೆಟ್ಟಿಲು. ಶ್ರದ್ಧೆಯಿಂದ ಭಕ್ತಸ್ಥಲದ ಹೆಜ್ಜೆ ಪ್ರಾರಂಭವಾಗಿ ನಿಷ್ಠೆಯಿಂದ ಮಹೇಶ್ವರ ಸ್ಥಲ ಮುಂದುವರಿಯುತ್ತದೆ. ನಿಷ್ಠೆಯನ್ನು ಕಾಯ್ದುಕೊಳ್ಳುವವನೇ ಮಾಹೇಶ್ವರ.

ಇತ್ತ ವಿಭೂತಿ ರುದ್ರಾಕ್ಷಿ ಧರಿಸುವುದು, ಅತ್ತ ಪರಧನಕ್ಕೆ ಆಶೆ ಮಾಡುವುದು. ಕಾವಿ ಕಾಷಾಂಬರ ಧರಿಸಿ, ಮೃಷ್ಟಾನ್ನಕ್ಕೆ ಮನಸೋಲುವುದು. ಲಂಗೋಟಿ ಧರಿಸಿ, ಪರಸ್ತ್ರೀಯರತ್ತ ಮನಸನ್ನು ಹರಿಬಿಡುವುದು — ಇವು ಒಂದಕ್ಕೊಂದು ವಿರೋಧ ಪ್ರಕ್ರಿಯೆಗಳು. ವಿಭೂತಿ, ರುದ್ರಾಕ್ಷಿ, ಕಾವಿ ಮುಂತಾದವು ವೈರಾಗ್ಯ ಸೂಚಿಸುವ

ಲಾಂಛನವಷ್ಟೆ ಅವುಗಳನ್ನು ಧರಿಸಿದವ ವಿರಾಗಿಯಾಗಲಾರ. ಮಾಹೇಶ್ವರನೆನಿಸಲಾರ. ಪರಧನ, ಪರಸ್ತ್ರೀ ಮೋಹ, ಭೋಗಲಾಲಸೆ ಇವುಗಳಿಂದ ಮುಕ್ತನಾದಲ್ಲದೆ ಭಕ್ತ ಮಾಹೇಶ್ವರನಾಗಲಾರ.

ಸಕಲ ವಿಸ್ತಾರವಾದ ಲಿಂಗವೇ ಜಂಗಮ ರೂಪದಲ್ಲಿ ಜೀವಜಗತ್ತಾಗಿ, ಜೀವ ಕುಲ ವಿಸ್ತಾರವಾದುದುಂಟು. ಯಾರನ್ನು ವೃಥಾ ಜರಿದರೂ, ಜಂಗಮವನ್ನು ಹಾಗು ಜಂಗಮದ ಮೂಲ ಲಿಂಗವನ್ನು ಜರಿದಂತೆ! ಆದ್ದರಿಂದ ಇತ್ತ ಜಂಗಮವನ್ನು ನಿಂದಿಸಿ. ಅತ್ತ ಸ್ಥಾವರವನ್ನು ಅಥವಾ ಸ್ಥಾವರ ಲಿಂಗವನ್ನು ಪೂಜಿಸಿದರೆ, ಆತ ಮಾಹೇಶ್ವರ ಸ್ಥಲಕ್ಕೆ ಅರ್ಹನಲ್ಲ !! ಕಾಡಸಿದ್ಧೇಶ್ವರರ ವಿಚಾರ ವೈಜ್ಞಾನಿಕವಾದುದೆಂಬುದನ್ನು ಗಮನಿಸಬಹುದು. ಲಾಂಛನವಾಗಲಿ ವಿಧಿವಿಧಾನವಾಗಲಿ ಧರ್ಮವೆನಿಸದು ಹಾಗು ಆತ್ಮೋನ್ನತಿಗೆ ಲಕ್ಷಣವೂ ಆಗಲಾರದು. ಆತ್ಮೋನ್ನತಿ ಆಚಾರ ಶುದ್ಧಿಯಿಂದ ಸಾಧ್ಯ!

**"ದೇವರು ದೇವರು ಎಂಬಿರಿ, ದೇವರಿಗೆ ಪ್ರಳಯವುಂಟೆ ?**
**ದೇವರು ಪ್ರಳಯವಾದಡೆ, ಜಗವು ಉಳಿಯಬಲ್ಲುದೆ ?**
**ಎಲಾ ಮರುಳಗಳಿರಾ, ಕಲ್ಲು ದೇವರೆಂಬಿರಿ**
**ಕಲ್ಲು ದೇವರಾದಡೆ, ವಜ್ರಾಯುಧದಿಂದ ಪ್ರಳಯವಾಗದೆ ?**
**ಕಟ್ಟಿಗೆ ದೇವರೆಂದಡೆ, ಅಗ್ನಿಯಿಂದ ಪ್ರಳಯವಾಗದೆ ?**
**ಮಣ್ಣು ದೇವರಾದಡೆ, ಜಲದಿಂದ ಪ್ರಳಯವಾಗದೆ ?**
**ನೀರು ದೇವರಾದಡೆ, ಅಗ್ನಿಯಿಂದ ಅರತು ಹೋಗದೆ ?**
**ಅಗ್ನಿ ದೇವರಾದಡೆ, ಜಲದಿಂದ ಪ್ರಳಯವಾಗದೆ ?** (೧೩೮)

ಕಲ್ಲು, ಕಟ್ಟಿಗೆ, ಮಣ್ಣು, ನೀರು, ಅಗ್ನಿ–ಮೊದಲಾದವುಗಳನ್ನು ದೇವರೆಂದು ಜನರು ಪೂಜಿಸುವ ಸಂಪ್ರದಾಯವಿದೆ. ದೇವರಿಗೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಇವುಗಳಿಗೆ ಹುಟ್ಟೂ ಉಂಟು, ಸಾವೂ ಉಂಟು. ಅವಿನಾಶಿ ದೇವರೇ ಇವುಗಳ ಸೃಷ್ಟಿಕರ್ತ, ಅವಿನಾಶಿ ದೇವರೆಲ್ಲಿ ? ವಿನಾಶ ಹೊಂದುವ ಕಲ್ಲು, ಕಟ್ಟಿಗೆ ಮೊದಲಾದವು ಗಳೆಲ್ಲಿ ? ಇವುಗಳಿಗೆ ದೇವರ ಪಟ್ಟ ಕಟ್ಟಿದ್ದು – ಮನುಷ್ಯನ ಅಜ್ಞಾನವಲ್ಲದೆ, ಬುದ್ಧಿವಂತಿಕೆಯಲ್ಲ.

ಅರಿವಿನ ಜನ್ಮಕ್ಕೆ ಬಂದ ಮನುಷ್ಯ – ಅರಿವಿನ ಮೂರ್ತಿ ಪರಮಾತ್ಮನನ್ನು ಅರಿವಿನಿಂದ ಪೂಜಿಸಬೇಕಲ್ಲದೆ, ಅರಿವಿಲ್ಲದ ವಸ್ತುಗಳನ್ನು ದೇವರೆಂದು ವೃಥಾ ಪೂಜಿಸ ಬಾರದು. ಇವುಗಳನ್ನು ದೇವರೆಂದು ಪೂಜಿಸುವಲ್ಲಿ–ಮನುಷ್ಯನ ಮೂಢ ನಂಬಿಕೆಯೂ ಇವುಗಳಿಂದ ತನಗೆ ಕೇಡಾಗಬಾರದೆಂಬ ಭಯವೂ ಉಂಟು !

**"ವಿಭೂತಿಯ ಪೂಸುವ ಹಣೆಗೆ ಭಂಡಾರವ ಪೂಸುವವರು**
**ಹೊಲಗೇರಿಯಲ್ಲಿ ಹಣಿ ಚಿಕ್ಕ ಹಂದಿಯಾಗಿ ಪುಟ್ಟುವವರು**

**ರುದ್ರಾಕ್ಷಿಯು ಧರಿಸುವ ತೋಳು ಕಂಠ ಮಸ್ತಕದಲ್ಲಿ**
**ಯಂತ್ರ ಮಾಡಿಸಿ ತಾಯಿತದಲ್ಲಿ ಕಟ್ಟುವವರು**
**ಸುಡುಗಾಡ ಸಿದ್ಧಯ್ಯರಾಗಿ ಪುಟ್ಟುವರು**
**ಶಿವಲಿಂಗವ ಧರಿಸುವ ಕೊರಳಿಗೆ ಬೆಳ್ಳಿ ಬಂಗಾರದ ತಾಯಿತದಲ್ಲಿ**
**ವೈದ್ಯರ ಗಿಡಮೂಲಿಕೆ ಹಾಕಿಸಿ ಕಟ್ಟುವವರೆಲ್ಲ**
**ಗೊಲ್ಲರಾಗಿ ಪುಟ್ಟುವರು" (೧೪೩)**

ಷಟ್‌ಸ್ಥಲವು ಆತ್ಮವಿಕಾಸಕ್ಕೆ ಮೆಟ್ಟಲಾಗಿ, ಪಂಚಾಚಾರವು ನಡೆ-ನುಡಿಯು ಸಂಹಿತೆಯಾಗಿ, ಅಷ್ಟಾವರಣವು ಆತ್ಮರಕ್ಷಣೆಯು ಅಂಗವಾಗಿ, ಶರಣ ಧರ್ಮದಲ್ಲಿ ರೂಪುಗೊಂಡಿವೆ. ಹಣೆಯಲ್ಲಿ ವಿಭೂತಿ. ತೋಳು ಕಂಠಗಳಲ್ಲಿ ರುದ್ರಾಕ್ಷಿ, ಕೊರಳಲ್ಲಿ ಶಿವಲಿಂಗ (ಇಷ್ಟಲಿಂಗ)-ಅಷ್ಟಾವರಣಗಳಲ್ಲಿಯ ಮೂರನ್ನು ಲಿಂಗವಂತರು ಧರಿಸುವುದು ಆವಶ್ಯಕವಾಗಿದೆ. ಅದು ಬಿಟ್ಟು ಭಂಡಾರ ಲೇಪಿಸುವುದು, ಕೊರಳಲ್ಲಿ ತಾಯಿತ ಕಟ್ಟುವುದು — ಶರಣ ಧರ್ಮಕ್ಕೆ ವ್ಯತಿರಿಕ್ತವಾಗಿದೆ. ಪರಧರ್ಮದಲ್ಲಿ ಸಹಿಷ್ಣುತೆ ಇರಬೇಕಲ್ಲದೆ ಸ್ವಧರ್ಮದ ನೇಮಬಿಟ್ಟು ಪರಧರ್ಮದ ನೇಮಕ್ಕೆ ಜೋತು ಬೀಳುವುದೆಂದರೆ — ಧರ್ಮದ ಮೂಲವನ್ನರಿಯದವರ ಕೆಲಸವಾಗಿದೆ. ಹದಿನೆಂಟು ದೇವರು ಧರ್ಮಗಳ ಬೆನ್ನುಹತ್ತುವುದು ಚಂಚಲ ಮನಸ್ಸಿನ ಕೆಲಸವಾಗಿದೆ. ತಮ್ಮ ಕರ್ಮ ಪರಿಹಾರಕ್ಕಾಗಿ ಭಯದಿಂದ ತಡಕಾಡುವುದಾಗಿದೆ.

ನಂಬಿದ ಹೆಂಡತಿಗೆ ಒಬ್ಬನೇ ಗಂಡ, ನಂಬಿದ ಭಕ್ತನಿಗೆ ಒಬ್ಬನೇ ದೇವರು, ಒಂದೇ ಧರ್ಮ. ತನ್ನ ಧರ್ಮವನ್ನು ಪಾಲಿಸುವಲ್ಲಿ ಅನ್ಯಧರ್ಮಕ್ಕೆ ಅಪಚಾರವಿಲ್ಲ. ಹಡೆದ ತಾಯಿಯನ್ನು ಗೌರವಿಸುವಲ್ಲಿ ಬೇರೆ ತಾಯಂದಿರ ಬಗ್ಗೆ ಅಸಡ್ಡೆ ತಾಳಿದಂತಲ್ಲ. ಸತಿಪತಿ ಪ್ರೀತಿ ವಿಶ್ವಾಸದಲ್ಲಿ ಹಾಗು ಭಕ್ತರಲ್ಲಿಯ ಶಿವಭಕ್ತಿಯಲ್ಲಿ ಶ್ರದ್ಧೆ ನಿಷ್ಠೆಗೆ ಭಂಗಬಂದರೆ, ಧರ್ಮ ಪಾಲನೆಗೆ ಭಂಗ. ನಿಷ್ಠೆ ಸಡಿಲಾದರೆ ಸಂಸ್ಕೃತಿಯಲ್ಲಿ ಶಿಥಿಲ ವುಂಟಾದಂತೆ. ನಿಷ್ಠೆ ಅಚಲವಾದರೆ ಸುಸಂಸ್ಕೃತಿಯನ್ನು ಪಾಲಿಸಿದಂತೆ. ಈ ರೀತಿ ಸಾಮಾಜಿಕರಲ್ಲಿಯ ಚಪಲ ಮನೋಧರ್ಮವನ್ನು ಹೋಗಲಾಡಿಸಿ ನಿಜ ಧರ್ಮ ಸಂಸ್ಕೃತಿಯನ್ನು ಕುದುರಿಸುವ ವಿಚಾರ ಕಾಡಸಿದ್ಧರದು !

**"ಪರ್ವತ ಮಲ್ಲಯ್ಯನ ಯಾತ್ರೆಗೆ ಹೋಗಬೇಕೆಂಬರಯ್ಯಾ**
**ಅದೇನು ಕಾರಣವೆಂದರೆ**
**'ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ'**
**ಎಂದುದಾಗಿ.... ಶಿಖರವ ಕಂಡಾಕ್ಷಣದಲ್ಲಿ ಮೋಕ್ಷವಹುದೆಂದು**
**ಇಂತೀ ಸರ್ವರು ಕೂಡಿ ಸಾಲ ಕಡ ಮಾಡಿ,**

**ಹೊನ್ನು ತಂದು ಒಂದೊತ್ತು ಬರಿಗಾಲಲೆ ನಡೆಯುತ್ತ**
**ಎಡವುತ್ತ, ಮುಗ್ಗುತ್ತ, ನಿನ್ನ ಪಾದ ಎಂದು ಕಂಡೇವು ಎನ್ನುತ್ತ**
**ಇಂತೀ ಪರಿಯಲ್ಲಿ ಹೋಹರಯ್ಯಾ !**
**ಇವರಿಗೆ ಮಲ್ಲಯ್ಯನ ದರುಶನವಿಲ್ಲ,**
**ಅವನ ಶಿಖರವ ಕಾಣಬಾರದು ನೋಡೆಂದ ನಿಮ್ಮ ಶರಣ" (೧೪೮)**

ತೀರ್ಥಯಾತ್ರೆಯಿಂದ ಪಾಪ ದೂರವಾಗಿ ಪುಣ್ಯಪ್ರಾಪ್ತಿಯಾಗುವುದೆಂದು ಜನರಲ್ಲಿ ಭ್ರಾಂತಿ ! ಮಾಡಬಾರದ ಪಾಪಕರ್ಮಮಾಡಿ, ಕ್ಷಮಿಸಲಾಗದ ಅನಾಚಾರದಲ್ಲಿ ನಡೆದು, ತೀರ್ಥಯಾತ್ರೆ ಕೈಕೊಂಡರೆ ಹೇಗೆ ? ಸದಾಚಾರದಲ್ಲಿ ನಡೆದು ಮನವ ಶುದ್ಧವಾಗಿರಿಸಿಕೊಂಡಿಲ್ಲ. ತನ್ನಲ್ಲಿಯೇ ಮಲ್ಲಯ್ಯನುಂಟು. ಕಲಾದೃಷ್ಟಿಯಿಂದ ಹಾಗು ಶಿವಭಾವಯುಕ್ತರಾಗಿ ತೀರ್ಥಯಾತ್ರೆಗೆ ಹೋಗಬಹುದಲ್ಲದೆ ಅಶಿವಭಾವದಿಂದ ಹೋದರೆ ಅಲ್ಲಿ ಶಿವನೆಲ್ಲಿ ? ಮಾಡಿದ ಪಾಪಕ್ಕಾಗಿ ಪಶ್ಚಾತ್ತಾಪಗೊಂಡು, ಇನ್ನು ಅಂಥ ಹೀನಕರ್ಮಕ್ಕಂಟದಂತೆ ಮನಸನ್ನು ನಿಯಂತ್ರಿಸಿಕೊಂಡಲ್ಲಿ ಅಲ್ಲಿಯೇ ಪರ್ವತ ಮಲ್ಲಯ್ಯನುಂಟು !

ಈ ಯಾತ್ರಿಕರು ಭಾವದಲ್ಲಿ ಉಪವಾಸವಿರದೆ, ಹೊಟ್ಟೆಯಲ್ಲಿ ಉಪವಾಸ ವಿರುತ್ತಾರೆ. ಬರಿಗಾಲಿನಿಂದ ನಡೆಯುತ್ತಾರೆ. ಮನಸು ಬರಿದಾಗಿರುವುದಿಲ್ಲ. ಎಂದು ಶಿಖರ ಕಂಡೇವು ಎನ್ನುವಲ್ಲಿ— ಭಕ್ತಿಯ ತೀವ್ರತೆಯಿಲ್ಲ. ಮಲ್ಲಯ್ಯನನ್ನು ಕಂಡು ತಿನ್ನುಣ್ಣಬೇಕೆಂಬ ಕಾತರ. ಹೆಜ್ಜೆ ಶ್ರೀಶೈಲದತ್ತ, ಚಿತ್ತ ಬಳಲಿಕೆಯತ್ತ, ಆಶೆ ಮೋಕ್ಷ ದತ್ತ, ಮನಸು ಪಾಪಯುಕ್ತ ! ಇಂಥವರಿಗೆ ಹೊರಗಣ್ಣಿಗೆ ಸ್ಥಾವರಲಿಂಗ ಕಾಣಿಸ ಬಹುದು. ಒಳಗಣ್ಣಿಗೆ ನಿಜ ಮಲ್ಲಯ್ಯನ ದರ್ಶನ ಸಾಧ್ಯವಿಲ್ಲ. ಗುಡಿಯ ಎತ್ತರವಾದ ಶಿಖರ ಕಾಣಿಸಬಹುದು. ಮಲ್ಲಯ್ಯನ ನಿರಾಳದೆತ್ತರ ಶಿಖರ ಕಾಣಿಸಲರಿಯದು !

ಹೀಗೆ ಜನರಲ್ಲಿಯ ಅಳಿಮನವನ್ನು ಬಯಲಿಗೆಳೆದು ತಿಳಿಮನ ಸಂಪಾದನೆಯ ಅಗತ್ಯವನ್ನು ಬೋಧಿಸುವ ವಿಚಾರ ಕಾಡಸಿದ್ಧರದಾಗಿದೆ !

**"ಶಿವ ಶಿವಾ, ನಾವು ಗುರು-ಲಿಂಗ-ಜಂಗಮದ**
**ತೀರ್ಥಪ್ರಸಾದ ಸಂಬಂಧಿಗಳೆಂದು ನುಡಿದುಕೊಂಬ**
**ಎಲೆ ಮತಿಭ್ರಷ್ಟ ಮರುಳ ಮಾನವರಿರ್ಯಾ**
**ಹೊಲಸು ಹಿಡಿಯಬಹುದು, ಪರಸ್ತ್ರೀಗಮನ ಮಾಡಬಾರದು,**
**ಆ ಹೊಲಸಿನ ದೋಷವು ನೀರಿನಿಂದ ತೊಳೆದರೆ**
**ನಿರ್ಮಲವಾಗಿ ತೋರುವುದು**
**ಆ ಹೆಂಗಸಿನ ದೋಷವು ನೀರಿನಿಂದ ತೊಳೆದರೆ ಹೋಗದು !**
**ಬೆಂಕಿಯಿಂದ ಸುಟ್ಟರೆ ಹೋಗದು" (೧೯೬)**

ಧರ್ಮ, ಭಕ್ತಿ ಇವು ಆತ್ಮೋನ್ನತಿಗೆ ಹಾಗು ಲೋಕೋನ್ನತಿಗೆ ಮಾಧ್ಯಮವಾಗುವ ಬದಲು, ಜನತೆಯನ್ನು ವಂಚಿಸುವಲ್ಲಿ ಸ್ವಾರ್ಥವನ್ನು ಸಾಧಿಸಿಕೊಳ್ಳುವಲ್ಲಿ ಮಾಧ್ಯಮವಾಗುತ್ತಲಿವೆ. ಈ ಚಾಳಿ ಅಂದೂ ಇತ್ತು, ಇಂದೂ ಇದೆ.

ಇತ್ತ ಗುರು–ಲಿಂಗ–ಜಂಗಮಕ್ಕೆ ನಡೆದುಕೊಂಡು ಪಾದೋದಕ ಪ್ರಸಾದ ಪಡೆದು ದಾಸೋಹಿಯೆಂದು ಹೇಳಿಕೊಳ್ಳುತ್ತಾರೆ. ಅತ್ತ ಪರಸ್ತ್ರೀ ಸಂಗ ಮಾಡುತ್ತಾರೆ. ಒಂದು ತೆರೆದ ಆಡಂಬರ ಬದುಕು – ಲೋಕದಲ್ಲಿ ಮೆರೆಯುವುದಕ್ಕೆ ! ಇನ್ನೊಂದು ಕಣ್ಮರೆಯ ಬದುಕು – ತನ್ನ ಅನಾಚಾರ ಲೋಕದ ಕಣ್ಣಿಗೆ ಕಾಣಬಾರದೆಂದು. ಕಣ್ಣರಿಯದಿದ್ದರೂ, ಕರುಳರಿಯದೆ ? ಜಗ ಕಾಣದಿದ್ದರೂ, ಜಗದಯ್ಯ ಕಾಣದಿರುವನೆ ?

ತಪ್ಪಿ ಹೇಸಿಗೆಯನ್ನು ಹಿಡಿದರೇನು–ಅದು ನೀರಿನಿಂದ ನಿರ್ಮಲವಾಗುವುದುಂಟು. ಆದರೆ, ಪರಸ್ತ್ರೀಸಂಗದೋಷ – ನೀರಿನಿಂದಾಗಲಿ ಬೆಂಕಿಯಿಂದಾಗಲಿ ದೋಷಮುಕ್ತವಾಗಲರಿಯದು. ಒಳಗೆ ಇಂಥ ಅಕ್ಷಮ್ಯ ದೋಷವಿರಿಸಿಕೊಂಡು, ಮೇಲೆ ಗುರು–ಲಿಂಗ–ಜಂಗಮ ಪೂಜೆ ಕೈಕೊಂಡರೆ, ಪಾದೋದಕ ಪ್ರಸಾದವನ್ನು ತಕ್ಕೊಂಡರೆ, ಪರಶಿವ ಅಂಥ ಡಾಂಭಿಕರನ್ನು ದಂಡಿಸುವನಲ್ಲದೆ ಮೆಚ್ಚುವುದಿಲ್ಲ. ಇಂಥ ತೆರೆಯ ಮರೆಯ ವ್ಯಭಿಚಾರಿಗಳು ಲೋಕವನ್ನು ಹೇಗೆ ಮೋಸಗೈದೆವೆಂದು ಭ್ರಮಿಸಬಹುದು. ಆದರೆ, ತಮ್ಮನ್ನು ತಾವು ಮೋಸಗೊಳಿಸಿಕೊಳ್ಳುತ್ತಾರೆ !! ಹೀಗೆ ಇಂಥ ಅನಾಚಾರಿಗಳಲ್ಲಿಯ ಲೋಪ ದೋಷಗಳನ್ನು ಕಾಡಸಿದ್ಧರು ಮಾರ್ಮಿಕವಾಗಿ ಖಂಡಿಸಿದ್ದಾರೆ.

**"ಇಂದಿನ ಚಿಂತೆಯುಳ್ಳವರೆಲ್ಲ ಹಂದಿಗಳು,**
**ನಾಳಿನ ಚಿಂತೆಯುಳ್ಳವರೆಲ್ಲ ನಾಯಿಗಳು,**
**ತನ್ನ ಚಿಂತೆಯುಳ್ಳವರೆಲ್ಲ ಜೋಗಿಗಳು,**
**ನಿನ್ನ ಚಿಂತೆಯುಳ್ಳವರೆಲ್ಲ ಯೋಗಿಗಳು !"** (೨೦೧)

ಚಿಂತೆ ಮಾಡಬಾರದೆನ್ನುತ್ತಾರೆ, ಚಿಂತೆ ಮಾಡಬಾರದೆನ್ನುತ್ತೇವೆ. ಆದರೆ, ಚಿಂತೆ ಯಾರನ್ನೂ ಬಿಟ್ಟಿಲ್ಲ ! ಬೆಳಗಾಗುವುದೊಂದೇ ತಡ, ಹೊಟ್ಟೆಯ ಚಿಂತೆ ಹಂದಿಗೆ. ಹೊರಕೇರಿಗೆ ಹೋಗುವುದು, ಹೇಸಿಗೆಯನ್ನು ಮೂಸುವುದು,ಮುಕ್ಕುವುದು, ಎದ್ದೊಡನೆ ಸಲುಹಿದ ದೇವರ ಧ್ಯಾನದತ್ತ ಗಮನವಿಲ್ಲ. ಹಸಿವೆ, ತೃಷೆ ಹಿಂಗಿಸುವ ಧ್ಯಾನ ಗಮನ ! ಇಂಥವರು ಹಂದಿ ಜಾತಿಯವರು !

ಇಂದು ತಿನ್ನುವಷ್ಟು ತಿನ್ನುವುದು, ಮತ್ತೆ ನಾಳೆ ಬೇಕೆಂದು ಕಾಯ್ದಿರಿಸುವುದು, ಇದು ನಾಯಿಗಳ ಹಪಾಪಿ. ನಾಳೆ ಬೇಕು, ಮತ್ತೆ ಬೇಕು, ಮುಂದೆ ಬೇಕು –ಎಂದು ಸಂಗ್ರಹಿಸಿಡುವಲ್ಲಿಯೆ ಆಯುಷ್ಯ ಕಳೆಯುವವರು ನಾಯಿ ಜಾತಿಯವರು.

ವೇಷದಲ್ಲಿ ಸನ್ಯಾಸಿ, ವೈರಾಗಿ, ಆಸೆಯಲ್ಲಿ ಅಶನ ವ್ಯಸನಧಾರಿ ! ಊರೂರು ತಿರುಗುವ ಜೋಗಿಗೆ ತನ್ನ ಹಸಿವೆಯ ಕುದಿಯಲ್ಲದೆ ಈಶನ ನೆನೆಯುವ ಕುದಿಯಿಲ್ಲ. ತನಗಾಗಿ ಮಾತ್ರ ಕುದಿವ ಸ್ವಾರ್ಥಿಗಳೆಲ್ಲ ಇಂಥ ಕೆಲಸಕ್ಕೆ ಬಾರದ ಜೋಗಿಗಳು !

ಜೋಗಿ ಬೇರೆ, ಯೋಗಿ ಬೇರೆ. ಯೋಗಿಯ ನಡೆಯಲ್ಲಿ ನುಡಿಯಲ್ಲಿ ಶಿವ ಧ್ಯಾನ, ಶಿವಚಿಂತನವುಂಟು. ಇಲ್ಲಿ ಚಿಂತೆ ವ್ಯಥೆಯ ಸಂಕೇತವಲ್ಲ, ತನ್ಮಯತೆಯ ಸಂಕೇತ. ಇಂಥವರು ಒಳಗೂ ಹೊರಗೂ ಯೋಗಿಗಳು. ಈ ಯೋಗಿಗಳು ಆತ್ಮೋದ್ಧಾರಕರೂ ಅಹುದು, ಲೋಕೋದ್ಧಾರಕರೂ ಅಹುದು. ಹೀಗೆ ಪರಹಿತ ಬಯಸುವ ಮಹಾನುಭಾವರು, ಒಂದು ದೃಷ್ಟಿಯಿಂದ ಯೋಗಿಗಳು, ಭಿನ್ನ ಭಿನ್ನ ಗುಣ ಸ್ವಭಾವವುಳ್ಳವರನ್ನೂ ವರ್ಗೀಕರಿಸುವ ಕಾಡಸಿದ್ಧರ ಕ್ರಮ ಗಮನಾರ್ಹ ವಾಗಿದೆ !

**"ಉಣಬೇಕು, ಉಡಬೇಕು, ಇಡಬೇಕು ಭೋಗಿಸಬೇಕೆಂಬರಯ್ಯಾ**
**ಉಂಡದ್ದು ಏನಾಯಿತು ? ಉಟ್ಟದ್ದು ಏನಾಯಿತು ?**
**ಇಟ್ಟದ್ದು ಏನಾಯಿತು ? ಭೋಗಿಸಿದ್ದು ಏನಾಯಿತು ?**
**ಮೃಷ್ಟಾನ್ನವಾಗಲಿ, ಕೃಷ್ಟಾನ್ನವಾಗಲಿ ಆವ ಪದಾರ್ಥವಾದಡೇನು ?**
**ಉಂಡ ಮೂರು ಗಳಿಗೆಯ ಮೇಲೆ ನರಕವಾಗಿ ತೋರುವುದು !**
**ಆವ ವಸ್ತ್ರವಾದಡೇನು ? ವರುಷಾರು ತಿಂಗಳಿಗೆ**
**ಹಣ್ಣ ಹರದು ಹರಿದು ಹೋಗುವವು"** (೨೦೨)

ಇದೇ ಆಶಯವುಳ್ಳ ವಚನವನ್ನು (ವ. ೨೦೦) ಬಸವಣ್ಣ ಬರೆದದ್ದುಂಟು. ಇದು ಅನುಕರಣವಲ್ಲ. ಅನುಭಾವಿಗಳ ಅನುಭವ ಬಹುಶಃ ಒಂದೇ ಬಗೆಯಾಗಿರುತ್ತದೆ:

**"ಉಂಡುದು ಬಂದಿತ್ತೆಂಬ ಸಂದೇಹಿ ಮಾನವ ನೀ ಕೇಳಾ,**
**ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ,**
**ಉಂಡುದು ಆಗಳೆ ಅಸೇಯುವಾಗಿತ್ತು !"** (೨೦೦)

ಉಣುವುದು ಉಡುವುದು ಬದುಕುವುದಕ್ಕೆ ಮಾತ್ರ. ಆದರೆ ಉಣುವುದಕ್ಕೇ ಈ ಬದುಕಲ್ಲ. ಉದ್ದೇಶವರಿಯದೆ ಮನುಷ್ಯ– ಬರಿ ಉಣು ಉಡುವ ಭೋಗ ವಿಲಾಸದಲ್ಲಿ ಕಾಲ ಹರಣ ಮಾಡುತ್ತಾನೆ. ಇವೇ ಸದ್ಗತಿಗೆ ಕಾರಣವಾಗಿದ್ದರೆ, ಉಂಡದ್ದು ನರಕವೇಕಾಗುತ್ತದೆ, ಉಟ್ಟದ್ದು ಹರಿದು ಏಕೆ ಹೋಗುತ್ತದೆ ? ಭೋಗಿಸಿದ ದೇಹಕ್ಕೆ ರೋಗ, ಮುಪ್ಪು, ಮರಣವೇಕೆ ಬರುತ್ತವೆ ? ಇವುಗಳನ್ನು ಅನುಭವಿಸಿಯೂ, ಇವುಗಳನ್ನು ಮೀರಿದ್ದೊಂದು ಗುರಿಯುಂಟು ಮನುಷ್ಯ ಜನ್ಮಕ್ಕೆ ! ಹಾಗೂ ತನಗಾಶ್ರಯವಿತ್ತ ದೇಶವನ್ನೂ ಸಲುಹಿದ ಸೃಷ್ಟಿಕರ್ತನನ್ನೂ ನೆನೆಯು ವುದೂ ಒಂದು ಧ್ಯೇಯವೆ ! ಹೀಗೆ ಮಾನವಜೀವನದ ಮುಖ್ಯ ಧ್ಯೇಯದತ್ತ ಈ ವಚನ ನಮ್ಮ ಗಮನ ಸೆಳೆಯುತ್ತದೆ.

"ಎನಗೆ ಭಕ್ತನೆಂಬರು, ಎನ್ನ ಭಕ್ತಿ ಚಾರಿತ್ರವ ಪೇಳ್ವೆ ಕೇಳಿರಯ್ಯ;
ಗುರು-ಲಿಂಗ-ಜಂಗಮ ಭಕ್ತಿಯೆಂದಡೆ,
ಎನ್ನ ತನು ಮನ ಕುಗ್ಗುವುದು !
ಮಾರಿ ಮಸಣಿ ಭಕ್ತಿಯೆಂದಡೆ, ನದಿ ಸರ್ಪದಂತೆ
ಎನ್ನ ತನು ಮನ ಉಬ್ಬುವುದು !
ಶಿವಶಾಸ್ತ್ರ, ಶಿವಾನುಭವ ಶಿವಮಂತ್ರ ಬೋಧೆ ಎಂದಡೆ
ಎನ್ನ ಶ್ರೋತ್ರಂಗಳು ಲಾಲಿಸವು !
ಕಪಟ ಮಂತ್ರ ಯಂತ್ರ ತಂತ್ರಗಳೆಂದಡೆ ಎನ್ನುಭಯ ಶ್ರೋತ್ರಂಗಳು
ವಿಕಸಿತವಾಗಿ ಶಬ್ದ ವಿಷಯ ಎಸೆವುದು !
ಹರಪೂಜೆ, ಗುರುಪೂಜೆ, ಲಿಂಗ ನಿರೀಕ್ಷಣವೆಂದಡೆ
ಎನ್ನ ನೇತ್ರಂಗಳು ನಿರೀಕ್ಷಿಸವು,
ಆಟ ನೋಟ ಸೂಳೆಯರ ಬೇಟವೆಂದಡೆ, ಎನ್ನ ನೇತ್ರದ
ರೂಪು ವಿಷಯವು ಬೇಂಟೆಯ ಶ್ವಾನದಂತೆ ಹರಿಯುತಿಪ್ಪುದು !"
(೨೦೬)

ಇಲ್ಲಿ ಆತ್ಮ ವಿಮರ್ಶೆಗಿಂತ ಲೋಕ ವಿಮರ್ಶೆಯ ಪ್ರಕ್ರಿಯೆ ಇದೆ. ಅಥವಾ ಆತ್ಮವಿಮರ್ಶೆಯಿಲ್ಲದೆ ಯಾವ ಸಾಧಕರೂ ಸಿದ್ಧಿ ಪಡೆದು ಸಿದ್ಧರಾಗುವಂತಿಲ್ಲ, ಪ್ರಬುದ್ಧರಾಗುವಂತಿಲ್ಲ.

ಇಂದ್ರಿಯಗಳಿಂದಲೇ ಮನುಷ್ಯ ಊರ್ಧ್ವಗಾಮಿಯಾಗಿ ಆತ್ಮೋನ್ನತಿಯನ್ನು ಸಾಧಿಸುತ್ತಾನೆ. ಇಂದ್ರಿಯಗಳಿಂದಲೆ ಅಧೋಮುಖಿಯಾಗಿ ಸಾಗಿ ಅಧೋಗತಿಗೆ ಇಳಿಯುತ್ತಾನೆ. ಭಕ್ತರೆಂದು ಹೇಳಿಕೊಳ್ಳುತ್ತಾರೆ. ಭಕ್ತಿ ಎಂಥದು ? ಗುರುಲಿಂಗ ಜಂಗಮ ಭಕ್ತಿಯತ್ತ, ಶಿವಾನುಭವ ಶ್ರವಣದತ್ತ, ಲಿಂಗಧ್ಯಾನ ಮನನದತ್ತ ಮನಸು ಹರಿಯದೆ, ಮಾರಿಮಸಣಿ ಭಕ್ತಿಯತ್ತ, ಹುಸಿ ಮಂತ್ರ ತಂತ್ರದತ್ತ, ಆಟಬೇಟದ ವಿಲಾಸದತ್ತ ಹರಿಯುವುದು. ಮನಸಿನ ಪರದಾಟಕ್ಕೆ ಇಂದ್ರಿಯ ಚಪಲವೇ ಕಾರಣ. ಈ ಇಂದ್ರಿಯಗಳನ್ನೂ ಅಧೋಮುಖದಿಂದ ಊರ್ಧ್ವಮುಖದತ್ತ ಪಾಲಿಸುವುದು ಮನುಷ್ಯನ ಕೈಯೊಳಗೇ ಇದೆ. ಶರಣರಂತೆ ಇವುಗಳನ್ನು ಹತ್ತಿಕ್ಕುವುದಲ್ಲ, ಪರಿವರ್ತಿಸುವುದು! ಕರಣೇಂದ್ರಿಯಗಳ ಉನ್ನತೀಕರಣದಲ್ಲಿಯೆ ಮನುಷ್ಯನ ಆತ್ಮೋನ್ನತಿ ಇದೆ. ಇದು ಗುರುಲಿಂಗ ಜಂಗಮ ದಾಸೋಹ ಭಕ್ತಿಯಿಂದ ಸಾಧ್ಯವಿದೆ. ಇಂದ್ರಿಯಗಳನ್ನು ಸಾಧುಗೊಳಿಸಿ, ಉನ್ನತೀಕರಿಸುವುದು–

"ದಿನಚರಿ ಮಾಸದೊಳಗೆ ಏಳು ವಾರದೊಳಗೆ
ಸೋಮವಾರ ಉಪವಾಸ ಮಾಡಬೇಕೆಂಬಿರಿ
ದ್ವಾದಶ ಮಾಸದೊಳಗೆ ಶ್ರಾವಣ ಸೋಮವಾರ
ಉಪವಾಸ ಮಾಡಬೇಕೆಂಬಿರಿ

**ಅನ್ನ ಉದಕವ ತೊರೆದು ಉಪವಾಸ ಮಾಡಿ,**
**ಆತ್ಮನ ಬಳಲಿಸಿ, ತನುವನೊಣಗಿಸಿ ನೀವು ವ್ರತವನಾಚರಿಸಿದಡೆ,**
**ನಿಮ್ಮ ಆತ್ಮದ್ರೋಹವು ಆ ದೇವತೆಗಳಿಗೆ ತಾಕಿ,**
**ಭವ ಭವದಲ್ಲಿ ಬೀಳುವಿರಿ !**
**ಉಂಡುಟ್ಟು ಲಿಂಗವ ಪೂಜಿಸಬೇಕು, ಉಣಿಸಿ ಉಡಿಸಿ**
**ಜಂಗಮವನರ್ಚಿಸಬೇಕು**
**ಕೊಟ್ಟು ಕೊಂಡು ಗುರುವನರ್ಚಿಸಬೇಕು !"** (೨೦೮)

ವ್ರತ, ನೇಮ, ಗೊಡ್ಡು ಕಂದಾಚಾರಗಳನ್ನು ಖಂಡಿಸುವಲ್ಲಿ ಕಾಡಸಿದ್ಧೇಶ್ವರರು ಪ್ರತಿಬಸವರಾಗಿದ್ದಾರೆ. ಇಂಥ ಧರ್ಮಕ್ಕೆ ವಿಮುಖವಾದ ಸಂಪ್ರದಾಯಗಳಿಂದ ಮುಕ್ತರಾಗಬೇಕೆಂದು ಜನತೆಯಲ್ಲಿ ಜಾಗೃತಿಯನ್ನುಂಟು ಮಾಡಿದ್ದಾರೆ.

ಬರಿ ತಿನ್ನುವುದು ಉಣ್ಣುವುದು ಬದುಕಲ್ಲ, ಉಪವಾಸ ವ್ರತ ಮಾಡುವುದು ಭಕ್ತಿಯೂ ಅಲ್ಲ, ಧರ್ಮವೂ ಅಲ್ಲ, ಉಪವಾಸದಿಂದ ಆತ್ಮ ಬಳಲುವುದರಿಂದ ದೇಹ ಒಣಗುವುದರಿಂದ ಬಂದ ಭಾಗ್ಯವಾದರೂ ಏನು ? ಈ ಆತ್ಮ ದೇಹಗಳನ್ನು ಸೃಷ್ಟಿಸಿದ ಪರಮಾತ್ಮನಿಗೆ ಆತ್ಮ ಹಿಂಸೆಯಿಂದ ಹಿಂಸೆಯುಂಟಾಗುತ್ತದೆ. ತಿಂದುಂಡು ತೃಪ್ತರಾಗಿ, ಗುರು–ಲಿಂಗ–ಜಂಗಮದ ಪೂಜೆ ಕೈಕೊಳ್ಳಬೇಕೆಂಬ ಕಾಡಸಿದ್ಧೇಶ್ವರರ ವಿಚಾರ ವೈಜ್ಞಾನಿಕವಾಗಿದೆ, ವಾಸ್ತವಿಕ ಪ್ರಜ್ಞೆಯುಳ್ಳದ್ದಾಗಿದೆ. ಒಳಗಿನ ಆತ್ಮ ಸಂತುಷ್ಟಗೊಂಡರೆ ಪರಮಾತ್ಮನೂ ಸಂತುಷ್ಟಗೊಳ್ಳುತ್ತಾನೆ. ಅನಾಚಾರಕ್ಕಿಳಿಯದೆ ಸದಾಚಾರಿಯಾಗಿ ನಡೆಯುವಲ್ಲಿಯೆ ಧರ್ಮವಿದೆ !

**"ನವಖಂಡ ಪೃಥ್ವಿ ಎಂಬುದು ಪಂಚಶತಕೋಟಿ ಯೋಜನ**
**ಮಂಡಲಾಕಾರವಾದ ಭೂಮಂಡಲ ಒಂದೇ**
**ಮತ್ತಂ ಮಂದ–ಮತಿಗಳಾದ ಜೀವಾತ್ಮರು ಕೂಡಿ**
**ಇದು ದೇವ ಭೂಮಿ, ಇದು ಗ್ರಾಮ ಗೃಹದ ಭೂಮಿ**
**ಎಂದು ಹೆಸರಿಟ್ಟು ಸ್ಥಾಪನೆಯ ಮಾಡುವಿರಿ,**
**ಎಲಾ ದಡ್ಡ ಪ್ರಾಣಿಗಳಿರಾ,**
**ನಿಮ್ಮ ಮನದ ಸಂಕಲ್ಪ ವಿಕಲ್ಪದಿಂ ಶುದ್ಧ ಅಶುದ್ಧವಾಗಿ**
**ತೋರುವುದಲ್ಲದೆ**
**ನಿಮ್ಮ ಮನದ ಸಂಕಲ್ಪವನಳಿದಡೆ ಸಕಲ ಬ್ರಹ್ಮಾಂಡಗಳೆಲ್ಲ**
**ನಿರ್ಮಳವಾಗಿ ತೋರುವವು !"** (೨೦೫)

ಸೃಷ್ಟಿಕರ್ತ ಒಬ್ಬನೆ, ಹುಟ್ಟಿಸಿದ ಸೃಷ್ಟಿ ಒಂದೆ. ಆಕಾರ–ಪ್ರಕಾರದಲ್ಲಿ ವೈವಿಧ್ಯವಿರಬಹುದು. ವೈವಿಧ್ಯದಲ್ಲಿಯೆ ಸೌಂದರ್ಯವಿದೆ, ಪ್ರಯೋಜನವೂ ಇದೆ.

ಹಾಗೆಂದು ಭೇದ ಕಲ್ಪಿಸುವುದು ಸಲ್ಲದು. ಭೇದ-ಭಾವ ಅಳಿದವನೆ ಪರಮಾತ್ಮ! ಮನುಷ್ಯನ ಸಂಕಲ್ಪ ವಿಕಲ್ಪ ಭಾವದಿಂದ ಅದು ದೇವ ಭೂಮಿ, ಇದು ಮರ್ತ್ಯ ಲೋಕ, ಅದು ಮೇಲಾದವರ ಕೇರಿ, ಇದು ಕೀಳಾದವರ ಹೊಲಗೇರಿ ಎಂದು ನಿರ್ಮಾಣವಾಗಿವೆ. ಇದೆಲ್ಲ ಮಾನವನಿಂದುಂಟಾದ ಅಳಿಮನದ ಕೃತಕ ಸೃಷ್ಟಿ! ಅರಿತು ಸದಾಚಾರದಲ್ಲಿ ನಡೆದರೆ, ಸ್ವರ್ಗವೆನಿಸುತ್ತದೆ. ಅರಿಯದೆ ಅನಾಚಾರಿಯಾಗಿ ನಡೆದರೆ ನರಕವಾಗುತ್ತದೆ. ನಮ್ಮ ಭಾವದ ಪಡಿಯಚ್ಚು ಈ ಭೂಮಿ. ಆ ಹೆಸರಿನ ಲೋಕ ಈ ಹೆಸರಿನ ಲೋಕವೆಂಬುದು ಈಶ ನಿರ್ಮಿತವಲ್ಲ, ಮನುಷ್ಯ ನಿರ್ಮಿತ.

ಈ ಅಳಿಮನದ ಅನರ್ಥ ಪರಂಪರೆ ಇಷ್ಟಕ್ಕೇ ಮುಗಿಯಲಿಲ್ಲ. ವರ್ಣ, ಕುಲ, ಜಾತಿ, ಮತ ಎಂಬಿವು ಮನುಷ್ಯನ ತರತಮದ ಸಂತಾನ! ಕಾಡಸಿದ್ಧರು ಈ ವಚನವನ್ನು ಮುಂದುವರಿಸಿ ಒಂದು ಮಾರ್ಮಿಕ ದೃಷ್ಟಾಂತ ಕೊಟ್ಟಿದ್ದಾರೆ. ಬೇವಿನ ಮರದಲ್ಲಿ ಒಂದು ತೊಂಗೆಯಲ್ಲಿ ಬೇವಿನಹಣ್ಣು, ಇನ್ನೊಂದು ತೊಂಗೆಯಲ್ಲಿ ಮಾವಿನಹಣ್ಣು ಹುಟ್ಟಬಹುದೇ? ಎಂದು ಮಾನವನ ಅಜ್ಞಾನವನ್ನೇ ಪ್ರಶ್ನಿಸಿದ್ದಾರೆ. ಒಂದೇ ಸೃಷ್ಟಿಯಲ್ಲಿ ಒಬ್ಬ ಮನುಷ್ಯ ಶ್ರೇಷ್ಠ, ಇನ್ನೊಬ್ಬ ಕನಿಷ್ಠ ಹುಟ್ಟಬಹುದೇ? ಈಶ್ವರಸೃಷ್ಟಿಯಲ್ಲಿ ಈ ಭೇದವಿಲ್ಲ, ಜನ್ಮತಃ ಶ್ರೇಷ್ಠ ಕನಿಷ್ಠವೆಂದು ಯಾರೂ ಇಲ್ಲ. ನೀತಿವಂತ ಶ್ರೇಷ್ಠ, ಅನೀತಿವಂತ ಕನಿಷ್ಠ. ಸಕಲರಿಗೆ ಲೇಸ ಬಯಸುವವ ಶ್ರೇಷ್ಠ, ಕೇಡ ಬಯಸುವವ ಕನಿಷ್ಠ. ನಮ್ಮ ದೃಷ್ಟಿ ಹೇಗೋ ಹಾಗೆ ಸೃಷ್ಟಿ!! ಅಜ್ಞಾನದಿಂದ ಸುಜ್ಞಾನದತ್ತ ಕರೆದೊಯ್ಯಬಲ್ಲುದು ಈ ವಚನ!!

**"ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಮಲವ ಪಿಡಿದು**
**ಆಚರಿಸುವುದು ಲೌಕಿಕವಲ್ಲ.**
**ಸತಿ ಸುತರ ಪಿಡಿದು ಮನಿ ಮಾರು ಕಟ್ಟಿ**
**ಪ್ರಪಂಚ ಮಾಡುವುದು ಲೌಕಿಕವಲ್ಲ.**
**ತನ್ನ ಸ್ವಸ್ವರೂಪ ಪರಂಜ್ಯೋತಿ ಸ್ವರೂಪವೆಂಬುದ ಮರೆದು,**
**ಪಂಚ ಭೂತ ದೇಹ ಸ್ವರೂಪ ನಾನೆಂದು ಇರುವುದೇ ಲೌಕಿಕ,**
**ಲಿಂಗಾಂಗದ ಸಮರಸವನರಿಯದೆ**
**ಅಂಗ ಮುಖದಲ್ಲಿ ಸಂಚರಿಸುವುದು ಲೌಕಿಕ!"** **(೪೨೮)**

ಹೊನ್ನು (ಹಣ), ಹೆಣ್ಣು, ಮಣ್ಣು –ಇವುಗಳನ್ನು ಬಿಟ್ಟು ಬದುಕೆಂಬುದಿಲ್ಲ. ಹೊನ್ನಿನಂತೆ ಅಮೂಲ್ಯವಾದ ಆತ್ಮ, ಹೆಣ್ಣಿನಂತೆ ಚಂಚಲವಾದ ಮನಸ್ಸು, ಮಣ್ಣಿನಿಂದಲೇ ಮೂರ್ತವಾದ ದೇಹ ಇವುಗಳನ್ನು ಒಳಗೊಂಡು ಮನುಷ್ಯನೆಂಬವ ಸೃಷ್ಟಿಯಾಗಿದ್ದಾನೆ. ಇವುಗಳ ವ್ಯಾಮೋಹಕ್ಕೆ ಒಳಗಾದರೆ ತ್ರಿವಿಧ

(ಆಣವ, ಮಾಯಾ, ಕಾರ್ಮಿಕ) ಮಲ ಬಾಧಿಸುತ್ತವೆ. ಮನೆ, ಮಾರು, ಕಟ್ಟಿಸಿ ಮಡದಿ ಮಕ್ಕಳೊಂದಿಗೆ ಪ್ರಪಂಚ ಮಾಡುವುದೂ ಲೌಕಿಕವಲ್ಲ.' ಅಂದರೆ ಆತ್ಮೋನ್ನತಿಗೆ ಇವು ಸಾಧಕವಾಗುವಂತೆ ಬದುಕಬೇಕಲ್ಲದೆ ಬಾಧಕವಾಗುವಂತಲ್ಲ. ದೇಹವೇ ತಾನು, ದೈಹಿಕ ಸುಖವೇ ತನ್ನ ಸುಖ –ಎಂದು ಬದುಕಿದರೆ ಅದು ಲೌಕಿಕ. ಈ ದೇಹವನ್ನು ಗುರು–ಲಿಂಗ–ಜಂಗಮ ದಾಸೋಹಕ್ಕಾಗಿ ದುಡಿಸಿಕೊಂಡರೆ, ಪಾರಮಾರ್ಥ ಸಾಧ್ಯವಾಗುತ್ತದೆ. ಲಿಂಗಭಾವ ಹಿಂಗಿ, ಲಿಂಗಭಾವದಲ್ಲಿ ಬದುಕುವುದೇ ಲಿಂಗಾಂಗ ಸಾಮರಸ್ಯ ! ಲಿಂಗಾಂಗ ಸಾಮರಸ್ಯವರಿಯುವುದೇ ಪಾರಮಾರ್ಥ. ಪಾರಮಾರ್ಥ ಸಾಧಿಸುವುದೇ ಮಾನವ ಜೀವನದ ಉದ್ದೇಶ. ಲೌಕಿಕದಲ್ಲಿ ಬದುಕುತ್ತ, ಈ ಲೌಕಿಕವನ್ನು ಉದಾತ್ತೀಕರಿಸುತ್ತ ಹೋದಲ್ಲಿ ಮಾತ್ರ ಪಾರಮಾರ್ಥ ನಮ್ಮ ಸ್ವತ್ತಾಗುತ್ತದೆ.

**"ಅಂಗ ಭಾವ ಹಿಂಗಿ, ಲಿಂಗಭಾವ ಮುಂದುಗೊಂಡಿರುವುದೇ ಪಾರಮಾರ್ಥ**
**ಪಂಚೇಂದ್ರಿಯ ವಿಷಯ ಸುಖವನಳಿದು,**
**ಪಂಚಲಿಂಗದ ಸಮರಸದಲ್ಲಿರುವುದೇ ಪಾರಮಾರ್ಥ**
**ಅಹಂಕಾರವಳಿದು ನಿರಹಂಕಾರದಲ್ಲಿರುವುದೇ ಪಾರಮಾರ್ಥ**
**ಶಬ್ದ ಜಾಲಂಗಳನಳಿದು ನಿಶ್ಶಬ್ದವೇದಿಯಾಗಿರುವುದೇ ಪಾರಮಾರ್ಥ !"**

ಲೌಕಿಕವನ್ನು ಬಿಟ್ಟು ಬದುಕುವಂತಿಲ್ಲ. ಅಂತರಂಗ ಬಹಿರಂಗಗಳಲ್ಲಿ ಸತ್ಯ ಶುದ್ಧವಾಗಿ ಬದುಕುವ ಕಲೆಯು ಪಾರಮಾರ್ಥದತ್ತ ಕರೆದೊಯ್ಯಬಲ್ಲುದು. ಆದರೆ, ಲೌಕಿಕದಲ್ಲಿ ಸತ್‌ಪಥ ಹಿಡಿದು ಸಾಗುವವನಿಗೆ ಆತಂಕಗಳು ಬಹಳ. ದೇಹಭಾವ, ಪಂಚೇಂದ್ರಿಯಗಳ ವಿಷಯಚಪಲ, ನಾನೆಂಬ ಅಹಂಕಾರ, ನಾನು ವೇದವೇದಾಂತ ಓದಿದ ಪಂಡಿತನೆಂಬ ಜಂಭ –ಇವು ಸತ್ಯಶುದ್ಧವಾಗಿ ಲೌಕಿಕದಲ್ಲಿ ಬದುಕುವುದಕ್ಕೆ ಬಿಡುವುದಿಲ್ಲ. ಇವುಗಳ ಸೆರೆಯಿಂದ ಮುಕ್ತನಾದಲ್ಲದೆ ಪಾರಮಾರ್ಥ ನಿಲಕುವಂತಿಲ್ಲ. ಲೌಕಿಕ ಬದುಕುವುದಕ್ಕೆ ದಾರಿಯಾದರೆ, ಪಾರಮಾರ್ಥ ಆತ್ಮೋನ್ನತಿಗೆ ದಾರಿಯಾಗುತ್ತದೆ. ಆತ್ಮೋನ್ನತಿಯನ್ನು ಸಾಧಿಸದೆ ಮನುಷ್ಯಜನ್ಮ ಕೃತಾರ್ಥವಾಗುವುದಿಲ್ಲ. ಅದು ಕಾರಣ ಸಾಮಾಜಿಕರಿಗೂ ಪಾರಮಾರ್ಥವನ್ನರಿತು ಆತ್ಮೋದ್ಧಾರ ಮಾಡಿಕೊಳ್ಳುವುದು ಅಗತ್ಯವಾಗಿದೆ. ಇದೂ ಒಂದು ಸಾಮಾಜಿಕ ಪರಿಜ್ಞಾನವೆಂದು ಕಾಡಸಿದ್ಧರು ಈ ವಚನದಲ್ಲಿ ಪ್ರತಿಪಾದಿಸಿದ್ದಾರೆ.

ಆದ್ದರಿಂದ, ದೇಹಭಾವ ಹಿಂಗಿ ಲಿಂಗಭಾವ ಅಥವಾ ದೇವಭಾವದತ್ತ, ವಿಷಯ ಸುಖದತ್ತ ಹರಿಯುವ ಪಂಚಇಂದ್ರಿಯಗಳು ಪಂಚಲಿಂಗಕ್ಕೆ ಆಶ್ರಯಸ್ಥಾನವಾಗುವತ್ತ, ಅಹಂಭಾವವಳಿದು ನಿರಹಂಭಾವಿಯಾಗುವತ್ತ, ಪಂಡಿತನಾಗಿದ್ದರೂ,

ಶಬ್ದವ ಭೇದಿಸಿ, ಅರ್ಥವನ್ನೂ ಮೀರಿ ಶಿವಭಾವಕ್ಕೇರುವತ್ತ— ಲೌಕಿಕರು ಪ್ರಯತ್ನಿಸಿದರೆ, ಪಾರಮಾರ್ಥ ಸಾಧ್ಯವಾಗುತ್ತದೆ. ಎಷ್ಟು ಶಬ್ದ ಬಳಸಿ ಹೇಳಿದರೂ ಮಾತಿನ ಮರ್ಮ ಒಂದು ತೊಡಕುಂಟಾಗಬಹುದಲ್ಲದೆ ಸ್ಪಷ್ಟ-ನಿಚ್ಚಳ ನಿಲುವು ಪ್ರಕಟವಾಗದು ! ಹೀಗೆ ನಿಶ್ಶಬ್ದವೆಂದರೆ ಮಾತನಾಡದಿರುವದಲ್ಲ. ಆದರೆ ಮಾತನಾಡಿರುವುದನ್ನು ಮೌನದಲ್ಲಿ ಚಿಂತನ ಮಂಥನ ಮಾಡಿ, ಸತ್ಯದ ನವನೀತ ಪಡೆಯುವುದಾಗಿದೆ. ಇದುವೆ ಶಬ್ದ ಜಾಲವ ಭೇದಿಸಿ ನಿಶ್ಶಬ್ದವೇದಿಯಾಗುವ ಪರಿ ! ಪಾರಮಾರ್ಥವನ್ನು ಶಬ್ದದಲ್ಲಿ ವಿವರಿಸಿದರೂ ಕೊನೆಗೆ ನಿಶ್ಶಬ್ದದ (ಮೌನ ಚಿಂತನದ) ಮೂಲಕವೆ ಅರಿಯುವಂಥದಾಗಿದೆ !

> **"ಓದಿದರೆ ಓದಬಹುದು ಅಧಮ ಮೂರ್ಖರ ಮುಂದೆ**
> **ಅರಸು ಪ್ರಧಾನಿಗಳಾದ ಪುರುಷರ ಮುಂದೆ ಓದಲಾಗದು,**
> **ಕುರುಡನ ಕೈಯೊಳಗೆ ಕನ್ನಡಿಯ ಕೊಟ್ಟರೆ ನೋಡಬಲ್ಲನೇ**
> **ಕಣ್ಣುಳ್ಳವನಲ್ಲದೆ ?**
> **ಹುಟ್ಟಿದವರು ಬಲ್ಲರು, ಹುಟ್ಟಿದವರು ಅರಿಯರು**
> **ಕಾಡನೊಳಗಾದ ಶಂಕರ ಪ್ರಿಯ ಚನ್ನಕದಂಬ ಲಿಂಗ**
> **ನಿರ್ಮಾಯ ಪ್ರಭುವೆ !"** (೪೮೫)

ಕಾಡಸಿದ್ಧೇಶ್ವರರು ಸಾಮಾನ್ಯ ಜನರನ್ನೂ ಅರಿತಂತೆ ಅರಸು ಮಂತ್ರಿ ಮೊದಲಾದ ಮೇಲ್ವರ್ಗದವರನ್ನು ಅರಿತಿದ್ದಾರೆ. ಅವರೊಬ್ಬ ಸಮಾಜ ವಿಜ್ಞಾನಿಯೆಂದರೂ ಅಡ್ಡಿಯಿಲ್ಲ. ಈ ವಚನ ಈ ಮಾತಿಗೆ ಋಜುವಾಗಬಲ್ಲುದು.

ಹಣವನ್ನು ಖರ್ಚು ಮಾಡಿದರೆ ಅಥವಾ ಅನ್ಯರಿಗೆ ಕೊಟ್ಟರೆ ಅಷ್ಟು ಕಡಿಮೆಯಾಗುತ್ತದೆ. ವಿದ್ಯೆಯನ್ನಾಗಲಿ ಜ್ಞಾನವನ್ನಾಗಲಿ ಕೊಟ್ಟರೆ ಅಧಿಕವಾಗಬಹುದಲ್ಲದೆ ಕಡಿಮೆಯಾಗದು. ಆದರೆ ಕೊಡುವಲ್ಲಿ ಒಂದು ನಿಯಮವಿರಬೇಕು.

ಕಣ್ಣುಳ್ಳವನಿಗೆ ಕನ್ನಡಿಯನ್ನು ಕೊಟ್ಟರೆ ಪ್ರಯೋಜನವಾಗಬಹುದಲ್ಲದೆ ಕುರುಡನಿಗೆ ಕೊಟ್ಟರೆ ಪ್ರಯೋಜನವಾಗದು. ಅರಸು, ಪ್ರಧಾನಿಗಳಿಗೆ ಹಿತವಚನ ಹೇಳಿದರೆ ಏನೂ ಪ್ರಯೋಜನವಿಲ್ಲ. ಏಕೆಂದರೆ ಪ್ರಕೃತಿ ಗುಣಧರ್ಮದಿಂದ ಕುರುಡನ ಹೊರಗಣ್ಣು ಕುರುಡು. ಅಧಿಕಾರ ಮದದಿಂದ ಅರಸು, ಪ್ರಧಾನಿಗಳ ಒಳಗಣ್ಣು ಕುರುಡು. ಕುರುಡನಿಗೆ ಕನ್ನಡಿ ನಿಷ್ಪ್ರಯೋಜಕ. ಇಂಥ ಅಹಂ ಮನ್ಯರಿಗೆ ಬುದ್ಧಿವಾದ ನಿಷ್ಪ್ರಯೋಜಕ! ಆದರೆ ಹಿಂದುಳಿದವರು, ಅಜ್ಞಾನಿಗಳು ಏನೂ ಅರಿಯದ ಮುಗ್ಧರು -ಮೊದಲಾದವರಿಗೆ ಬುದ್ಧಿ ಹೇಳಿದರೆ ಉಪಯೋಗವಾಗುತ್ತದೆ. ಅಂಥ ಪತಿತರಿಗೆ ಮುಗ್ಧರಿಗೆ— ಒಳ್ಳೆಯವರಾಗಬೇಕೆಂಬ ಸುಧಾರಿಸಬೇಕೆಂಬ ಹಂಬಲವಿರುತ್ತದೆ. ಅಂಥವರಿಗೆ ಬೋಧೆಯೆಂಬುದು ಉದ್ಧಾರದ ದಾರಿಯಾಗಬಹುದು. ಸತ್ಪಾತ್ರರಿಗೆ ಕೊಟ್ಟದ್ದು ಹೇಳಿದ್ದು ಸಾರ್ಥಕವಾಗುವಂತೆ ಅಪಾತ್ರರಿಗೆ ಸಾರ್ಥಕವಾಗಲರಿಯದು,

ಇಷ್ಟೇ ಅಲ್ಲ, ಅರಸು ಮಂತ್ರಿಯಂಥವರಿಗೆ ಒಳಿತನ್ನು ಹೇಳಿದರೆ ತಿರುಗಿ ಮೈಮೇಲೆ ಬೀಳಬಹುದು. ನಮ್ಮಂಥವರಿಗೆ ಬುದ್ಧಿವಾದ ಹೇಳಲು ಇವನಾರು ? ಎಂದು ದಂಡಿಸಲೂ ಹೋಗಬಹುದು.

ಸನ್ಯಾಸಿಯಾಗಿ ಸಮಾಜದಿಂದ ದೂರವಿದ್ದರೂ ಉಂಟು. ಆದರೆ ತ್ಯಾಗ ಯೋಗದ ಫಲ— ಅಜ್ಞರನ್ನು ಪತಿತರನ್ನು ಉದ್ಧರಿಸುವಲ್ಲಿ ಉಪಯುಕ್ತವಾದರೆ ಸಾರ್ಥಕ ವಾಗುತ್ತದೆ. ಕಾಡಸಿದ್ಧರು ಇಂಥ ತ್ಯಾಗಿ ಯೋಗಿಗಳು !

**"ಪಾಕವಾದನ್ನವನುಣ್ಣದೆ, ಪಾಕವ ಮಾಡುಂಬೆವೆಂಬರು,**
**ಕೊಟ್ಟ ಫಲವ ಬಚ್ಚಿಟ್ಟು ತಿನ್ನಲರಿಯದೆ**
**ವೃಕ್ಷದ ಕೊನೆಯೊಳಗಣ ಫಲವ ತಿಂದೇವೆಂಬರು**
**ಇದ್ದವರನರಿಯದೆ ಸತ್ತವರ ಬಲ್ಲೆವೆಂಬರು !''** (೪೮೮)

ಪಾಲಿಗೆ ಬಂದುದನ್ನು ಸವಿದು ಸಂತೋಷಪಡುವ ಸಂತೃಪ್ತ ಪ್ರವೃತ್ತಿ ಮನುಷ್ಯನಿಗೆ ಕಡಿಮೆ. ಇವರದೇ ಒಂದು ವಚನದ ಪ್ರಕಾರ ಹೇಳುವುದಾದರೆ— "ಕೊಟ್ಟ ಪಡಿಯನುಣ್ಣದೆ ಕೊಡದ ಪಡಿಗೆ ಹವಣಿಸುವರು" ಇದು ಅತೃಪ್ತಿಗೆ ಸಂಕೇತವಷ್ಟೆ ! "ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ !" ಅಲ್ಲಮಪ್ರಭುಗಳ ಈ ವಚನವೂ ಇದೇ ಆಶಯವನ್ನು ವ್ಯಕ್ತಗೊಳಿಸುತ್ತದೆ.

ಸೃಷ್ಟಿಕರ್ತ ಮನುಷ್ಯ ನೆಮ್ಮದಿಯಿಂದ ಬದುಕುವುದಕ್ಕೆ ಏನು ಅಗತ್ಯವೊ ಅದನ್ನು ಕೊಟ್ಟಿರುತ್ತಾನೆ. ಮನುಷ್ಯ ಕೆಟ್ಟಿರುವುದು ಚಂಚಲ ಸ್ವಭಾವದಿಂದ. ಚಾಂಚಲ್ಯಕ್ಕೂ ತೃಪ್ತಿಗೂ ಬದ್ಧ ವೈರ !

ಅಡಿಗೆ ಸಿದ್ಧವಾಗಿದೆ, ಅದು ಬೇಡ. ಅವರೇನು ಮಾಡುತ್ತಾರೆ ? ತನ್ನಂತೆ ಮಾಡುವವರು ಯಾರಿದ್ದಾರೆ ? ಹೀಗೆ ಮಾಡಿ ಉಣ್ಣಬೇಕೆಂಬ ಇಚ್ಛೆಯಲ್ಲಿ ಸ್ವಾವಲಂಬನವಿಲ್ಲ. ಪರದೂಷಣೆ ಇದೆ. ನಿರುದ್ಯೋಗಿಗೆ ಕೆಲಸ ಸಿಕ್ಕದೆ. ಅದು ಬೇಡ, ತನಗೆ ತಕ್ಕುದಲ್ಲ. ತನ್ನಲ್ಲಿಗೆ ದಯಮಾಡಿಸಿರುವುದನ್ನು ತಿರಸ್ಕರಿಸಿ ಬೇರೊಂದನ್ನು ಇನ್ನೊಂದನ್ನು ಬಯಸುತ್ತ ಹೋದರೆ, ಆತ ನಿರುದ್ಯೋಗಿಯಾಗಿಯೆ ಉಳಿಯು ತ್ತಾನೆ. ಕೈಗೆ ಬಂದುದು ರುಚಿಯಿರಲಿಕ್ಕಿಲ್ಲ. ಕೈಗೆಟುಕಲಾರದ ಕೊನೆಯ ತೊಂಗೆ ಯಲ್ಲಿಯ ಹಣ್ಣಿಗೆ ಆಸೆಪಡುತ್ತಾರೆ. ಅದೂ ಸಿಗದೆ ಹೋಗಬಹುದು. ಸಿಕ್ಕರೂ ಹುಳಿಯಿರಬಹುದು. ಆ ಹಣ್ಣು ಇಲ್ಲ, ಈ ಹಣ್ಣೂ ಇಲ್ಲ, ಕೊನೆಗೆ ನಿರಾಶೆಯೆ ಅಂಥವರ ದೈವವಾಗುತ್ತದೆ.

ಆ ಗುರು ಬೋಧೆಯೂ ಬೇಡ. ಈ ಗುರುಬೋಧೆಯೂ ಬೇಡ. ಹಂಬಲ ತುಂಬಿ ಬರುವುದಕ್ಕೆ ಹುಡುಕಾಟ ದಾರಿಯಲ್ಲ, ಸಂಕಲ್ಪ ಬೇಕು. ಶ್ರದ್ಧೆ

ಸಂಕಲ್ಪವಿಲ್ಲದೆ ಯಾವುದಕ್ಕೆ ಕೈಹಾಕಿದರೂ ಯಶಸ್ಸು ಸಿಕ್ಕುವುದಿಲ್ಲ. ತನ್ನಲ್ಲಿ ಒಂದು ನಿರ್ಣಾಯಕ ಮತಿ ಬೇಕು! ಸತ್ತ ಎಮ್ಮೆಗೆ ಸೇರು ತುಪ್ಪ ಹೆಚ್ಚು. ಇದು ಬರಿ ನಾಣ್ಣುಡಿಯಲ್ಲ, ಜಾಣ್ನುಡಿ! ಸತ್ತು ಹೋದವರು ನಿಷ್ಣಾತರಿದ್ದರು. ಈಗಿನವರೇನು ಜೊಳ್ಳು! ಹೀಗಳೆಯುವುದೊಂದು ಬುದ್ಧಿವಂತಿಕೆಯೆಂದು ಭಾವಿಸುವ ಮೂರ್ಖರೂ ಇದ್ದಾರೆ. ಬಂಗಾರವನ್ನು ಒರೆಗಿಟ್ಟು ನೋಡುವ ನೈಪುಣ್ಯ ಅಕ್ಕಸಾಲಿಗನಿಗಲ್ಲದೆ ಒಡವೆಯನ್ನು ಧರಿಸುವವರಿಗಿರುವುದಿಲ್ಲ.

ಒಳಗೊಬ್ಬ ಗುರು ಇದ್ದಾನೆ. ಒಳಗೊಂದು ಅಂತಃಪ್ರಜ್ಞೆ ಇದೆ. ಇದು ಒಳಿತು, ಇದು ಕೆಡಕು– ಎಂದು ಆಗಾಗ ನಮಗೆ ಹೇಳುತ್ತಲೇ ಇರುತ್ತದೆ. ಗುರು ಸ್ವರೂಪದಲ್ಲಿರುವ ಅಂತಃಪ್ರಜ್ಞೆಗೆ ಕಿವಿಗೊಡದೆ, ಮನುಷ್ಯ ತೊಳಲಾಡಿ ವೃಥಾ ನಿರಾಶೆಗೆ ತುತ್ತಾಗುತ್ತಾನೆ! ಈ ವಚನದ ತಾತ್ಪರ್ಯವಿದು.

ಒಟ್ಟಂದದಲ್ಲಿ, ಕಾಡಸಿದ್ಧೇಶ್ವರರು ಜನಸಾಮಾನ್ಯರಲ್ಲಿ ಅಪಾರ ಕಳಕಳಿಯುಳ್ಳವರು. ಅವರಲ್ಲಿರುವ ಕಳಕಳಿಯನ್ನು ಅವರ ಅನೇಕ ವಚನಗಳ ಮೂಲಕ ಅರಿಯಬಹುದು. ಮಂದಮತಿಗಳ ಅಂಧಶ್ರದ್ಧೆ ಕಂದಾಚಾರಗಳನ್ನು ತಿದ್ದಿ ತಿಳಿ ಹೇಳುವ ಡಂಭಾಚಾರಿಗಳ ಸೋಗನ್ನು ಬಯಲಿಗೆಳೆಯುವ, ಕೃತಕ ಭಕ್ತಿ ಆಚರಿಸುವವರಿಗೆ ನಿಜ ಭಕ್ತಿಯ ಮಾರ್ಗ ತೋರಿಸುವ, ಸಾಮಾಜಿಕರ ನಡೆನುಡಿಗೆ ಅಧ್ಯಾತ್ಮದ ಒಪ್ಪು ಕೊಡಲು ಹವಣಿಸುವ ವಿಚಾರಧಾರೆ ಅವರ ಸಾಕಷ್ಟು ವಚನಗಳಲ್ಲಿ ಹಾಸುಹೊಕ್ಕಾಗಿದೆ. ಸಾಮಾಜಿಕತೆಯನ್ನು ಸುಧಾರಿಸಿದಲ್ಲದೆ ಲೌಕಿಕತೆಯನ್ನು ಉದಾತ್ತೀಕರಿಸಿದಲ್ಲದೆ, ಪಾರಮಾರ್ಥಿಕತೆ ಮೈದೋರದೆಂಬ ಗಟ್ಟಿ ನಿಲುವು ಕಾಡಸಿದ್ಧರದು. ಅವರ ಖಂಡನೆ ವಿಡಂಬನೆಯಲ್ಲಿ ಬಿರುನುಡಿಯ ಕಠೋರತೆಯಲ್ಲಿ–ಸಾಮಾಜಿಕರನ್ನು ಎಚ್ಚರಿಸುವ ಧ್ಯೇಯವುಂಟಲ್ಲದೆ ಕಾಠಿಣ್ಯವಿಲ್ಲ. ತಂದೆ ಮಕ್ಕಳ ಮೇಲೆ ಅವರಲ್ಲಿಯ ಅಕ್ರಮ ನಡೆನುಡಿಗಾಗಿ ಗದರಿಸುವ ರೀತಿ ಕಾಡಸಿದ್ಧ ಯತಿಗಳದು! ಅವರು ವಿರಕ್ತರಾಗಿ ಜನಸಂಪರ್ಕದಿಂದ ದೂರವಿರುವ ಮನೋಧರ್ಮದವರಲ್ಲ. ಸಾಮಾಜಿಕರೊಂದಿಗೆ ಬೆರೆದು ಅವರನ್ನು ಅರ್ಥಮಾಡಿಕೊಂಡು, ಅವರನ್ನು ಮೇಲೆತ್ತಿ ಹಿಡಿಯಬೇಕೆಂಬ ಮನೋಧರ್ಮ ಕಾಡಸಿದ್ಧರದು. ಸಾಮಾಜಿಕರೊಂದಿಗಿನ ಒಡನಾಟದ ಪರಿಣಾಮವಾಗಿಯೇ, ಅವರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆಯೂ ಸಾಮಾಜಿಕರ ಬಗೆಗೆ ಕಳಕಳಿಯೂ ಒಡಮೂಡಿದೆ. ಯೋಗಿಯ ಅನುಭಾವ ಬರಿ ಆತ್ಮೋದ್ಧಾರಕ್ಕಲ್ಲದೆ ಲೋಕೋದ್ಧಾರಕ್ಕೆಂಬ ಸಮಷ್ಟಿಭಾವ ಈ ಶಿವಯೋಗಿಗಳದು! ಸಾಮಾಜಿಕರಿಗೆ ಅರ್ಥವಾಗುವಂಥ ಸರಳ ಭಾಷೆಯ ವಚನ ರಚನೆಯಲ್ಲಿಯೆ ಅವರ ಧ್ಯೇಯೋದ್ದೇಶದ ಕಲ್ಪನೆ ನಮಗೆ ಮನದಟ್ಟಾಗದಿರದು !!

# ೧೧.

# ಶ್ರೀ ವಿಜಯ ಮಹಾಂತ ಶಿವಯೋಗಿಗಳು

---

ಸಾಮಾಜಿಕ, ರಾಜಕೀಯ, ಧಾರ್ಮಿಕ ಮೊದಲಾದ ಕ್ಷೇತ್ರಗಳಲ್ಲಿ ಸಮತೋಲನ ತಪ್ಪಿ, ಜನಜೀವನದಲ್ಲಿ ಅಸಂತೋಷವುಂಟಾದ ಪರಿಣಾಮವಾಗಿ ಕ್ರಾಂತಿ ಉದ್ಭವಿಸುವುದುಂಟು. ಕಾಲ ಅಸಮತೋಲನವನ್ನು ಸಹಿಸಿಕೊಳ್ಳುವಂತಿಲ್ಲ. ಸಮತೋಲನ ಕಾಯ್ದುಕೊಳ್ಳುವ ಕಾಲದ ಉದ್ದೇಶವೆ ಕ್ರಾಂತಿಯಾಗಿ ಪರಿಣಮಿಸುತ್ತದೆ. ಕ್ರಿಸ್ತ, ಬುದ್ಧ, ಬಸವ, ಗಾಂಧೀಜಿಯವರಂಥ ಅಸಾಧಾರಣ ಶಕ್ತಿಯುಳ್ಳ ಮಹಾಪುರುಷರ ಮಾನವೀಯತೆಯ ಚೇತನದಲ್ಲಿ ಕಾಲದ ಆಶಯ ಪ್ರವೇಶಿಸಿ, ಕ್ರಾಂತಿಯನ್ನು ಹುಟ್ಟು ಹಾಕುತ್ತದೆ. ಭಾರತವನ್ನುಳಿದು ಬಹುಶಃ ಉಳಿದೆಲ್ಲ ದೇಶಗಳಲ್ಲಿ ಉದ್ಭವಿಸಿದ ಕ್ರಾಂತಿ ಸಾಮಾಜಿಕ, ರಾಜಕೀಯ ರಂಗಗಳಿಗೆ ಸೀಮಿತವಾಗಿರುತ್ತದೆ. ಆದರೆ ಭಾರತದಲ್ಲಿ ಎದ್ದ ಕ್ರಾಂತಿ (ಜಗತ್ತಿನಲ್ಲಿಯ ಎಲ್ಲ ಕ್ರಾಂತಿಗಳಿಗಿಂತ ಮಿಗಿಲಾದುದು. ಹಾಗು ವಿಶಿಷ್ಟವಾದುದು) ಸಾಮಾಜಿಕದೊಂದಿಗೆ ಧಾರ್ಮಿಕ ರಂಗಕ್ಕೆ ಸಂಬಂಧ ಪಟ್ಟಿರುತ್ತದೆ. ಆ ರೀತಿ ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಎದ್ದ ಕ್ರಾಂತಿ ಜಗತ್ತಿನಲ್ಲಿಯ ಎಲ್ಲ ಕ್ರಾಂತಿಗಳಿಗಿಂತ ಮಿಗಿಲಾದುದು ಹಾಗೂ ವಿಶಿಷ್ಟವಾದುದು. ಈ **ಬಸವ ಕ್ರಾಂತಿಯ ಪರಿಣಾಮವಾಗಿ** ಬಾಯಿಯಿದ್ದು ಬಾಯಿ ಕಳಕೊಂಡ ಸಾಮಾನ್ಯ ಜನರಲ್ಲಿ ಜಾಗೃತಿಯುಂಟಾಗಿ, ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಸಮಾನತೆಯ ಪುನಃಚೇತನವುಂಟಾಯಿತು. ಈ ಹೊಸ ವಿಚಾರದ ಹೊಸಗಾಳಿಯನ್ನು ಸನಾತನ ಧರ್ಮ ನಿರಂಕುಶ ಪ್ರವೃತ್ತಿ ಸಹಿಸಿಕೊಳ್ಳದೆ, ಹಲವಾರು ರೀತಿಯ ಕಂಟಕಗಳನ್ನು ಒಡ್ಡಿದ ಪರಿಣಾಮವಾಗಿ, ಈ ಬಸವಕ್ರಾಂತಿಗೆ ಕೆಲ ಕಾಲ ಆಪತ್ತು ಒದಗಿ ಬಂತು ಎಂದು ಹೇಳಬಹುದು. ಆಪತ್ತು ಆತಂಕಕಾರಿಯಹುದು. ಆದರೆ ಅದು ಏನು ಸಾವಲ್ಲ. ಆಗ ಅಡಗಿ ಹೋಯಿತೆಂದು ಅನ್ನಿಸಿದ ಆ ಕ್ರಾಂತಿವಾಹಿನಿ, ಗುಪ್ತಗಾಮಿನಿಯಾಗಿ, ಹೊಸ ಕಸುವನ್ನು ಮೈಗೂಡಿಸಿಕೊಂಡು ಮತ್ತೆ ಪ್ರಕಟವಾಯಿತೆಂಬುದನ್ನು ಮರೆಯಲಾಗದು. ೧೫ನೆಯ ಶತಮಾನದಲ್ಲಿಯ ತೋಂಟದ ಸಿದ್ಧಲಿಂಗ ಯತಿಗಳಿಂದ ಹಿಡಿದು, ಈ ವರೆಗೂ ವಚನ ರಚನೆ, ವಚನ ಸಂಶೋಧನೆ, ವಚನ ವಿಮರ್ಶೆ, ವಚನ ಸಂಪಾದನೆ, ವಚನ ವ್ಯಾಖ್ಯಾನ ಮೊದಲಾದ ಪ್ರಕ್ರಿಯೆ ಹರಿಗಡಿಯದೆ ನಡೆದಿರುವ ಸಂಗತಿಯೆ (ಇತಿಹಾಸವೆ)—**ಬಸವತತ್ವ ಬದುಕಿರುವುದಕ್ಕೆ ಸಾಕ್ಷಿಯಾಗಿದೆ.** ಅಷ್ಟೇ ಅಲ್ಲ. ಬಸವ ತತ್ವದಂತೆ ಬದುಕಿ ಹೋದ ಹಾಗೂ

ಈಗಲೂ ಬದುಕಿರುವಂಥ—ಶರಣೆ ಶರಣ ಶಿವಯೋಗಿಗಳ ಪ್ರತ್ಯಕ್ಷ ಚಾರಿತ್ರ್ಯವೇ ಪ್ರಮಾಣವಾಗಿದೆ. ಕಲಬುರ್ಗಿಯ ಶರಣಬಸವರು, ಅಥಣಿಯ ಶಿವಯೋಗಿಗಳು, ಮುರಗೋಡದ ಮಹಾಂತಜ್ಜನವರು, ಧಾರವಾಡದ ಮೃತ್ಯುಂಜಯಪ್ಪಗಳು. ಘನಮಠ ಶಿವಯೋಗಿಗಳು, ಚಿತ್ತರಗಿಯ ವಿಜಯಮಹಾಂತ ಶಿವಯೋಗಿಗಳು, ಮುಪ್ಪಿನ ಷಡಕ್ಷರಿಗಳು, ಹಾನಗಲ್ಲ ಕುಮಾರ ಸ್ವಾಮಿಗಳು, ನಾಲತವಾಡ ಶರಣರು, ಮಹಾಶರಣೆ ವೀರಮ್ಮ ತಾಯಿಯವರು, ಸಜ್ಜಲಗುಡ್ಡ ಶರಣಮ್ಮನವರು, ಡಾ॥ ಫ. ಗು. ಹಳಕಟ್ಟಿಯವರು, ಗತಿಸಿಹೋದ ಶರಣ ಶಿವಯೋಗಿಗಳವರು, ಭಾಲ್ಕಿಯ ಚನ್ನಬಸವ ಪಟ್ಟದ್ದೇವರು, ಇಲಕಲ್ಲಿನ ಮಹಾಂತ ಸ್ವಾಮೀಜಿಯವರು, ಗದುಗಿನ ಜಗದ್ಗುರು ಸಿದ್ಧಲಿಂಗ ಸ್ವಾಮೀಜಿಯವರು, ಚಿತ್ರದುರ್ಗದ ಜಗದ್ಗುರು ಶ್ರೀ ಶಿವಮೂರ್ತಿ ಸ್ವಾಮೀಜಿಯವರು– ಈಗಿರುವ ಮಹಾ ಸ್ವಾಮೀಜಿಯವರಿವರು.

**ಶ್ರೀ ವಿಜಯ ಮಹಾಂತ ಶಿವಯೋಗಿಗಳು** ಬಸವತತ್ವ ನಿಷ್ಠರಲ್ಲಿ ನಿಷ್ಠರು. ಶಾಲಿವಾಹನ ಶಕೆ ೧೭೭೨ ಸಾಧಾರಣನಾಮ ಸಂವತ್ಸರ, ಜೇಷ್ಠ ಬಹುಳ ಷಷ್ಠಿ (ಕ್ರಿ. ಶ. ೧೮೫೦) ರವಿವಾರ ಪುಣ್ಯಮಾಡಿ ಮೂಡಿ ಬಂದ ದಿನ : ಅಂದೇ ನಮ್ಮ ಚಿತ್ತರಗಿಯ ಪುಣ್ಯಪುರುಷ ಹುಟ್ಟಿಬಂದ ಶುಭದಿನ ! ಹೆಸರು ಮಳೆಯಪ್ಪಯ್ಯ ಹಡೆದ ತಾಯಿ ಗೌರಮ್ಮನವರು, ತಂದೆ ವೀರಯ್ಯನವರು, ಜನ್ಮಕೊಟ್ಟ ಕ್ಷೇತ್ರ (ಊರು) ಹಾಸನ ಜಿಲ್ಲೆಯ ಸಸಿವಾಳ. ನಿಡುವಳ್ಳಿಯ ಮರುಳಸಿದ್ಧ ಶಿವಯೋಗಿಗಳ ಆಶೀರ್ವಾದದ ಫಲವಾಗಿ ಮೂಡಿ ಬಂದ ಶಿವಯೋಗಿ ಈತ. ಸತಿಪತಿಗಳಿಬ್ಬರೂ ಅಷ್ಟಾವರಣದ ಆರಾಧಕರು, ಪಂಚಾಚಾರಶೀಲ ಸಂಪನ್ನರು, ಷಟ್‌ಸ್ಥಲದ ಸಾಧಕರು !

**ಸತಿಯ ಕಂಡು ವ್ರತಿಯಾದ ಬಸವಣ್ಣ**
**ವ್ರತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ**
**ಬ್ರಹ್ಮಚಾರಿಯಾಗಿ ಭವಗೆಟ್ಟೆನಯ್ಯಾ ಬಸವಣ್ಣ**
**ಗುಹೇಶ್ವರಾ, ನಿಮ್ಮಲ್ಲಿ ಬಾಲಬ್ರಹ್ಮಚಾರಿಯಾದವ**
**ಬಸವಣ್ಣನೊಬ್ಬನೆ ! (ಅ. ಪ್ರ. ೮೫೫)**

ಹೀಗೆ ಬಸವಣ್ಣನಂತೆ ಸಂಸಾರದಲ್ಲಿದ್ದೂ ಬ್ರಹ್ಮಚಾರಿಯಾದವರು ತಂದೆ ವೀರಯ್ಯ, ತಾಯಿ ಗೌರಮ್ಮನವರು. ಅಂಥ ವೀರ ವ್ರತದಿಂದ ವೀರ ವ್ರತಿಯೋಗಿ ಹುಟ್ಟಿ ಬಂದುದು ಸಹಜವೆ !

ಜ್ಞಾನಾರ್ಜನೆಯ ವಿಷಯದಲ್ಲಿ ಮಳೆಯಪ್ಪಯ್ಯ ನಿಜವಾಗಿ ಭಾಗ್ಯಶಾಲಿ, ಸದಾಚಾರಸಂಪನ್ನರಾದ ಬಸವಲಿಂಗ ಸ್ವಾಮಿಗಳಿಂದ ಆತನಿಗೆ ಅಕ್ಷರಜ್ಞಾನದಿಂದ ಹಿಡಿದು ಅಧ್ಯಾತ್ಮಜ್ಞಾನ ಸಹ ದೊರೆಯುತ್ತವೆ. ತಾಯಿಯಿಂದ ದೇವರು ಧರ್ಮ, ತಪಸ್ಸು ತಪಸ್ವಿ ಕುರಿತು ಪಾರಮಾರ್ಥ ಶಿಕ್ಷಣ ಲಭಿಸುತ್ತಿದೆ. 'ತಪಸ್ವಿ

ಎಲ್ಲಿ ಇರುತ್ತಾರೆ ?' ಎಂಬ ಮಳೆಯಪ್ಪನ ಪ್ರಶ್ನೆಗೆ 'ಕಲ್ಬೆಟ್ಟದಲ್ಲಿ ಇರುತ್ತಾರೆ'. ತಾಯಿ ಕೊಟ್ಟ ಉತ್ತರವೆ ಮಳೆಯಪ್ಪನಲ್ಲಿ ವೈರಾಗ್ಯ ಕ್ರಾಂತಿಗೆ ಕಾರಣವಾಗುತ್ತದೆ.

**"ಬರುವುದೇನುಂಟೊಮ್ಮೆ ಬರುವ ಕಾಲಕ್ಕೆ ಬಹುದು**
**ಬಯಕೆ ಬರುವುದರ ಕಣ್‌ಸನ್ನೆ ಕಾಣೊ !"**

ಮಧುರ ಚೆನ್ನರ ಭವಿಷ್ಯವಾಣಿ ಮಳೆಯಪ್ಪಯ್ಯನ ಭವಿಷ್ಯಕ್ಕೆ ಹಿಡಿದ ಕನ್ನಡಿಯಾಗಿದೆ, ಒಳಗಿನ ಹಂಬಲ ತುಂಬಿ ಬಂದಂತೆ ಮಳೆಯಪ್ಪಯ್ಯ ಕಲ್ಬೆಟ್ಟದತ್ತ ಧಾವಿಸುತ್ತಾನೆ. ಗೊತ್ತಿಲ್ಲದೆ ಹೋದ ಮಗನ ಅಗಲುವಿಕೆಯಿಂದ ತಂದೆಗೆ ನೋವಾಗುತ್ತದೆ. ತಾಯಿ ಕರುಳು ಕಸಿವಿಸಿಪಡುತ್ತದೆ. ಮಗನನ್ನು ಮರಳಿ ಮನೆಗೆ ಕರೆದೊಯ್ಯಲೆಂದು ಕಲ್ಬೆಟ್ಟಕ್ಕೆ ಬರುತ್ತಾರೆ. ಕಲ್ಬೆಟ್ಟದ ತಪೋವನದ ಪ್ರಶಾಂತ ವಾತಾವರಣದಿಂದ, ಹಾಗೂ ತಪಸ್ವಿಗಳ ಮಾಯಾವಿರಸನ ಬೋಧೆಯಿಂದ ತಾಯಿಯ ಕರುಳಕುದಿ ಶಾಂತವಾಗುತ್ತದೆ. 'ಯೋಗಿಯಾಗಿ ಜಗವ ಬೆಳಗಲಿರುವ ಮಗನನ್ನು ನಾವೇಕೆ ನಮ್ಮ ಸ್ವಾರ್ಥಕ್ಕಾಗಿ ಕಟ್ಟಿ ಹಾಕಬೇಕು ?' ಹೀಗೆ ತಾಯಿ ತಂದೆ ಸಮಯೋಚಿತ ನಿರ್ಧಾರಕ್ಕೆ ಬರುತ್ತಾರೆ. ಇಬ್ಬರೂ ಸಮಾಧಾನಚಿತ್ತದಿಂದ ಸಸಿವಾಳಕ್ಕೆ ತೆರುಳು ತ್ತಾರೆ. ಕಲ್ಬೆಟ್ಟವೇರುವಾಗ ಭಾರವಾಗಿದ್ದ ಮನಸ್ಸು ಮರಳಿ ಇಳಿದು ಬರುವಾಗ ಹಗುರವಾಗಿರುತ್ತದೆ !

ಬಸವಾದಿ ಪ್ರಮಥರ ವಚನಾಧ್ಯಯನ, ನಿಜಗುಣ ಶಿವಯೋಗಿಗಳ ಶಾಸ್ತ್ರಾಧ್ಯಯನ —ಮೊದಲಾದ ಪಾರಮಾರ್ಥ ಜ್ಞಾನವನ್ನು ಕರಗತ ಮಾಡಿ ಕೊಂಡರೂ ಮಳೆಯಪ್ಪಯ್ಯನಿಗೆ ತೃಪ್ತಿಯಿಲ್ಲ. ಸಂಸಾರಿಯ ಆಶೆ ಬೇರೆ, ತಪಸ್ವಿಯ ಆಶೆ ಬೇರೆ. ಒಂದು ಬಂಧನಕಾರಿಯಾದರೆ, ಇನ್ನೊಂದು ಮುಕ್ತಿಪ್ರಧಾನ ವಾಗಿದೆ ! ಮಳೆಯಪ್ಪಯ್ಯನ ಸಾತ್ವಿಕ ಅತೃಪ್ತಿ ಆತ್ಮೋನ್ನತಿಗೆ ಕಾರಣವಾಗುತ್ತದೆ. **ಬಳ್ಳಾರಿಯ ಶರಣ ಸಕ್ಕರಿ ಕರಡೆಪ್ಪನವರು** ನಡೆಸುವ ಸಂಸ್ಕೃತ ಪಾಠಶಾಲೆ— ಅಧ್ಯಾತ್ಮ ಜ್ಞಾನ ಭಂಡಾರಕ್ಕೆ ಕೇಂದ್ರವಾಗಿದೆ.

ಈ ಸಂಗತಿ ತಿಳಿಯುವುದೊಂದೇ ತಡ, ಕಲ್ಬೆಟ್ಟದ ತಪಸ್ವಿಗಳಿಗೆ ಪೊಡಮಟ್ಟು, ಅವರ ಆಶೀರ್ವಾದ ಹೊತ್ತು, ಮಳೆಯಪ್ಪಯ್ಯ ಬಳ್ಳಾರಿಗೆ ಹೋಗುತ್ತಾನೆ. ಬಳ್ಳಾರಿಗೆ ತೀರ ಸನಿಹದಲ್ಲಿರುವ ಫಲಭರಿತ ತೋಟ – ಮಳೆಯಪ್ಪನ ಮನಸ್ಸು ಸೂರೆಗೊಳ್ಳುತ್ತದೆ. ಮಜ್ಜನ, ಪೂಜನ, ಧ್ಯಾನ, ಅಧ್ಯಯನಗಳಿಗೆ ಹೇಳಿ ಮಾಡಿಸಿ ದಂತಹ ಜಾಗ. ಮಳೆಯಪ್ಪಯ್ಯನಿಗೆ ಬೇಕಾದುದು, ತೋಟದ ಒಡೆಯನಿಗೂ ಬೇಕಾದುದು ಒಂದೆ. ಮಳೆಯಪ್ಪನ ವೈರಾಗ್ಯಭರಿತ ವ್ಯಕ್ತಿತ್ವಕ್ಕೆ, ಲಿಂಗಕಳೆಯಿಂದ ಬೆಳಗುವ ಮುಖಮಂಡಲಕ್ಕೆ ಪ್ರಭಾವಿತನಾದ ಯಜಮಾನ ತನ್ನ ತೋಟದಲ್ಲಿಯೆ ನೆಲೆಸಬೇಕೆಂದು ಪ್ರಾರ್ಥಿಸುತ್ತಾನೆ. ಆಯಿತು, ಅಂದಿನಿಂದ ಅದುವೇ ಮಳೆಯಪ್ಪಯ್ಯ ನಿಗೆ ಬೀಡಾಗುತ್ತದೆ. ಈ ಯಜಮಾನನಂತೆ ಸಕ್ಕರಿ ಕರಡೆಪ್ಪನವರೂ

ಮಳೆಯಪ್ಪಯ್ಯನ ಶಿವಲಕ್ಷಣಕ್ಕೆ ಬೆರಗಾಗಿ ನಿಲ್ಲುತ್ತಾರೆ. ಕಂಡೊಡನೆ ಕಾಲಿಗೆರಗುತ್ತಾರೆ. ಇಂಥ ತರುಣ ತಪಸ್ವಿ ತಮ್ಮ ಪಾಠಶಾಲೆಗೆ ವಿದ್ಯಾರ್ಥಿಯಾಗಿ ಬಂದದ್ದು ತಮ್ಮ ಭಾಗ್ಯವೆಂದು ಭಾವಿಸುತ್ತಾರೆ. ಅಂದಿನಿಂದ ತಪಸ್ವಿಯ ಅಧ್ಯಯನ ಆರಂಭವಾಗುತ್ತದೆ. ಕರಡೆಪ್ಪನವರ ಸಂಸ್ಕೃತ ಪಾಠಶಾಲೆ ಪುಟ್ಟ ಸಂಸ್ಕೃತ ವಿಶ್ವವಿದ್ಯಾಲಯದಂತಿದ್ದು– ವೇದಾಗಮ, ಉಪನಿಷತ್ತು, ತರ್ಕ, ವ್ಯಾಕರಣ, ಕಾವ್ಯಾಲಂಕಾರ, ಜ್ಞಾನಾರ್ಜನೆಗೆ ಅಗತ್ಯವಾದುದೆಲ್ಲವೂ ಅಲ್ಲಿತ್ತು. ಅಲ್ಲಿ ಒಂದೊಂದು ವಿಷಯವನ್ನು ಬೋಧಿಸುವ ಆಚಾರ್ಯರೂ, ವಿಶೇಷ ಪರಿಣತಿ ಪಡೆದವರಾಗಿದ್ದರು. ಹಸಿದು ಬಂದ ತಪಸ್ವಿಗೆ ಬಯಸಿದಷ್ಟು ಜ್ಞಾನನಿಧಿ, ತಣಿದಷ್ಟು ತೃಪ್ತಿಯ ಆಗರ !

ಈ ತಪಸ್ವಿಯೇ ನಿತ್ಯ ಸೂರ್ಯನನ್ನು ಎಚ್ಚರಿಸಬೇಕು. ಬೆಳಗಿನಲ್ಲಿಯೆ ಮಜ್ಜನ, ಲಿಂಗಪೂಜನ, ಅಧ್ಯಯನ ಪೂರ್ತಿಗೊಳ್ಳುತ್ತವೆ. ಆ ಮೇಲೆ ಪ್ರಸಾದ. ಸಮಯಕ್ಕೆ ನಾಲ್ಕು ಮನೆಗೆ ಭಿಕ್ಷಾಟನೆ, ಒಂದು ಹೊತ್ತು ಪ್ರಸಾದ, ತ್ರಿಕಾಲ ಸ್ನಾನ. ತ್ರಿಕಾಲ ಧ್ಯಾನ, ಭಿಕ್ಷೆಯೊಂದು ಪರಾವಲಂಬನವೆನಿಸಿದರೂ, ಒಳಗಿನ ಶಿವಕ್ಕಾಗಿ ! ಶಿವನೆ ಭಿಕ್ಷಾರ್ಥಿಯಾಗಿರುವಾಗ, ಶಿವಪೂಜಕನೇಕೆ ಸಂಕೋಚಪಡಬೇಕು. ಕೂಸು ಬೆಳೆಯುವ ಮುನ್ನ ಪರಾವಲಂಬಿ, ಬೆಳೆದ ಮೇಲೆ ಲೋಕೋಪಕಾರಿ ! ಬೋಧನೆಯ ಕಾರ್ಯಕ್ರಮಕ್ಕನುಗುಣವಾಗಿ ಸಮಯೋಚಿತವಾಗಿ ಪಾಠಶಾಲೆಗೆ ಹೋಗುವುದು. ಮೈಮನವೆಲ್ಲ ಕಿವಿಯಾಗಿ ಕೇಳುವುದು, ಮನನ ಮಾಡುವುದು. ಏನನ್ನು ಮಾಡಿದರೂ, ಸತ್ಯಶುದ್ಧ ತನ್ಮಯತೆಯಿಂದ ಮಾಡಿದರೆ, ಅದು ಕಾಯಕವಾಗುತ್ತದೆ. ಜ್ಞಾನಾರ್ಜನೆಯಂಥ ಶ್ರೇಷ್ಠ **ಕಾಯಕ** ಇನ್ನಾವುದಿದೆ ! ಲೋಕದಿಂದ ಪಡೆದುದನ್ನು ಮರಳಿ ಲೋಕಕ್ಕೆ ಅರ್ಪಿಸುವಂಥ **ದಾಸೋಹ** ಬೇರೆ ಯಾವುದಿದೆ !! ಈ ತಪಸ್ವಿ ಜ್ಞಾನಾರ್ಜನೆಗಾಗಿ ಶ್ರಮಿಸುವಲ್ಲಿ ಕಾಯಕನಿಷ್ಠನಾಗುತ್ತಾನೆ. ತಾನು ಪಡೆದ ಜ್ಞಾನವನ್ನು ಲೋಕಕ್ಕೆ ಕೊಡುವಲ್ಲಿ ಮುಂದೆ ದಾಸೋಹಿಯಾಗುತ್ತಾನೆ, ಬಸವ ದಾಸೋಹ ತತ್ವಕ್ಕೆ ಪ್ರಭಾವಿತನಾಗಿ, ತಾನೂ ದಾಸೋಹಿಯಾಗಿ ಕೃತಾರ್ಥನಾಗಬೇಕೆಂಬ ಹಂಬಲದಿಂದಲೆ ಜ್ಞಾನ ಸಂಪಾದನೆ ಮಾಡುತ್ತಾನೆ.

ಇಂಥ ವಿದ್ಯಾರ್ಥಿ ತಪಸ್ವಿ ಭಿಕ್ಷಾಟನೆ ಮಾಡುತ್ತಿರುವ ಸಂಗತಿ ಕರಡೆಪ್ಪನವರಿಗೆ ಒಂದು ಚಿಂತೆಯ ವಿಷಯವಾಗುತ್ತದೆ. ತಮ್ಮಲ್ಲಿಯೇ ನೆಲಸಿ ಪ್ರಸಾದ ಸೇವಿಸಬೇಕೆಂದು ಬಿನ್ನವಿಸಿ, ಹಾಗೆ ತಪಸ್ವಿಯನ್ನು ಒಪ್ಪಿಸುವಲ್ಲಿ ಕರಡೆಪ್ಪ ಶರಣರಿಗೆ ಬೆಟ್ಟ ಹೊತ್ತು ಇಳುಹಿದಷ್ಟು ಪ್ರಯಾಸವಾಗುತ್ತದೆ. ಸದುವಿನಯದ ಮನವಿಗೆ ಶಿವನೂ ಹೂಂಗೊಡಬೇಕಾಗುತ್ತದೆ. ಶಿವನಾಗಲಿರುವ ಈ ಶಿವಯೋಗಿ ಕರಡೆಪ್ಪನವರ ಮನವಿಗೆ ಮನ್ನಣೆ ನೀಡಬೇಕಾಗುತ್ತದೆ. ಅಂದಿನಿಂದ ಶಿವಯೋಗಿಗೆ ಕರಡೆಪ್ಪನವರಲ್ಲಿಯೆ ವಾಸ್ತವ್ಯ. ಪ್ರಸಾದ, ಅಧ್ಯಯನ ಕೆಲ ವರ್ಷಗಳಲ್ಲಿ ಜ್ಞಾನ ಜೀವನದಲ್ಲಿ ತಪಸ್ವಿ ನಿಷ್ಪತ್ತಿ ಹೊಂದುತ್ತಾನೆ. ತೊಟ್ಟು ಕಳಚಿ ಬೀಳಲಿರುವ ಈ ಜ್ಞಾನ

ಪುಷ್ಪವನ್ನು ಯಾರಿಗೆ ಅರ್ಪಿಸಬೇಕೆಂದು ಮನದೊಳಗೆ ಚಿಂತನ ಮಾಡುತ್ತಾರೆ ಕರಡೆಪ್ಪನವರು. ಗುರು ಮಹಾಂತ ಸ್ವಾಮಿಗಳು ಲಿಂಗೈಕ್ಯರಾದುದರಿಂದ ಚಿತ್ತರಗಿಯು ಪೂಜ್ಯ ಪೀಠ ತೆರವಾಗಿರುತ್ತದೆ.

ಸುರಪುರದ ವೆಂಕಪ್ಪನಾಯಕ. ಡೆಪ್ಯುಟಿ ಕಮಿಶನರ್ ಬುಲರ್ ಸಾಹೇಬರು, ಈಷ್ಟ ಇಂಡಿಯಾ ಕಂಪನಿಯ ಬಾಲ್ಮಿನ್ ಸೇನಾಪತಿ, ಅಮರಾವತಿ ದೇಸಾಯಿ ರಾಮಪ್ಪನವರು–ಮೊದಲಾದ ಅಸಾಮಾನ್ಯರೂ ಸಾಮಾನ್ಯರೂ ಈ ಪೀಠಕ್ಕೆ ನಡೆದುಕೊಳ್ಳುವಂಥ ಭಕ್ತರು, ಅರವತ್ತಾಲ್ಕಕ್ಕಿಂತಲೂ ಹೆಚ್ಚು ಮಠಗಳನ್ನು ಹೊಂದಿದ ಈ ಚಿತ್ತರಗಿ ಪೀಠದ ಮಹಾಸ್ಥಾನ ತುಂಬಲು ಒಬ್ಬ ಯೋಗ್ಯ ತಪಸ್ವಿಯನ್ನು ಹುಡುಕುತ್ತ ರಾಮಪ್ಪ ದೇಸಾಯಿಯವರು ಕರಡೆಪ್ಪನವರ ಕಡೆಗೆ ಬರುತ್ತಾರೆ. ಅವರು ಚಿತ್ತರಗಿ ಪೀಠಕ್ಕೆ ಈ ತರುಣ ತಪಸ್ವಿಯನ್ನು ತರಬೇಕೆಂದು ಕರಡೆಪ್ಪನವರ ಮೂಲಕ ಶತಪ್ರಯತ್ನ ಮಾಡುತ್ತಾರೆ. ತಮ್ಮಲ್ಲಿ ಪ್ರಸಾದ ಸೇವಿಸಲು ತಪಸ್ವಿಯನ್ನು ಒಪ್ಪಿಸುವಲ್ಲಿ ಗೆದ್ದ ಕರಡೆಪ್ಪನವರು ಈ ವಿಷಯದಲ್ಲಿ ಸೋಲುತ್ತಾರೆ. **ವೈರಾಗ್ಯಕ್ಕೆ ಅಧಿಕಾರದ ವ್ಯಾಮೋಹ ಸಲ್ಲದು. ಅಧಿಕಾರ ವ್ಯಾಮೋಹವಿದ್ದಲ್ಲಿ ವೈರಾಗ್ಯ ನಿಲ್ಲದು.** ಇದು ಶಿವಯೋಗಿಯ ದೃಢವಾದ ನಿಲುಮೆ. ಈ ನಿಲುಮೆಯಿಂದಾಗಿ ದೇಸಾಯಿಯವರಿಗೂ ಕರಡೆಪ್ಪನವರಿಗೂ ಚಿತ್ತರಗಿ–ಇಳಕಲ್ ಭಕ್ತರಿಗೂ ನಿರಾಶೆಯಾಗುತ್ತದೆ.

ಜಿಜ್ಞಾಸೆಯುಳ್ಳವನಿಗೆ ಜ್ಞಾನದ ಹಸಿವೆ ಹಿಂಗುವುದಿಲ್ಲ. ಹೆಚ್ಚಿನ ಅಧ್ಯಯನಕ್ಕಾಗಿ ನರೇಗಲ್ಲಿನ ಶಿವಬಸವ ಶಾಸ್ತ್ರಿಗಳಲ್ಲಿಗೆ ಈ ತಪಸ್ವಿ ತೆರಳುತ್ತಾನೆ. ಅಲ್ಲಿ ವ್ಯಾಸಂಗವೇನೋ ಸರಾಗವಾಗಿ ಸಾಗುತ್ತದೆ. ಆದರೆ ಮನುಷ್ಯ ಲೆಕ್ಕ ಹಾಕಿದಂತೆ ಎಲ್ಲವೂ ನಡೆಯುವುದಿಲ್ಲ. ತಪ್ಪಿದ್ದನ್ನು ಯಾವುದೇ ಒಂದು ಕಾಣದ ಕೈ ತಿದ್ದುತ್ತದೆ. ಅತ್ತ ಕರಡೆಪ್ಪನವರು ಮಹಾಲಿಂಗದೊಳಗೆ ಬಯಲಾಗುತ್ತಾರೆ. ಇತ್ತ ಶಿವಯೋಗಿಗೆ ಬಹಿರ್ದೆಸೆ ಪ್ರಾರಂಭವಾಗುತ್ತದೆ. ಯಾವ ಮದ್ದಿಗೂ ಅದು ಹಣಿಯಲಿಲ್ಲ. ಯಾವ ಬವಣೆ ಬಳಲಿಕೆಗೂ ಶಿವಯೋಗಿ ಮಣಿಯಲಿಲ್ಲ. ತ್ರಿಕಾಲ ಸ್ನಾನ, ತ್ರಿಕಾಲ ಅರ್ಚನ ತಪ್ಪದೆ ನಡೆಯುತ್ತದೆ. ತಪಸ್ವಿಯ ನೇಮ ನಿಷ್ಠೆಗೆ ಸಂಯಮ ಇರಬಹುದು. ಚಿತ್ರಹಿಂಸೆ ಪಟ್ಟ ಶರೀರಕ್ಕೆ ಸಂಯಮವಿಲ್ಲ. ಒಳಗಿನ ಒಳದನಿಯೊಂದು ತಪಸ್ವಿಯನ್ನು ಎಚ್ಚರಿಸುತ್ತದೆ. ತಂದೆಯಂತಿದ್ದ ಕರಡೆಪ್ಪನವರ ಸದಿಚ್ಛೆಯನ್ನು ನಿರಾಕರಿಸಿ, ಅವರನ್ನು ನೋಯಿಸಿರುವುದಕ್ಕೆ ತಪಸ್ವಿಯ ಕರುಳು ಕಸಿವಿಸಿಗೊಳ್ಳುತ್ತದೆ. ಚಿತ್ತರಗಿ ಪೀಠಾಧಿಕಾರ ವಹಿಸಿಕೊಳ್ಳಲು ನಿರ್ಧರಿಸುತ್ತಾನೆ. ಶಿವಯೋಗಿಯ ಬದಲಾದ ನಿರ್ಧಾರದಿಂದ ಮಹಾಲಿಂಗದೊಳಗಾಗಿದ್ದ ಕರಡೆಪ್ಪನವರ ಆತ್ಮಕ್ಕೆ ಶಾಂತಿ ಲಭಿಸುತ್ತದೆ.

ಈ ಶುಭ ಸಂಗತಿ ರಾಮಪ್ಪ ದೇಸಾಯಿಯವರಿಗೂ ಐವತ್ತಾರು ಮಠಗಳ ಭಕ್ತರಿಗೂ ಕಳೆದುಕೊಂಡ ಮಹಾ ವಸ್ತುವನ್ನು ಮರಳಿ ಪಡೆದಷ್ಟು ಸಂತೋಷ

ವಾಗುತ್ತದೆ. ಆ ರೀತಿ ಶಾಲಿವಾಹನ ಶಕೆ ೧೮೨೧ ಪ್ರಮಾಥಿನಾಮ ಸಂವತ್ಸರ ವೈಶಾಖ ಶುದ್ಧ ೧೪ ಸೋಮವಾರ ಮಳೆಯಪ್ಪಯ್ಯನು ಚಿತ್ತರಗಿಯ ಪೀಠಾರೋಹಣ ಮಾಡಿ, ವಿಜಯ ಮಹಾಂತ ಶಿವಯೋಗಿಯೆನಿಸುತ್ತಾರೆ. ಸಂಭ್ರಮದಿಂದ ಜರುಗಿದ ಈ ಪೀಠಾರೋಹಣ ಸಮಾರಂಭ ಸುತ್ತಣ ಜನಕೋಟಿಗೆ ಹರ್ಷವನ್ನುಂಟು ಮಾಡುತ್ತದೆ ! ಈ ವರೆಗೆ ಸಾಧಕನಾಗಿ ಗುರುಲಿಂಗ ಸೇವೆ ಮಾಡಿ ಆತ್ಮೋನ್ನತಿಯನ್ನು ಸಾಧಿಸಿಕೊಂಡ ಮಳೆಯಪ್ಪಯ್ಯ ಮಹಾ ಪೀಠವೇರಿ ಜಂಗಮ ದಾಸೋಹ (ಸಕಲ ವಿಸ್ತಾರದ ಜೀವ ಕುಲದ) ಸೇವೆ ಮಾಡಲು ಅಣಿಯಾಗಿ ನಿಲ್ಲುತ್ತಾನೆ. ಆದರಿಂದಾಗಿ ಸಾಧಕ ಮಳೆಯಪ್ಪಯ್ಯ ನಿಜ ಶಿವಯೋಗಿಯಾಗಿ ಬೆಳಗುತ್ತಾರೆ ! ವಿಜಯ ಮಹಾಂತ ಶಿವಯೋಗಿಗಳ ಚಾರಿತ್ರ್ಯವನ್ನು ಕೆಲವು ಶಬ್ದಗಳಲ್ಲಿ ಚಿತ್ರಿಸುವುದು ಸಾಧ್ಯವಿಲ್ಲ. ನಿಶ್ಶಬ್ದಯೋಗಿಯ ಮಹಿಮೆಯನ್ನು ಶಬ್ದ ಬಣ್ಣಿಸಲರಿಯದು ! ಸ್ವಾಮಿಯಾಗಿ (ಕರಣೇಂದ್ರಿಯ ಮೇಲೆ) ಸ್ವಾಮಿತ್ವ ಪಡೆದವರು ನಿಷ್ಠುರ ನೇಮ ನಿಷ್ಠೆಯಿಂದ ತಪಸ್ವಿಯಾದವರು, ಜಿಜ್ಞಾಸು ಆಗಿ ಸಕಲ ಪಾರಮಾರ್ಥ ಭಂಡಾರಕ್ಕೆ ಒಡೆಯರಾದವರು, ಷಟ್‌ಸ್ಥಲ ಸಿದ್ಧಾಂತ ಆಚರಣೆಯಿಂದ ಶಿವಯೋಗಿಯಾದವರು. ಅವರ ಎಲ್ಲ ಆಚಾರ ವಿಚಾರಕ್ಕೂ ಬಸವ ತತ್ವವೇ ನೆಲಗಟ್ಟಾಗಿರುತ್ತದೆ ! ಅವರ ವಿರಾಟ್ ಬದುಕಿನಲ್ಲಿಯ ಕೆಲವು ಮಹತ್ವದ ಘಟನೆಗಳನ್ನು ಮಾತ್ರ ನಾನು ನಿವೇದಿಸ ಬಯಸುತ್ತೇನೆ.

ಒಮ್ಮೆ ಒಬ್ಬ ತಾಯಿ ತಾನು ತಂದಂಥ ಬುತ್ತಿರೊಟ್ಟಿಯನ್ನು ಎಡೆ ಮಾಡಿ ಅಲ್ಲಿ ಮಜ್ಜನ ಮಾಡಿ ನಿಂತ ಶಿವಯೋಗಿಗಳಿಗೆ ಭಕ್ತಿಯಿಂದ ಅರ್ಪಿಸುತ್ತಾಳೆ. ಘಮಘಮಿಸುವ ಕರಚಿಕಾಯಿ, ಸಜ್ಜಿರೊಟ್ಟಿ, ತರತರದ ಪದಾರ್ಥಗಳಿಂದ ಅವರು ಆರಿಸಿಕೊಂಡದ್ದು ಕೇವಲ ಒಂದು ಸವತೆಕಾಯಿಯನ್ನು. ಚಪಲಕ್ಕೆ ಕಾರಣವಾದುದು ಅಂಗಭೋಗ, ಚಪಲರಹಿತವಾದುದು ಲಿಂಗಭೋಗ ! ಲಿಂಗಾನುಸಂಧಾನಿ ಅಂಗ ದಿಚ್ಛೆಗೆ ಮನಸೋಲುವವನಲ್ಲ.

**ಮಠವು ಸ್ವಾಮಿಗಳದೆಂದು ಭಾವಿಸುವವರೇ ಬಹಳ. ಆದರೆ, ಅದು ಸಕಲ ಭಕ್ತರಿಗೆ ಸೇರಿದ್ದು.** ಅವರ ದುಃಖ ದುಮ್ಮಾನ, ಕುಂದು ಕೊರತೆಗಳನ್ನು ಕಳೆಯುವುದಕ್ಕಾಗಿ, ಅವರಿಗೆ ಸನ್ಮಾರ್ಗ ತೋರುವುದಕ್ಕಾಗಿ. ಅದಕ್ಕಾಗಿ ಸ್ವಾಮಿತ್ವವುಳ್ಳ ಸ್ವಾಮಿಗಳಿಗೆ ಪೀಠಾಧಿಕಾರ ! ಮಠವೆಂಬುದು **ಜಂಗಮ ಪೀಠ,** ಮಠಾಧಿಪತಿ ಜಂಗಮ. ಸಕಲ ಜೀವಾತ್ಮರ ಲೇಸ ಬಯಸುವಾತನೆ ನಿಜ **ಜಂಗಮ.** ಹೀಗೆ ಮಹಾಂತ ಶಿವಯೋಗಿಗಳು ಜಂಗಮರಾಗಿ ಜಂಗಮ ಪೀಠವನ್ನು ಸಕಲ ಜೀವ ಕುಲದ ಸರ್ವೋನ್ನತಿಗಾಗಿ ಉಪಯೋಗಿಸುತ್ತಾರೆ. ನಿರಾಳಜೀವಿ ಮರುಳ ಮಹಿಮೆಗೆ ಒಳಗಾಗುವವನಲ್ಲ !

ಅವರು ಭಕ್ತರಿಗೆ ಕೇಳಿದ್ದುಂಟು – ತಮಗಾಗಿ ಅಲ್ಲ, ಮಠಕ್ಕಾಗಿ ಮಠದ ಜೀರ್ಣೋದ್ಧಾರಕ್ಕಾಗಿ. ಎಲ್ಲವಳಿದ ಸನ್ಯಾಸಿಗೇನು ಬೇಕು! ಚಿತ್ತರಗಿ ಪೀಠ ಹಲವಾರು ಮಠಗಳನ್ನು ಹೊಂದಿದ ಮಹಾಮಠ, ಶಿವಯೋಗಿಗಳು ಈ ಎಲ್ಲ ಮಠಗಳಿಗೆ ಆಗಾಗ ಹೋಗುತ್ತಾರೆ. ಜೀರ್ಣವಾದುದನ್ನು ದುರಸ್ತಿಮಾಡಲು ಗಮನ ಹರಿಸುತ್ತಾರೆ. ಹುನಗುಂದ ಮಠವಿರಲಿ, ಚಿತ್ತರಗಿ ಮಠವಿರಲಿ, ಮತ್ತಾವುದೇ ಇರಲಿ–ಯಾವ ಮಠವೂ ಅವರ ಕಾಳಜಿಯಿಂದ ಹೊರತಾದುದಲ್ಲ. ಈ ಕಾಳಜಿಯೇ ಭಕ್ತರಿಗೆ ಬಾಯಿ ತೆರೆದದ್ದುಂಟು, ಒಂದು ಕಲ್ಲು, ಪರಸಿ, ತೊಲೆಕಂಬ— ಅಗತ್ಯವಾದುದನ್ನು ಕೇಳಿದ್ದುಂಟು. ಪುಕ್ಕಟೆಯಾಗಿ ಅಲ್ಲ. ಕಡಾ ರೀತಿಯಲ್ಲ. ಅಥವಾ ಯೋಗ್ಯಧಾರಣೆಯಲ್ಲಿ. ಒಮ್ಮೊಮ್ಮೆ ಜೋಳ–ಕಾಳು–ಕಡಿ ಭಿಕ್ಷಾಟನಾರ್ಥವಾಗಿ ಊರೂರು ಸಂಚರಿಸುತ್ತಾರೆ. ಬರಿ ಧ್ಯಾನ, ಯೋಗದಲ್ಲಿ ಸಂತೋಷಪಡುತ್ತಲಿದ್ದ ಶಿವಯೋಗಿ ಲೋಕದ ಯೋಗಕ್ಷೇಮದಲ್ಲಿ ಸಂತೋಷಪಡುತ್ತಾರೆ. ಜಂಗಮದಾಸೋಹಿಗೆ ಎಂಥ ಶ್ರಮವೂ ಭಾರವೆನಿಸುವುದಿಲ್ಲ. ಶಿವಯೋಗಿಗಳ ಕೇಳಿಕೆಗೆ ಮನ್ನಣೆಯಿತ್ತು ಭಕ್ತಿಯಿಂದ ಕೊಟ್ಟವರು ವಂಶಾನುವಂಶ ಉದ್ಧಾರವಾಗುತ್ತಾರೆ. ಕೊಡದೆ ಇದಿರುತ್ತರ ಕೊಟ್ಟವರೂ ಉಂಟು. ಸ್ವಾರ್ಥ ಲೋಭದ ಕಣ್ಣಿಗೆ ನಿರಾಕರಣೆ ತಪ್ಪಾಗಿ ತೋರುವುದಿಲ್ಲ. ಒಬ್ಬ ಶಿವಯೋಗಿಗಳ ಕೋರಿಕೆಯನ್ನು, ವ್ಯಕ್ತಿಯಾಗಿ (ತಮ್ಮನ್ನು ಕಾಯುವ) ಮಠದಂಥ ಸಂಸ್ಥೆಗೆ ಅಗತ್ಯವಾದುದನ್ನು ನಿರಾಕರಿಸಿದ್ದು ಜಂಗಮದಾಸೋಹ ತತ್ವವನ್ನು ನಿರಾಕರಿಸಿದಂತೆ. ಅವರ ಜಡ ಬುದ್ಧಿಗೆ ಹೊಳೆಯದ ಪ್ರಮಾಣ ಅವರಿಗೆ ಹಾನಿಯನ್ನುಂಟು ಮಾಡಿ ಬುದ್ಧಿ ಕಲಿಸುತ್ತದೆ. ಹೀಗೆ ನಿರಾಕರಿಸಿದವರು ಪೆಟ್ಟುತಿಂದವರೂ, ಪ್ರಾಣ ಕಳಕೊಂಡವರೂ ಉಂಟು. ಲೋಕದ ದೃಷ್ಟಿಯಲ್ಲಿ ಅದು ಶಾಪವೆನಿಸಬಹುದು. ಆದರೆ ಅದು ಜಗನ್ನಿಯಾಮಕನ ಸದಿಚ್ಛೆಗೆ ವ್ಯತಿರಿಕ್ತವಾದ ಅಸಭ್ಯ ವರ್ತನೆಯ **ಪ್ರತಿಕ್ರಿಯೆಯಲ್ಲದೆ ಶಾಪವಲ್ಲ;** ಆದರೆ, ಪಶ್ಚಾತ್ತಾಪಪಟ್ಟು ಶಿವಯೋಗಿಗಳಿಗೆ ಶರಣು ಬಂದವರು ಕ್ಷೇಮದಿಂದ ಬದುಕಿದವರೂ ಉಂಟು.

ಬೇನೆಯಿಂದ ನವೆದು ನವೆದು ಸಾಯುವ ಜೀವಿಗಳನ್ನು ಈ ಮಹಾತ್ಮರು ಬದುಕಿಸಿದ್ದೂ ಉಂಟು. ವಿಷಯಲಂಪಟರನ್ನು ನಿರ್ವಿಷಯರನ್ನಾಗಿ ಸದಾಚಾರಿಗಳನ್ನಾಗಿ ಪರಿವರ್ತಿಸಿದ್ದೂ ಉಂಟು. ಮಠದ ಹಣದಿಂದಲೆ ಬಡಬಗ್ಗರ ಸಾಲ ಶೂಲವನ್ನು ನಿವಾರಿಸಿ ಅವರ ಬದುಕಿಗೊಂದು ಭದ್ರ ಆಧಾರ ಕಲ್ಪಿಸಿದ್ದೂ ಉಂಟು. ಘನಮಠ ಶಿವಯೋಗಿಗಳು ಬಸವಪುರಾಣ ಹೇಳಿರುವುದರ ಸ್ಮರಣಾರ್ಥವಾಗಿ ಒಣಗಿದ ಬೇವಿನ ಮರಕ್ಕೆ ಬಸವಧ್ವಜ ಕಟ್ಟಿದ್ದು—ಸಾಮಾಜಿಕದಲ್ಲಿ ಶಿವಯೋಗಿಗಳ ಬಗೆಗೆ ಅಪಾರ್ಥವಾದದ್ದೂ ಉಂಟು. ಆದರೆ, ಆ ಒಣಗಿ ಬೋಳಾದ ಮರ ಮತ್ತೆ ಚಿಗುರಿ ಹಸಿರೆಲೆಗಳಿಂದ ನಳನಳಿಸಿ ಕಣ್ತುಂಬುವಂತಾಯಿತು. ಆ ಮೇಲೆ ಅದು

ಸಾಮಾಜಿಕರಿಗೆ ಪವಾಡವೆನಿಸಿತು. ಸತ್ತವರು ಬದುಕಿದ್ದಾಗಲಿ, ಮೋಟುಮರ ಮತ್ತೆ ಜೀವತುಂಬಿ ಬೆಳೆದದ್ದಾಗಲಿ—ಶಿವಯೋಗಿಗಳ ಶಿವಯೋಗ ಶಕ್ತಿಯಿಂದ ಸ್ಫುರಿಸಿ ಬಂದ ಅಂತಃಕರಣದ ಪರಿಣಾಮವಲ್ಲದೆ **ಪವಾಡವಲ್ಲ.** ವಿಜ್ಞಾನಕ್ಕೆ ಯೋಗಶಕ್ತಿಯ ಮರ್ಮ ತಿಳಿಯಲಿಕ್ಕಿಲ್ಲ. ಆದರೆ ಯೋಗಶಕ್ತಿಗೆ ವಿಜ್ಞಾನದ ರಹಸ್ಯ ಮೀರಿದ್ದಲ್ಲ !

ಈಗಿನ (Social Service) ಸಾಮಾಜಿಕ ಸೇವೆಯ ದೃಷ್ಟಿಯಿಂದ ಶಿವಯೋಗಿಗಳ ಸಾಧನೆಯನ್ನು ಅಳೆಯುವಂತಿಲ್ಲ. ಹಾಗೆ ಮಾಡುವುದೂ ತಪ್ಪು. ಇಂದಿನ ಸೇವೆ ವಿಸ್ತಾರ ದೃಷ್ಟಿಯಿಂದ ಆ ಮಹಿಮರ ಕಾರ್ಯ, ಸಣ್ಣಪುಟ್ಟವೆನಿಸಬಹುದು. ಆದರೆ, ಇಂದಿನ ಸೇವಾ ಕಾರ್ಯಗಳಲ್ಲಿ ಸ್ವಾರ್ಥ ಲೋಭವೆಷ್ಟು ! ಜಗತ್‌ಕಲ್ಯಾಣ ಸಾಧಿಸಿದ್ದೆಷ್ಟು ! ವಿಮರ್ಶೆ ಮಾಡಿದಲ್ಲಿ ಸಾಧಿಸಿದ ಕಲ್ಯಾಣಕ್ಕಿಂತ ಸೇವೆಯಿಂದಣವೇ ಹೆಚ್ಚಾಗಿರುತ್ತದೆ. ಬೆಂಕಿ ಪಾಕವನ್ನು ಬೇಯಿಸುವುದಕ್ಕಿಂತ ಬರಿ ಬೂದಿಯಾಗಿ ಬಿದ್ದರೆ ಏನು ಫಲ ! ದೀಪ ಬೆಳಕು ನೀಡುವುದಕ್ಕಿಂತ ಬರಿ ಕಾಡಿಗೆ ಚಲ್ಲಿದರೆ ಏನು ಪ್ರಯೋಜನ ? ಶಿವಯೋಗಿಗಳು ಸಾಧಿಸಿದ್ದು ಗಟ್ಟಿಮುಟ್ಟು ! ಹಾಗು ಅಂದಿನ ಸಾಮಾಜಿಕರ ಹಿತಾರ್ಥಕ್ಕೆ ಪೋಷಕವಾದದ್ದು. ಇಂದಿನ ಸಾಮಾಜಿಕ ಸೇವೆ ಸಾಧಿಸಲಾಗದ ಸೇವೆ ಶಿವಯೋಗಿಗಳು ಸಾಧಿಸಿದ್ದು. ಅದರಲ್ಲಿ ಬಹಿರಂಗ ಶುದ್ಧಿ ಸಂಸ್ಕಾರವೂ ಉಂಟು, ಅಂತರಂಗ ಶುದ್ಧಿ–ಸಂಸ್ಕಾರವೂ ಉಂಟು. ಈ ಮಹಿಮರ ಸಾಧನೆಯಲ್ಲಿ ಪರಾರ್ಥವುಂಟಲ್ಲದೆ ಸ್ವಾರ್ಥ ಲೋಭವಿಲ್ಲ. ವಿಶ್ವಕುಟುಂಬಿಗೆ ವ್ಯಕ್ತಿ ಮೋಹವಮಾಯೆ ಇರುವುದಿಲ್ಲ. ಈ ಮೋಹವಮಾಯೆಯಳಿದು ಜೀವಕುಲ ವಿಸ್ತಾರಕ್ಕೆ ಮಾಡಿದ ಸೇವೆ ಜಂಗಮ **ದಾಸೋಹಿ** ದಾಸೋಹವೆನಿಸುತ್ತದೆ. ಅಂಥ ಜಂಗಮ **ದಾಸೋಹಿ** ಶಿವಯೋಗಿಗಳಿವರು.

ಇಂಥ **ಜಗತ್‌ಕಲ್ಯಾಣಿಗೂ ಅಕಲ್ಯಾಣ ಬಗೆದವರೂ ಈ ಲೋಕದಲ್ಲಿ ಇದ್ದುದುಂಟು.** ಮನುಷ್ಯನ ವಿಷಮ ವೈರಕ್ಕೆ ಈ ಮಹಾತ್ಮರು ಎರವಾದದ್ದುಂಟು. ರಾಮರೆಡ್ಡಿಯ ಮಠಕ್ಕೆ ತನ್ನನ್ನು ಬಿಟ್ಟು ಬೇರೆಯೊಬ್ಬ ವಟುವನ್ನು ಆಯ್ಕೆ ಮಾಡಿದರೆಂದು ಶಿವಯೋಗಿಗಳ ಮೇಲೆ ಸೇಡು ತೀರಿಸಿಕೊಳ್ಳಲೆಂದು, ಹೊಟ್ಟೆಕಿಚ್ಚಿನ ವಟು ಅವರ ಊಟದಲ್ಲಿ ವಿಷ ಬೆರೆಸುತ್ತಾನೆ. ಹಲವು ಜೀವಿಗಳ ಸಾವಿಗೆ ಜೀವದಾನ ಮಾಡಿದ ಶಿವಯೋಗಿಗಳು ಈ ವಿಷಬಾಧೆಯನ್ನು ಅಳಿಸಿ ಹಾಕಬಹುದಿತ್ತು. ಹಾಗೆ ಮಾಡದೆ ಅವರು ಶಿವನಿತ್ತ ಪ್ರಸಾದವೆಂದು ಸ್ವೀಕರಿಸುತ್ತಾರೆ. ಆದರೆ ಅದರ ಬಾಧೆಯನ್ನು ಕೆಲ ಕಾಲ ತಡೆದು ನಿಲ್ಲಿಸುತ್ತಾರೆ. ಶಿವನ ಅಪ್ಪಣೆಯ ಸೇವೆ ಪೂರ್ತಿ ಮುಗಿವವರೆಗೆ ತಾವು ಬದುಕಿರುವ ಅವಶ್ಯಕತೆಯನ್ನರಿಯುತ್ತಾರೆ. ಜಂಗಮ ಸೇವೆಗಾಗಿ ಅರ್ಪಿಸಿಕೊಂಡವರಿಗೆ ದೇಹ ಮೋಹ ಜೀವಮಾಯೆ ಇರುವುದು ಹೇಗೆ ? ಹಡೆದ ತಾಯಿ ಲಿಂಗೈಕ್ಯರಾದ ದುಃಖವನ್ನೂ ಅವರು ಶಿವ–ಪ್ರಸಾದವೆಂದು

ಮೌನವಾಗಿ ಸ್ವೀಕರಿಸುತ್ತಾರೆ. ಜಗತ್ತಿನ ದುಃಖಕ್ಕೆ ಮಿಡುಕಿದ ಮಹಾತ್ಮ ಮಾತೆಗಾಗಿ ಮಿಡುಕದಿರುವರು ಹೇಗೆ? ಆದರೆ ಅವರ ದುಃಖಾನುಭವದಲ್ಲಿ ಮೌನವುಂಟಲ್ಲದೆ ಲೌಕಿಕರ ರಂಭಾಟವಿಲ್ಲ!

ಅಂತೂ ಈ ಭೂಮಿಯ ಮೇಲೆ ತಂದ ಶಿವನಾಶಯ ಪೀಠಕ್ಕೆ ತಂದವರ ಸದಿಚ್ಛೆ ಪೂರ್ಣವಾದ ಮೇಲೆ ಜೀವಿಸಿರುವ ಆಗತ್ಯವಿಲ್ಲವೆಂದು ಶಿವಯೋಗಿಗಳು ನಿರ್ಧರಿಸುತ್ತಾರೆ. ವಿಷಕೊಟ್ಟ ವಟು ದುಷ್ಟನಿರಬಹುದಲ್ಲದೆ ವಿಷ ಮಾತ್ರ ದುಷ್ಟವಲ್ಲ. ಅದಕ್ಕಾಗಿ ಬಂಧಿಸಿಟ್ಟ ವಿಷವನ್ನು ಮುಕ್ತಗೊಳಿಸಿ ಅದರ ಕರ್ತವ್ಯಕ್ಕೆ ಅಪ್ಪಣೆ ಮಾಡುತ್ತಾರೆ. ಅದರ ಪರಿಣಾಮವಾಗಿ ಅವರು ತಮ್ಮನ್ನೂ ತಾವು ಮುಕ್ತ ಮಾಡಿಕೊಳ್ಳುತ್ತಾರೆ. ಅಂತರ್ಮುಖದಲ್ಲಿ ಮಂಗಲ ಹಾಡುತ್ತಾರೆ. ಘಟಪ್ರಭೆಯಲ್ಲಿ (ನದಿಯಲ್ಲಿ) ಮಜ್ಜನಮಾಡಿ ಮೂರ್ಛೆ ಹೋದದ್ದು. ಆ ಮೂರ್ಛೆ ಸಾವಾಗಿ ಪರಿಣಮಿಸಿದ್ದು ನೆವ ಮಾತ್ರ, ಲೋಕಕ್ಕೆ ತೋರ್ಕೆ ಮಾತ್ರ. ಅವರದು ಸ್ವೇಚ್ಛೆಯ ಅಂತ. ಸಾವಲ್ಲದ ಸಾವು!

ಶಿವಯೋಗಿಗಳ ಲೋಕ ಕಲ್ಯಾಣಕಾರ್ಯ ಅಪಾರ. ಅಸಹಾಯಕರ ಬಿದ್ದ ಬದುಕು ಎದ್ದು ನಿಲ್ಲುವಂತೆ ಮಾಡಿದ್ದಾರೆ. ಅನಾಚಾರಿಗಳನ್ನು ತಿದ್ದಿ ಸದಾಚಾರಿಗಳನ್ನಾಗಿ ಮಾಡಿದ್ದಾರೆ. ನಂಬಿದವರ ನೋವ ನಿವಾರಿಸಿದ್ದಾರೆ. ಸಾವಿನಿಂದ ಬದುಕಿಸಿದ್ದಾರೆ. **ಅವರ ಸಲಹೆ ಮೀರಿದವರು ತಮ್ಮ ಅಕಾರ್ಯಕ್ಕೆ ತಾವೇ ಕಹಿ ಫಲ ಉಂಡಿದ್ದಾರೆ.** ಎಲ್ಲ ಮಠಗಳ ಜೀರ್ಣೋದ್ಧಾರ ಮಾಡಿಸಿ ಅಲ್ಲೆಲ್ಲ ದಾಸೋಹ ಕಾರ್ಯ ಮಾಡಿ ಕೃತಾರ್ಥರಾಗಿದ್ದಾರೆ. ಅವರು ಮಾಡಿದ ಮಹತ್ತರವಾದ ಮಣಿಹವೆಂದರೆ ಶಿವಯೋಗ ಮಂದಿರ ಸ್ಥಾಪಿತವಾಗುವಂತೆ ಮಾಡಿದ್ದು.

ಲೋಕವೇ ಅವರ ಬಳಗವಾಗಿದ್ದರೂ, ಮಹಾಂತಮ್ಮ (ಆಕಳು) ಅವರ ಕರುಳು ತಾಯಿ. ಶಿವಯೋಗಿಗಳ ಮೇಲೆ ಮಹಾಂತಮ್ಮಗೆ ಜೀವ, ಮಹಾಂತಮ್ಮಳ ಮೇಲೆ ಅವರಿಗೆ ಜೀವ! ಶಿವಯೋಗಿಗಳು ಅನುಕಂಪ ಬಲ್ಲರು, ಆದರೆ ಕಂಪನವರಿಯರು, ಬೆಟ್ಟ ಅಲ್ಲಾಡಬಹುದು ಆಘಾತಕ್ಕೆ, ಆದರೆ ಈ ಜ್ಞಾನಪರ್ವತ ಯಾವುದಕ್ಕೂ ಅಲ್ಲಾಡದು. ಆತ್ಮೋದ್ಧಾರವೊಂದೇ ಶಿವಯೋಗಿಯ ಧರ್ಮವೆಂದು ವಿಜಯಮಹಾಂತ ಮಹಿಮರು ಭಾವಿಸಿದವರಲ್ಲ. ಆತ್ಮೋದ್ಧಾರದೊಂದಿಗೆ ಲೋಕೋದ್ಧಾರವನ್ನೂ ಮಾಡಿದ ತ್ಯಾಗಿಯಿವರು. ಅವರು ಅನ್ಯಾಯಕ್ಕೆ ವಜ್ರ ಕಾಠಿಣ್ಯರು, ಸದುವಿನಯಕ್ಕೆ ಕುಸುಮ ಕೋಮಲರು! ಅವರು ತ್ಯಾಗಿ ವಿರಾಗಿ ಯೋಗಿ ಜಂಗಮದಾಸೋಹಿ – ಎಲ್ಲವೂ ಅಹುದು. ಅವರ ಬದುಕಿನ ರೀತಿ ನಿರಾಡಂಬರ, ನಿರ್ವಿಕಾರ, ನಿರಾಳ. ಅವರ ಚಾರಿತ್ರ್ಯ ಸಮುದ್ರಕ್ಕೂ ಆಳ, ಗಗನಕ್ಕೂ ಆಳಗಲಗಹನು! ನಮ್ಮ ಮಹಾಂತ ಶಿವಯೋಗಿಗಳಿಗೆ ಸಾವಿಲ್ಲ. ಎಲ್ಲೆಲ್ಲಿಯೂ

ತುಂಬಿದ್ದಾರೆ. ನೆನೆದವರ ಮನದಲ್ಲಿ ಅಭಯ ಹಸ್ತವಾಗಿ ಕಾಯುವ ಶಕ್ತಿಯಾಗಿ ನೆಲಸಿದ್ದಾರೆ ॥

**''ಎಮ್ಮವರಿಗೆ ಸಾವಿಲ್ಲ, ಎಮ್ಮವರು ಸಾವನರಿಯರು,**
**ಸಾವೆಂಬುದು ಸಯವಲ್ಲ.**
**ಲಿಂಗದಲ್ಲಿ ಉದಯವಾದ ನಿಜೈಕ್ಯರಿಗೆ**
**ಆ ಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆಯಿಲ್ಲ !**

(ಬ. ವ. ೧೨೭೩)

# ೧೨.

# ಶ್ರೀ ಶರಣಬಸವೇಶ್ವರರ ಮಹಾದಾಸೋಹ ನಡೆದು ಬಂದ ದಾರಿ

---

ತತ್ತ್ವಜ್ಞಾನ ಬಲ್ಲವರು ಸಿಕ್ಕಬಹುದು, ತತ್ತ್ವಜ್ಞಾನ ಹೇಳುವವರೂ ಸಿಕ್ಕಬಹುದು. ಆದರೆ ಅವರಲ್ಲಿ ಆಚರಣೆಯಿರುವುದು ಸಂಶಯಾಸ್ಪದ. ಸಚ್ಚಾರಿತ್ರ್ಯವುಳ್ಳವರೂ ಸಿಕ್ಕಬಹುದು, ಅಂಥವರಲ್ಲಿ ತತ್ತ್ವಜ್ಞಾನದ ಗಂಧವಿರುವುದು ಸಂದೇಹಾಸ್ಪದ. ತತ್ತ್ವಜ್ಞಾನ, ಆಚರಣೆ ಎರಡನ್ನೂ ಅಳವಡಿಸಿಕೊಂಡವರು ಇರಬಹುದು. ಆದರೆ ಎರಡನ್ನೂ ತಲೆಮಾರಿನುದ್ದಕ್ಕೂ ಉಳಿಸಿ, ಬೆಳೆಸಿಕೊಂಡು ಬಂದ ಪರಂಪರೆ ಸಿಕ್ಕುವುದು ವಿರಳ. "ಜಂಗಮಮುಖದಲ್ಲಿ ಲಿಂಗವನರಸಿಕೋ" ಎಂಬ ತತ್ತ್ವಜ್ಞಾನ ಆಚರಣೆಯಲ್ಲಿ ಬಂದು, ಧರ್ಮರೂಪದಲ್ಲಿ ಬೆರೆದು, ಸಂಸ್ಕೃತಿರೂಪದಲ್ಲಿ ಕೂಡಿಕೊಂಡು, ಜೀವನದಲ್ಲಿ ಅದನ್ನು ಅಳವಡಿಸಿಕೊಂಡು, ಏಳು ತಲೆಮಾರಿನುದ್ದಕ್ಕೂ ಜೀವಂತವಾಗಿ ಉಳಿಸಿ ಬೆಳೆಸಿಕೊಂಡು ಬಂದಿರುವುದು ಶ್ರೀ ಶರಣಬಸವೇಶ್ವರ ಪೀಠದ ವೈಶಿಷ್ಟ್ಯವಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥರು ಸಾಧಿಸಿದ್ದು ಬಹುಮುಖ ಕ್ರಾಂತಿ. ಅವರು ನಡೆದದ್ದು ಧರ್ಮ–ಸಂಸ್ಕೃತಿ; ನುಡಿದದ್ದು ತತ್ತ್ವಜ್ಞಾನ. ಅವರದು ಉಪದೇಶಕ್ಕಾಗಿ ಮೂಡಿಬಂದ ಬರಿ ತತ್ತ್ವಜ್ಞಾನವಲ್ಲ. ನುಡಿಯೊಳಗಾಗಿ ನಡೆದ ಸಂಸ್ಕೃತಿನಿಷ್ಠವಾದ ಅನುಭಾವ. ಬರಿ ವಿಚಾರಪ್ರಧಾನವಾದ ಅನುಭವವಲ್ಲ. ಆಚಾರ ಪ್ರಧಾನವಾದ ಅನುಭಾವ.

**"ಜಂಗಮ ಮುಖದಲ್ಲಿ ಲಿಂಗವನರಸಿಕೋ ಎಂದಡೆ**
**ದಾಸೋಹವೆಂಬ ಹಸರವನಿಕ್ಕಿದೆನು........"**

**"ಲಕ್ಷಗಾವುದ ದಾರಿಯ ಹೋಗಿ**
**ಭಕ್ತನು ಭಕ್ತನ ಕಾಂಬುದು ಸದಾಚಾರ ;**
**ಅಲ್ಲಿ ಕೂಡಿ ದಾಸೋಹವ ಮಾಡಿದಡೆ**
**ಕೂಡಿಕೊಂಬನು ನಮ್ಮ ಕೂಡಲಸಂಗಮದೇವನು."**

"ಯತ್ರ ಜೀವಃ ತತ್ರ ಶಿವಃ" ಎನ್ನುವಂತೆ ಸಕಲ ಜೀವಾತ್ಮರ ಚೈತನ್ಯ ಮುಖಾಂತರ ಪರಮಾತ್ಮನನ್ನು ಕಾಣಬೇಕೆಂದು ಬಸವಣ್ಣನು ಹೇಳಿದ್ದಾನೆ. ಬಸವಣ್ಣನು ಕಂಡ

ದರ್ಶನವಿಲ್ಲಿದೆ. ಮಾನವ ಕುಲಕ್ಕೆ ಕೊಟ್ಟ ಸಂಸ್ಕೃತಿಯಿಲ್ಲಿದೆ. ವಿಶ್ವತೋಮುಖವುಳ್ಳ ಲಿಂಗ ಅಗಮ್ಯ ಮತ್ತು ಅಗೋಚರ ವಸ್ತು. ಅಗೋಚರ ಲಿಂಗವನ್ನು ಗೋಚರ ಜಂಗಮದಲ್ಲಿ ಕಾಂಬುವ ದರ್ಶನವೇ ಬಸವಣ್ಣ ಕೊಟ್ಟ ಬೆಳಕಾಗಿದೆ. ಲಿಂಗದ ಚಿದಂಶವೇ ಜಂಗಮ. ಜಂಗಮದ ಚಿತ್ಕಳೆಯೇ ಲಿಂಗ. ಲಿಂಗದ ಜಂಗಮತತ್ತ್ವವೇ ಜೀವವಾಗಿದೆ, ಜಗವಾಗಿದೆ. ಹೀಗೆ ಜಂಗಮ ಮುಖದಲ್ಲಿ ಲಿಂಗ ಸಕಲ ವಿಸ್ತಾರದ ರೂಹು ತಾಳಿ ನಿಂತಿದೆ. ಅದಕ್ಕಾಗಿ ಬಸವಣ್ಣ 'ಯತ್ರ ಜೀವಃ, ತತ್ರ ಶಿವಃ' ಎಂದು ಸಕಲ ವಿಸ್ತಾರದ ಜೀವಜಂಗಮಕ್ಕೆ ದಾಸೋಹದ ಪಸರವನ್ನಿಕ್ಕಿದ. ಈ ವಿಸ್ತಾರದ ಜೀವಜಂಗಮಕ್ಕೆ ತನ್ನನ್ನು ತಾನು ಅರ್ಪಿಸಿಕೊಂಡ. ಜಂಗಮತೃಪ್ತಿಯಲ್ಲಿ ಲಿಂಗತೃಪ್ತಿ, ಲಿಂಗತೃಪ್ತಿಯಲ್ಲಿ ತನ್ನ ತೃಪ್ತಿಯನ್ನು ಕಂಡುಕೊಂಡ. ಜಂಗಮದರ್ಶನದಲ್ಲಿ ಲಿಂಗದರ್ಶನ ಪಡೆದ. ಲಿಂಗದರ್ಶನದಲ್ಲಿ ಆತ್ಮದರ್ಶನ ಮಾಡಿಕೊಂಡ.

ಈ ಬಸವಧರ್ಮ-ಸಂಸ್ಕೃತಿಯ ವಾಹಿನಿ ಕನ್ನಡನಾಡಿನಲ್ಲಿ, ವಿಶೇಷವಾಗಿ ಕಲ್ಯಾಣದ ಮಹಾದ್ವಾರವೆನಿಸಿದ ಕಲಬುರಗಿಯ ಪುಣ್ಯಭೂಮಿಯಲ್ಲಿ ಹರಿದು ಬಂದು, ದಾಸೋಹಂಭಾವ ಹಸಿರಾಗಿ ಹೂತು ಕಾತು ಪಲ್ಲವಿಸಿರುವುದನ್ನು ಕಾಣಬಹುದು. ಆ ರೀತಿ ಬಸವಧರ್ಮ-ಸಂಸ್ಕೃತಿ ಮತ್ತೆ ಶರಣಬಸವೇಶ್ವರರ ರೂಪದಲ್ಲಿ ಮೈದಾಳಿ ಬಂದಿದೆ.

**"ನಿರಹಂಭಾವದೊಳಗೆ ದಾಸೋಹದ ನಿರಹಂಕೃತಿ ನಿಷ್ಪತ್ತಿಯಾಗಿ**
**ಎರಡರಿಯದೆ ನಿಜರೂಪವಾನಂದದೊಳಿಪ್ಪೆನು ಕೂಡಲ ಸಂಗಯ್ಯಾ"**

ಹೀಗೆ ನಿರಹಂಭಾವದೊಳಗೆ ನಿರಹಂಕೃತಿಭಾವ ಬಸವಣ್ಣನ ನಡೆಯಲ್ಲಿ ಬಂದು ನಿಷ್ಪತ್ತಿಯಾಗಿ ದಾಸೋಹವಾಯಿತು. ಶರಣಬಸವರಲ್ಲಿ ಆ ದಾಸೋಹ ನಡೆಯೇ ಪರಂಪರೆಯಾಗಿ ಬೆಳೆದು ಬಂದು, ಧರ್ಮ-ಸಂಸ್ಕೃತಿ ರೂಪದಲ್ಲಿ ಮೈದಾಳಿ, ಮಹಾ ಜನಾಂಗಕ್ಕೆ ಮಾರ್ಗದರ್ಶನ ನೀಡುತ್ತಲಿದೆ. ಹೀಗೆ ಒಳ್ಳೆಯದೆಂಬುದು ಗೊತ್ತಿರದೆ ರಕ್ತಗತವಾಗಿ ಮೈವೆತ್ತು ಬರುವುದೇ ಸಂಸ್ಕೃತಿಯೆನಿಸುತ್ತದೆ,

'ಜಂಗಮ ಮುಖದಲ್ಲಿ ಲಿಂಗವನರಸಿಕೋ' ಎಂಬ ದರ್ಶನವನ್ನು ಪಡೆದ ಬಸವಣ್ಣನು ಅರಿತು ಆಚರಣೆಯಲ್ಲಿ ತಂದನು. ಶರಣಬಸವರು ಬಸವಣ್ಣನ ಈ ವಿಚಾರವನ್ನು ಆಚಾರಕ್ಕಿಳಿಸಿದರಲ್ಲದೆ ಈ ಆಚಾರವನ್ನು ಬಹುಮುಖವಾಗಿ ವಿಸ್ತಾರಗೊಳಿಸಿದರು. ವಿಚಾರಕ್ಕಿಂತ ಆಚಾರ ಮುಖ್ಯ, ಆಚಾರಕ್ಕಿಂತ ಅದನ್ನು ಲೋಕಹಿತಾರ್ಥವಾಗಿ ಬಳಸುವುದು ಮುಖ್ಯ, ಈ ರೀತಿ ಆಚಾರ ವಿಚಾರ ಶರಣಬಸವರ ಜೀವಮಾನಕಾಲಕ್ಕೆ ಸೀಮಿತವಾಗಿ ಉಳಿಯದೆ, ಶರಣರ ಮಹಾಪೀಠಕ್ಕೆ ಬಂದ ಸಕಲ ಶರಣರಲ್ಲಿ ಪರಂಪರೆಯಾಗಿ ಧರ್ಮರೂಪದಲ್ಲಿ, ಸಂಸ್ಕೃತಿರೂಪದಲ್ಲಿ ಉಳಿದು-ಬೆಳೆದು ಬಂದಿರುವುದು ವೈಶಿಷ್ಟ್ಯವಾಗಿದೆ.

ಶರಣರ ದಾಸೋಹ ಮಹಾಮನೆಯಲ್ಲಿ ಕ್ರಿಯಾಮೂರ್ತಿಯಿಲ್ಲದೆ ನಿತ್ಯ ತ್ರಿಕಾಲ ಗುರು–ಲಿಂಗ–ಜಂಗಮ ದಾಸೋಹ ಪೂಜೆ ನಡೆಯುವುದಿಲ್ಲ. ಇಲ್ಲಿ ಈ ರೀತಿ ಜಂಗಮಾರ್ಚನೆಯಿಲ್ಲದೆ ಲಿಂಗಾರ್ಚನೆಯಿಲ್ಲ, ಲಿಂಗಾರ್ಚನೆಯಿಲ್ಲದೆ ಪ್ರಸಾದವಿಲ್ಲ. 'ಜಂಗಮಮುಖದಲ್ಲಿ ಲಿಂಗವನರಸಿಕೋ' ಎಂಬುದಕ್ಕೆ ಇದು ಜೀವಂತ ನಿದರ್ಶನ ವಾಗಿದೆ. ಶರಣರ ಶಿವಸಮಾಧಿಯ ಮೇಲಿನ ಶಿವಾಲಯದಲ್ಲಿ ಗುರು ಮರುಳಸಿದ್ಧರ ಮತ್ತು ಶರಣಬಸವರ–ಎರಡೊಂದಾದ ಅವಿನಾಭಾವದ ಚಿನ್ಮಯಮೂರ್ತಿ ರಾರಾಜಿಸು ತ್ತದೆ. ಜಂಗಮಮುಖದಲ್ಲಿ ಲಿಂಗವ ಕಂಡು ಲಿಂಗವಾದ ಶರಣರಿವರು ಎಂಬುದಕ್ಕೆ ಗರ್ಭ ಗುಡಿಯಲ್ಲಿ ಬೆಳಗುತ್ತಿರುವ ಜಂಗಮಲಿಂಗವೇ (ಮರುಳಸಿದ್ಧರು ಜಂಗಮರೂಪಿ, ಶರಣ ಬಸವರು ಲಿಂಗರೂಪಿ) ಸಾಕ್ಷಿಯಾಗಿದೆ. ಜಂಗಮವಿರಹಿತರಾಗಿ ಶರಣರಿಲ್ಲ ವೆಂಬುದಕ್ಕೆ ಇದು ಇನ್ನೊಂದು ನಿದರ್ಶನವಾಗಿದೆ.

ಬಹುಶಃ ಎಲ್ಲ ಕಡೆಗೆ ಜಾತ್ರೆಗಳು ಜರುಗುತ್ತವೆ. ಆರಾಧ್ಯದೇವರ ಉತ್ಸವ ಮೂರ್ತಿ ಪ್ರತಿಷ್ಠಾಪಿತಗೊಂಡ ರಥೋತ್ಸವ ನಡೆಯುತ್ತದೆ. ಆದರೆ ಪ್ರತಿವರುಷ ಫಾಲ್ಗುಣ ಬ. ೫ರಂದು ಕಲಬುರಗಿಯಲ್ಲಿ ಜರುಗುವುದು ಬರಿ ಜಾತ್ರೆಯಲ್ಲ, ದಾಸೋಹ ಮಹಾಯಾತ್ರೆ. ಶರಣರ ಉತ್ಸವಮೂರ್ತಿಯನ್ನಿರಿಸದೆ ಜಂಗಮರೂಪ ದಲ್ಲಿಯ ಶರಣರನ್ನು ಕಂಡು ರಥೋತ್ಸವ ಎಳೆಯಲಾಗುತ್ತಿದೆ. ಇಲ್ಲಿ ಮಾತ್ರ ಜಂಗಮ ಮುಖದಲ್ಲಿ ಲಿಂಗವ ಕಾಂಬ ತತ್ತ್ವಪ್ರಣಾಲಿಕೆ ಜೀವಂತವಾಗಿ ಆಚರಣೆಯಲ್ಲಿರುವುದು ಕಂಡುಬರುತ್ತದೆ. ಇದು ನಿಜವಾಗಿ ಶರಣಧರ್ಮವಾಗಿ, ಸಂಪ್ರದಾಯವಾಗಿ, ಸಂಸ್ಕೃತಿಯಾಗಿ ಶರಣರ ಪೀಠದಲ್ಲಿ ತಲೆಮಾರಿನುದ್ದಕ್ಕೂ ಉಳಿದು ಬೆಳೆದುಕೊಂಡು ಬಂದಿದೆ.

ಬೇರೆ ಕಡೆಗಳಲ್ಲಿ ಭಕ್ತಾದಿಗಳು ಸ್ಥಾವರಮೂರ್ತಿಯ ದರ್ಶನಪಡೆದು ಹೋಗು ವುದುಂಟು. ಆದರೆ ಶರಣಧರ್ಮಕ್ಕೆ ಇದು ಅನ್ವಯಿಸುವಂತಿಲ್ಲ. ಶರಣಬಸವೇಶ್ವರರು ಯಾವ ಗುರು–ಲಿಂಗ–ಜಂಗಮ ದಾಸೋಹ ಮಾಡಿ ಶಿವಸ್ವರೂಪಿಗಳಾಗಿ ಜಗದುದ್ಧಾರ ಮಾಡುತ್ತಲಿರುವರೋ ಅಂಥ ಗುರು–ಲಿಂಗ–ಜಂಗಮ ದಾಸೋಹಸೇವೆ ನಿತ್ಯವೂ ಶರಣರ ದಾಸೋಹ ಮಹಾಮನೆಯಲ್ಲಿ ನಡೆಯುತ್ತಲಿದೆ.

**"ಲಕ್ಷಗಾವುದ ದಾರಿಯ ಹೋಗಿ**
**ಭಕ್ತನು ಭಕ್ತನ ಕಾಂಬುದು ಸದಾಚಾರ"**

ಎನ್ನುವಂತೆ ಭಕ್ತಾದಿಗಳು ದಾಸೋಹ ಮಹಾಯಾತ್ರೆಯ ಕಾಲದಲ್ಲಿ ಮತ್ತು ಶ್ರಾವಣ ಮಾಸದಲ್ಲಿ ದೂರದಿಂದ ಬಂದು ಶರಣಸ್ವರೂಪಿಗಳಾದ ಪೂಜ್ಯ ದೊಡ್ಡಪ್ಪ ಅಪ್ಪ ಅವರ ದರ್ಶನ ಪಡೆದು, ಅವರ ಆಶೀರ್ವಾದ ಅನುಗ್ರಹಕ್ಕೆ ಪಾತ್ರರಾಗಿ ಸದಾಚಾರ ಮಾಡುತ್ತಾರೆ. ಸದಾಚಾರಿಯಾಗುತ್ತಾರೆ.

**"ಅಲ್ಲಿ ಕೂಡಿ ದಾಸೋಹವ ಮಾಡಿದಡೆ**
**ಕೂಡಿಕೊಂಬನು ನಮ್ಮ ಕೂಡಲ ಸಂಗಮದೇವನು"**

ಎಂಬಂತೆ ಬಂದ ಭಕ್ತಾದಿಗಳು ಕೂಡಿ ದಾಸೋಹ ಮಾಡಿ, ಶಿವಸಾಕ್ಷಾತ್ಕಾರ ಮಾಡಿ ಕೊಳ್ಳುತ್ತಾರೆ.

ಇನ್ನೊಂದು ವಿಶೇಷವೆಂದರೆ, ಶರಣ ದಾಸೋಹ ಮಹಾಮನೆಯಲ್ಲಿ ನಡೆಯು ತ್ತಿರುವುದು ಸ್ಥಾವರ ಪೂಜೆಯಲ್ಲ. ದೇಹವೇ ದೇವಾಲಯವಿಲ್ಲಿ, ಗುರು–ಲಿಂಗ–ಜಂಗಮವೇ ಆರಾಧ್ಯ ವಸ್ತುವಿಲ್ಲಿ. ಕ್ರಿಯಾಮೂರ್ತಿಗಳೊಂದಿಗೆ ಗುರು–ಲಿಂಗ–ಜಂಗಮ ದಾಸೋಹ ಪೂಜೆ ನಿತ್ಯ ತ್ರಿಕಾಲದಲ್ಲಿ ನಡೆಯುತ್ತಲಿದೆ. ಸ್ಥಾವರಮೂರ್ತಿ ಇಲ್ಲವೆಂದ ಮೇಲೆ ಜಗುಲಿಯೆಂಬುದಿಲ್ಲ.

ಸಕಲ ಜೀವಾತ್ಮರಿಗೆ ಲೇಸನೆ ಬಯಸುವುದು ಬರಿ ಬಯಕೆಯಾಗಿ ಉಳಿಯದೆ, ಇಲ್ಲಿ ಶರಣರ ನಡೆಯಲ್ಲಿ ಪ್ರತ್ಯಕ್ಷ ಬಂದುದಾಗಿದೆ. ಜಂಗಮ ಮುಖದಲ್ಲಿ ಲಿಂಗವ ಕಂಡ ಶರಣರಿಗೆ ಪಶುಪಕ್ಷಿ ಮೊದಲಾಗಿ ಜೀವಕುಲ ಜಂಗಮವಾಯಿತು. ಬೆಳೆದು ತುಂಬಿ ನಿಂತ ಅವರ ಹೊಲವೆಲ್ಲ ಜೀವಜಂಗಮಕ್ಕೆ ದಾಸೋಹವಾಯಿತು. ಶರಣರ ರಾಶಿ ದೀನ ದಲಿತರ ರಾಶಿಯಾಯಿತು. ಬೇಡಿ ಹಸಿದು ಬಂದ ಜೀವಿಗಳಿಗೆ ಅವರೆಂದಿಗೂ ದವಸಧಾನ್ಯ ಇಲ್ಲವೆನ್ನಲಿಲ್ಲ. ಸಂತಾನವಿರದವರಿಗೆ ಫಲವನ್ನು ಅನುಗ್ರಹಿಸುವಲ್ಲಿ ಶರಣರ ವರದಾನ ಹುಸಿಹೋಗಲಿಲ್ಲ. ಶರಣರು ಸ್ವತಃ ತ್ಯಾಗ ಮಾಡುವುದನ್ನು ಬಲ್ಲರು, ತ್ಯಾಗ ಮಾಡಲಿಕ್ಕೆ ಹಚ್ಚುವುದನ್ನೂ ಬಲ್ಲರು.

ಒಮ್ಮೆ ಶರಣರು ದೊಡ್ಡಪ್ಪ ಶರಣರನ್ನು ಕೇಳದೆ ಅವರ ಮಗುವನ್ನು ಹಾತೊರೆದು ಬಂದ ಮಕ್ಕಳಿಲ್ಲದ ವೃದ್ಧದಂಪತಿಗಳಿಗೆ ಅನುಗ್ರಹಿಸಿ ಕೊಟ್ಟರು. ದಾಸೋಹದ ವಸ್ತು ದಾಸೋಹಕ್ಕೆ ಸಂದು ಸಾರ್ಥಕವಾಯಿತೆಂದು ದೊಡ್ಡಪ್ಪ ಶರಣ ದಂಪತಿಗಳು ಸಂತೋಷಚಿತ್ತರಾದರು. ಅವರ ದಾಸೋಹ ಬುದ್ಧಿಗೆ ಪ್ರಸನ್ನಚಿತ್ತರಾಗಿ ಶರಣರು ವರವನ್ನು ಕೇಳಿಕೊಳ್ಳಲು ಅವರನ್ನು ವಿಚಾರಿಸಿದರು. "ಯಾವ ದಾಸೋಹ ಕಾರ್ಯಕ್ಕಾಗಿ ಮಗುವನ್ನು ಕೊಟ್ಟಿರುವಿರೋ ಆ ದಾಸೋಹ ನಿರಂತರವಾಗಿ ನಡೆಯು ವಂತೆ ಅನುಗ್ರಹಿಸಬೇಕು" ಎಂದು ದೊಡ್ಡಪ್ಪಶರಣರು ಬಿನ್ನವಿಸಿಕೊಂಡರು. ಅವರ ಬಿನ್ನಹದಂತೆ ಶರಣರು ಇಂದಿಗೂ ಅಂತಃಚೇತನಶಕ್ತಿಯಾಗಿ ಮಹಾದಾಸೋಹ ವನ್ನು ನಡೆಯಿಸುತ್ತಿರುವುದನ್ನು ಕಾಣಬಹುದು.

ದಮ್ಮನಿಂದ ಬಸವಳಿದು ಬಂದ ಜಂಗಮನ ಇಚ್ಛೆ ಶಿವನಿಚ್ಛೆಯೆಂದು, ಅವನಿಗೆ ಜೀವದಾನ ಮಾಡಿ ಶರಣರು ರೋಗಿಗೆ ಹೊಸ ಬದುಕನ್ನಿತ್ತರು. ತಮ್ಮ ಬದುಕನ್ನು ಶಿವನಿಗೆ ಒಪ್ಪಿಸಿಕೊಟ್ಟರು. ಹಾಲಾಹಲವನ್ನು ಕುಡಿದು ದೇವತೆಗಳಿಗೆ ಬಂದ ಸಂಕಷ್ಟ ವನ್ನು ನಿವಾರಿಸಿ, ಪರಶಿವನು ನೀಲಕಂಠನಾದಂತೆ, ಲಿಂಗರೂಪಿ ಜಂಗಮನಲ್ಲಿಯ ಸಂಕಷ್ಟವನ್ನು ಸ್ವೀಕರಿಸಿ ಶಿವನಾದರು ಶರಣರು.

ಶರಣಬಸವೇಶ್ವರರು ತ್ರಿವಿಧ ದಾಸೋಹಮೂರ್ತಿಗಳು, ಭೂತಾನುಕಂಪಿತರು. ಶಿವಾಚಾರ ಸಂಪನ್ನರು, ಸಂಸಾರದಲ್ಲಿದ್ದು ಶಿವಯೋಗ ಸಾಧಿಸಿದವರು. ಮರಣವ ಗೆಲಿದ ಮಹಾಂತರು, ಸಕಲ ಜೀವಾತ್ಮರಲ್ಲಿ ಜಂಗಮುವನ್ನಾರಾಧಿಸಿ, ತಮ್ಮ ತನುವಿನಲ್ಲಿ ಜಂಗಮುವ ಕಂಡು, ಪ್ರಾಣದಲ್ಲಿ ಜಂಗಮುವ ಕಂಡು, ಭಾವದಲ್ಲಿ ಜಂಗಮುವ ಕಂಡು ಮಹಾಲಿಂಗವಾದರು. ತಮ್ಮ ನಂತರವೂ ದಾಸೋಹಪರಂಪರೆ ಶರಣಪೀಠದಲ್ಲಿ ತಲೆಮಾರಿನುದ್ದಕ್ಕೂ ಅವ್ಯಾಹತವಾಗಿ ನಡೆದುಕೊಂಡು ಬರುವಂತೆ ಅಂತಃಚೇತನ ಪ್ರೇರಕರಾಗಿ ನಿಂತು ಅನುಗ್ರಹಿಸುತ್ತ ಬಂದ ಶಿವಸ್ವರೂಪಿಗಳಿವರು.

ಹೀಗೆ ಶರಣಬಸವೇಶ್ವರರು ಜೀವನದುದ್ದಕ್ಕೂ ಬೆಳೆಸಿಕೊಂಡು ಬಂದ ದಾಸೋಹ ಪರಂಪರೆಗಳೆಲ್ಲ ಅವರ ನಂತರ ಪೀಠಕ್ಕೆ ಬಂದ ಶರಣರಲ್ಲಿ ಅಚ್ಚಳಿಯದೆ ಉಳಿದು ಬಂದಿವೆ. ಜೀವಕುಲದಲ್ಲಿ ಜಂಗಮುವ ಕಂಡು, ಪಶುಪಕ್ಷಿಗಳನ್ನು ಹೊಡೆಯದಿರುವ ಶರಣರ ಸಂಪ್ರದಾಯ ಇಂದಿಗೂ ಶರಣಮನೆತನದ ಹೊಲಗಳಲ್ಲಿ ಕಟ್ಟುನಿಟ್ಟಾಗಿ ಆಚರಣೆಯಲ್ಲಿದೆ. ಶರಣರು ಪಾಲಿಸಿಕೊಂಡು ಬಂದ ಸಕಲ ಜೀವಾತ್ಮರ ಲೇಸನೆ ಬಯಸುವ ಈ ಸತ್‌ಸಂಪ್ರದಾಯ ಈ ಶರಣಮನೆತನಕ್ಕೆ ಮಾತ್ರ ಸೀಮಿತವಾಗಿ ಉಳಿಯದೆ, ಸುತ್ತಲಿನ ಪ್ರದೇಶದಲ್ಲಿ ಅಚ್ಚಳಿಯದ ಪ್ರಭಾವ ಬೀರಿದ ಪರಿಣಾಮ ದಿಂದಾಗಿ ಶರಣರಲ್ಲಿ ಭಕ್ತಿಯುಳ್ಳವರೆಲ್ಲರೂ ತಮ್ಮ ಹೊಲಗಳಲ್ಲಿ ಇಂದಿಗೂ ಹಕ್ಕಿ ಹೊಡೆಯದಿರುವುದನ್ನು ಸಂಸ್ಕೃತಿಯನ್ನಾಗಿ ಪಾಲಿಸಿಕೊಂಡು ಬಂದಿದ್ದಾರೆ.

ಗುರು–ಲಿಂಗ–ಜಂಗಮ ದಾಸೋಹ ಪೂಜೆಗೈಯುವಲ್ಲಿ ವಿಧಿವಿಧಾನಗಳು ಬಹಿರ್ಮುಖದಲ್ಲಿ ನಡೆಯುವುದು ಮುಖ್ಯವಾಗಿರುವಂತೆ ಅಂತರ್ಮುಖದಲ್ಲಿ ಸಹ ನಡೆಯುವುದು ಅಷ್ಟೇ ಮುಖ್ಯವಾಗಿದೆ.

"ಜಂಗಮ ಮುಖದಲ್ಲಿ ಲಿಂಗವನರಸಿಕೋ" ಎಂಬುದು ಮತ್ತು "ನಿರಹಂಭಾವ ದೊಳಗೆ ನಿರಹಂಕೃತಿ ನಡೆಯಲ್ಲಿ ಬಂದುದೇ ದಾಸೋಹ" – ಈ ಎರಡೂ ಶರಣಪೀಠ ದಲ್ಲಿ ಬಹಿರ್ಮುಖವಾಗಿ ಅಂತರ್ಮುಖವಾಗಿ ನೆಲೆಯೂರಿ ನಿಂತು ಆಚಾರವಾಗಿ, ರೀತಿ ನೀತಿಯಾಗಿ, ಲಿಂಗವನೊಲಿಸುವ ಪರಿಯಾಗಿ, ಧರ್ಮ ಸಂಸ್ಕೃತಿಯಾಗಿ ಉಳಿದು ಬೆಳೆದು ಬಂದಿವೆ. ಅಷ್ಟೇ ಅಲ್ಲ, ಈ ಶರಣ ಸತ್‌ಸಂಪ್ರದಾಯವು ಈ ಭಾಗದ ಜನಜೀವನದಲ್ಲಿ ಮಹತ್ತರವಾದ ಸಂಸ್ಕೃತಿಯಾಗಿ ಉಳಿದುಕೊಂಡಿದೆ.

ಶ್ರೀ ಶಾಲಿವಾಹನ ಶಕೆ ೧೭೪೪ ಫಾಲ್ಗುಣ ಬ. ಪ್ರತಿಪದೆಯಂದು (ಕ್ರಿ. ಶ. ೧೮೨೨) ಶ್ರೀ ಶರಣಬಸವೇಶ್ವರರು ಲಿಂಗೈಕ್ಯರಾದರು. ಮಕ್ಕಳಿಲ್ಲದ ವೃದ್ಧದಂಪತಿ ಗಳಿಗೆ ತಮ್ಮ ಮಗುವನ್ನು ಸಂತೋಷದಿಂದ ಒಪ್ಪಿಸಿದ ದೊಡ್ಡಪ್ಪಶರಣರ ತ್ಯಾಗ ದಿಂದ ಆವರು ನಿಷ್ಪತ್ತಿಹೊಂದಿರುವುದನ್ನು ಮನಗಂಡು ಸುಪ್ರಸನ್ನರಾಗಿದ್ದ ಶರಣ ಬಸವೇಶ್ವರರು ತಾವು ಲಿಂಗೈಕ್ಯರಾಗುವ ಮುನ್ನ ಅವರಿಗೆ (ದೊಡ್ಡಪ್ಪಶರಣರಿಗೆ) ತಮ್ಮ ತಪಸ್ಸಿನ ಅಂತಃಸತ್ವವನ್ನು ಧಾರೆಯೆರೆದು, ಉತ್ತರಾಧಿಕಾರವನ್ನು ಒಪ್ಪಿಸಿದರು. ಮತ್ತು ತಾವು ಕೈಗೊಂಡ ಜಂಗಮದಾಸೋಹ ಧಾರ್ಮಿಕಕಾರ್ಯಗಳನ್ನು ಮುಂದು

ವರಿಸಿಕೊಂಡು ಹೋಗುವಂತೆ ಅನುಗ್ರಹಿಸಿದರು. ಅಂದಿನಿಂದ ಇಂದಿನವರೆಗೆ ದೊಡ್ಡಪ್ಪ ಶರಣರ ಮನೆ ದಾಸೋಹಮಹಾಮನೆಯಾಗಿ, ಅವರ ವಂಶಜರು ಶರಣ ಕುಲದವರಾಗಿ, ಶರಣರ ಮಣಿಹವನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ.

ಆದಿ ದೊಡ್ಡಪ್ಪ ಶರಣರು ಸಂಸ್ಥಾನಾಧಿಪತಿಗಳಾಗಿ ದಾಸೋಹಧರ್ಮವನ್ನು ಅವ್ಯಾಹತವಾಗಿ ಮೂವತ್ತು ವರ್ಷಗಳವರೆಗೆ ಮುಂದುವರಿಸಿಕೊಂಡು ಬಂದರು. ಈ ದೊಡ್ಡಪ್ಪ ಶರಣರ ನಂತರ ಬಂದ ಆದಿ ಶರಣಬಸವಪ್ಪ ಅಪ್ಪ ಅವರು ದಾಸೋಹ ಧರ್ಮಾಚರಣೆಯಿಂದಾಗಿ ಪವಾಡಪುರುಷರೆನಿಸಿದರು. ಆ ಮೇಲೆ ಪೀಠಕ್ಕೆ ಬಂದ ಆದಿ ಬಸವಣ್ಣಪ್ಪ ಅಪ್ಪ ಅವರು ಏಳುವರ್ಷಕಾಲ ಪೀಠಾಧಿಕಾರಿಗಳಾಗಿ ತಮ್ಮ ಮಣಿಹ ವನ್ನು ಮುಗಿಸಿದರು. ತರುವಾಯ ಬಂದ ಆದಿ ಲಿಂಗಬಸವಪ್ಪ ಅಪ್ಪ ಅವರು ಹದಿನೈದುವರ್ಷಗಳ ಕಾಲ ದಾಸೋಹಿಗಳಾಗಿ ಮಹತ್ಕಾರ್ಯಗಳನ್ನು ಕೈಕೊಂಡರು. ಆದಿ (ದ್ವಿತೀಯ) ಶರಣಬಸವಪ್ಪ ಅಪ್ಪ ಅವರು ಪೀಠಕ್ಕೆ ಬಂದ ಮೇಲೆ ಅಲ್ಪಕಾಲದಲ್ಲಿ ಶಿವಾಧೀನರಾದರು. ತರುವಾಯ ಪೀಠಕ್ಕೆ ಬಂದವರು ಸದ್ಯದ ಅಧಿಪತಿಗಳಾಗಿರುವ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಅವರು. ಶರಣರ ನಂತರ ಪೀಠಕ್ಕೆ ಬಂದ ಸಕಲ ಶರಣರು ಶರಣರ ದಾಸೋಹ ಪರಂಪರೆಯ ಘನತೆ-ಗೌರವಗಳನ್ನು ಕಾಪಾಡಿಕೊಂಡು ಬಂದು, ನಿಜ ದಾಸೋಹಿಗಳೆನಿಸಿದ್ದಾರೆ.

ಈಗ ಏಳನೆಯವರಾದ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಅವರು ಕೇವಲ ಪೂಜೆಯಲ್ಲಿ ಪೂಜ್ಯತ್ವ ಕಂಡವರಲ್ಲ. ದಿನನಿತ್ಯದ ಕೆಲಸದಲ್ಲಿ ಪೂಜ್ಯತ್ವ ಕಂಡು ಕಾಯಕ ಮಾಡುವವರು. ಪೂಜ್ಯ ಅಪ್ಪ ಅವರು ಶ್ರೀ ಶಾಲಿವಾಹನ ಶಕೆ ೧೮೧೮ ಶ್ರಾವಣ ಬ. ೧೧ನೆಯ ಶುಭದಿನದಂದು ಜನ್ಮತಾಳಿದರು. ಶರಣಬಸವರ ಪುನರಾವ ತಾರವೆನಿಸಿದ ಪೂಜ್ಯರು ಎಂಟು ವರುಷದವರಿದ್ದಾಗಲೇ ಪೀಠಾಧಿಕಾರ ವಹಿಸಿ ಕೊಂಡಿದ್ದಾರೆ. "ಜಂಗಮ ಮುಖದಲ್ಲಿ ಲಿಂಗವನರಸಿಕೋ" ಎಂಬ ತತ್ತ್ವಕ್ಕನುಗುಣ ವಾಗಿ ಪೂಜ್ಯ ಅಪ್ಪ ಅವರು ಎಂಟನೆಯ ವಯಸ್ಸಿನಿಂದ ಜಂಗಮಮೂರ್ತಿಯೊಂದಿಗೆ ಗುರು-ಲಿಂಗ-ಜಂಗಮ ದಾಸೋಹ ಪೂಜೆಯನ್ನು ನಿತ್ಯ ತ್ರಿಕಾಲದಲ್ಲಿ ಭಕ್ತಿಭಾವದಿಂದ ಕೈಕೊಳ್ಳುತ್ತ ಬಂದಿದ್ದಾರೆ. ೭೬ ವರ್ಷಗಳ ದೀರ್ಘಕಾಲದವರೆಗೆ ಅವರು ಆಚರಿಸುತ್ತ ಬಂದ ಶಿವಯೋಗ ಸಾಧನೆ ಸಿದ್ಧಿಯಾಗಿ, ಧರ್ಮವಾಗಿ, ಸಂಸ್ಕೃತಿಯಾಗಿ, ಅನುಭಾವದ ನಿಷ್ಪತ್ತಿಯ ನೆಲೆಯನ್ನು ಮುಟ್ಟಿದೆ. ಈಗ ಅವರು ೮೪ ವರ್ಷಗಳ ತುಂಬು ಜೀವನ ವನ್ನು ಬಾಳುತ್ತಿದ್ದು ಅವರಲ್ಲಿ ಮಾಗಿದ ಅನುಭಾವದ ನಿಷ್ಪತ್ತಿಯ ಕುರುಹು ಅವರ ಸುಪ್ರಸನ್ನ ಮುಖಮಂಡಲದಲ್ಲಿ ಬೆಳಗುತ್ತಲಿದೆ. ಸರಳ ಸಾಂಸಾರಿಕ ಜೀವನ, ಶರಣ ಸಂಸ್ಥಾನದ ಕಾರ್ಯನಿರ್ವಹಣೆ, ದಾಸೋಹ ತತ್ತ್ವಾಚರಣೆ ಈ ತ್ರಿಮುಖದಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ಅವರ ಶರಣತ್ವ ಶಿವಲಕ್ಷಣವನ್ನು ಕಾಣಬಹುದು. ಸಂಸ್ಥಾನಾಧಿಪತಿ ಗಳಾಗಿ ಕೇವಲ ಪೂಜೆ ಪುನಸ್ಕಾರವೆಂದು ಕುಳಿತುಕೊಳ್ಳುವ ವಿಚಾರದವರಲ್ಲ. 'ಕೂಡಲ ಸಂಗಮದೇವರನೊಲಿಸಬಂದ ಪ್ರಸಾದ ಕಾಯುವ ಕೆಡಿಸಲಾಗದು' ಎಂಬ

ತತ್ತ್ವಕ್ಕನುಗುಣವಾಗಿ ಪೂಜ್ಯ ಅಪ್ಪ ಅವರು ಕೃಷಿಕಾಯಕ ಕೈಕೊಂಡರು. ಶಿವಜೀವನ ನಡೆಸುವ ಶರಣರ ಅಂತರಂಗದ ಕೃಷಿಗೆ ಬಹಿರಂಗ ಕೃಷಿ ಬೇಕೇಬೇಕು. ಕೃಷಿಕಾಯಕ, ನೈಸರ್ಗಿಕ ಜೀವನ, ಆಧ್ಯಾತ್ಮಿಕ ಜೀವನ ಒಂದಕ್ಕೊಂದು ಪೋಷಕವಾಗಿ ಪೂರಕವಾಗಿ ಪೂಜ್ಯರ ಶಿವಯೋಗದ ವ್ಯಕ್ತಿತ್ವವನ್ನು ರೂಪಿಸುತ್ತ ಬಂದಿವೆ. ನಿಷ್ಪತ್ತಿಗೊಳಿಸುವಲ್ಲಿ ಕೃತಾರ್ಥವಾಗಿವೆ.

ಶ್ರೀ ಶರಣರ ಮಹಾಪೀಠಕ್ಕೆ ಅಧಿಪತಿಗಳಾಗಿ ಬಂದಂದಿನಿಂದ ಪೂಜ್ಯ ದೊಡ್ಡಪ್ಪ ಅಪ್ಪ ಅವರು ತ್ರಿವಿಧ ದಾಸೋಹಮೂರ್ತಿಯಾಗಿ ಬಾಳುತ್ತಿದ್ದಾರೆ. ಷಟ್‌ಸ್ಥಲವೇ ಅವರ ಜೀವನ. ಅಷ್ಟಾವರಣವೇ ಆರಾಧ್ಯವಸ್ತು. ಪಂಚಾಚಾರವೇ ಅವರ ಪಂಥ. 'ಜಂಗಮಮುಖದಲ್ಲಿ ಲಿಂಗವನರಸಿಕೊಳ್ಳುವ' ಸಾಧನೆಯೆ ಅವರ ತಪಸ್ಸಾಧನೆ, ದಾಸೋಹ ಮಹಾಮನೆಯ ಪ್ರಸಾದವೇ ಅವರು ಪಡೆಯುವ ಪ್ರಸಾದ. ಜನಪದ ಮಹಾಚೈತನ್ಯದಲ್ಲಿ ಜಂಗಮಮುಖ ಕಂಡ ಪೂಜ್ಯರು ಜನಪದ ಸರ್ವಾಂಗೀಕರಣ ವಿಕಾಸದಲ್ಲಿ ಬಹು ಆಸಕ್ತಿ ವಹಿಸುತ್ತ ಬಂದಿದ್ದಾರೆ. ತ್ಯಾಗಜೀವನದಿಂದ ಬಂದ ಈ ದೊಡ್ಡಸ್ತಿಕೆ ದೊಡ್ಡಪ್ಪನವರೆಂಬ ಹೆಸರನ್ನು ಸಾರ್ಥಕಗೊಳಿಸಿವೆ. ಶ್ರೀ ಶರಣ ಬಸವೇಶ್ವರರನ್ನು ಶ್ರೀ ಸಾಮಾನ್ಯರು ಇಂದಿಗೂ ಅಪ್ಪನೆಂದು ಆತ್ಮೀಯತೆಯಿಂದ ಕರೆಯುತ್ತಾರೆ. ಆ ಅಪ್ಪನೇ ದೊಡ್ಡಪ್ಪನಾಗಿ ಬಂದಿರುವುದಾಗಿ ಹೃದಯ ತುಂಬಿ ಹೇಳುತ್ತಾರೆ.

ಶರಣಬಸವೇಶ್ವರರ ಕಾಲದಿಂದ ದಾಸೋಹ ಮಹಾಮನೆಯಲ್ಲಿ ಗುರು-ಲಿಂಗ-ಜಂಗಮ ದಾಸೋಹ ಪೂಜೆಯೊಂದಿಗೆ ಅನ್ನದಾನ, ಅಧ್ಯಾತ್ಮದಾನ ನಿರಂತರವಾಗಿ ನಡೆಯುತ್ತ ಬಂದಿದೆ. ಹೊಸ ಜನಾಂಗದ ಪುನರುಜ್ಜೀವನ ದೃಷ್ಟಿಯುಳ್ಳ ಪೂಜ್ಯರು ಅನ್ನದಾನ ಅಧ್ಯಾತ್ಮದಾನದೊಂದಿಗೆ ವಿದ್ಯಾದಾನವನ್ನೂ ಆಚರಣೆಯಲ್ಲಿ ತಂದಿದ್ದಾರೆ. ವಿದ್ಯಾದಾನವೆಂಬುದು ಜ್ಞಾನದಾಸೋಹವೇ ಸರಿ. ಜ್ಞಾನದಾಸೋಹ ವಿಕಾಸದ ಸಂಪುಟದಲ್ಲಿ ಪ್ರಥಮ ಪುಟದಲ್ಲಿ ಬರುವಂಥ ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘವು ಪೂಜ್ಯ ಅಪ್ಪ ಅವರ ಘನ ಅಧ್ಯಕ್ಷತೆಯಲ್ಲಿ ಕ್ರಿ. ಶ. ೧೯೧೮ರಲ್ಲಿ ಸ್ಥಾಪಿತವಾಗಿದೆ. ಗಂಡು ಮಕ್ಕಳಿಗೇ ಶಿಕ್ಷಣ ಸೌಲಭ್ಯ ಸರಿಯಾಗಿ ಸಿಕ್ಕದಿರುವ ಕಾಲದಲ್ಲಿ ಪೂಜ್ಯರು ಹೆಣ್ಣುಮಕ್ಕಳ ಏಳಿಗೆಯ ಅಗತ್ಯವನ್ನು ಗಮನದಲ್ಲಿರಿಸಿಕೊಂಡು ಮಹಾದೇವಿ ಕನ್ಯಾ ಪ್ರೌಢಶಾಲೆಯನ್ನು ೧೯೩೪ರಲ್ಲಿ ಸ್ಥಾಪಿಸಿದ್ದಾರೆ. ಅದೀಗ ಕಾಲೇಜಿನ ವರೆಗೆ ಅಭಿವೃದ್ಧಿ ಹೊಂದಿದೆ. ಅವರು ಶಿಕ್ಷಣದ ಬಗೆಗೆ ತಾಳಿರುವ ಉತ್ಕಟ ಸಂಕಲ್ಪದ ಪರಿಣಾಮವಾಗಿ ಈ ಮಹಾಸಂಘದ ಆಶ್ರಯದಲ್ಲಿ ಕಲಬುರಗಿ ಮತ್ತು ಬಸವಕಲ್ಯಾಣದಲ್ಲಿ ಕೂಡಿ ೫ ಕಾಲೇಜುಗಳೂ, ೧ ಮಹಿಳಾ ಕಾಲೇಜು, ೨ ಪ್ರೌಢ ಶಾಲೆಗಳೂ, ೧ ರೆಸಿಡೆನ್ಸಿಯಲ್ ಶಾಲೆಯೂ, ಕಾಲೇಜು ಗ್ರಂಥಾಲಯ, ಸಾರ್ವಜನಿಕ ವಾಚನಾಲಯ, ಹಾಸ್ಟೆಲ್, ಅನುಭವ ಮಂಟಪ ಮತ್ತು ಗ್ರಂಥ ವಿಶ್ವವಿದ್ಯಾನಿಲಯ, ಒಟ್ಟು ಹದಿನಾಲ್ಕು ವಿದ್ಯಾಕೇಂದ್ರಗಳು ತಲೆಯೆತ್ತಿ ನಿಂತಿವೆ.

# ೧೩
# ಇಷ್ಟಲಿಂಗವೂ ದೈವವೂ

---

ಎಲ್ಲವನ್ನೂ ವೈಜ್ಞಾನಿಕ ಮಾನದಂಡದಿಂದ ಅಳೆಯುವುದೊಂದು ಇಂದಿನ ಪರಿಪಾಠವಾಗಿಬಿಟ್ಟಿದೆ. ವಿಜ್ಞಾನದ ಕೊಡುಗೆಯನ್ನು ಕಡೆಗಣಿಸಿ ಬದುಕಲಾಗದಷ್ಟು ಅದು ಬೆಳೆದು ನಿಂತಿದೆಯಾದರೂ, ಅದರ ಅವಲಂಬನದಲ್ಲಿ ಬದುಕಿನ ಸ್ವಾರಸ್ಯ ಸೋರಿ ಹೋಗಬಾರದು. ವಿಜ್ಞಾನದ ಇಷ್ಟಾರ್ಥದಲ್ಲಿ ನಮ್ಮ ಬದುಕನ್ನು ತೇಲಿಬಿಡುವುದಕ್ಕಿಂತ, ನಮ್ಮ ಇಷ್ಟಾರ್ಥದಲ್ಲಿ ಅದು ನಮ್ಮ ಪ್ರಯೋಜನಕ್ಕೆ ಬರುವಂತಾಗಬೇಕು. ಈ ಮಹಾವಿಶ್ವದ ಮಹಾಜೀವನ ವಿಸ್ತಾರದ ಸಕಲ ಪ್ರಕ್ರಿಯೆಗಳ ಕಾರಣ ಮತ್ತು ಪರಿಣಾಮವನ್ನು ಕೂಲಂಕಷವಾಗಿ ಕಂಡು ಹಿಡಿಯುವಲ್ಲಿ ವಿಜ್ಞಾನಕ್ಕೆ ಅಷ್ಟೊಂದು ಯಶಸ್ಸು, ಈವರೆಗೆ ದೊರೆತಂತಿಲ್ಲ. ಭೌತಿಕ ಪ್ರಪಂಚವನ್ನು ಶೋಧಿಸುವಲ್ಲಿ ವಿಜ್ಞಾನ ಬಹು ಶಕ್ತಿಶಾಲಿಯಾದ ಮಾಧ್ಯಮವಾಗಿದ್ದರೂ, ಅಂತರಂಗ ಪ್ರಪಂಚವನ್ನು ಶೋಧಿಸುವಲ್ಲಿ ಅದುವೆ ಮಾಧ್ಯಮವಾಗಬೇಕೆನ್ನುವುದು ಸೂಕ್ತವಲ್ಲ.

ಇಷ್ಟೆಲ್ಲ ಪ್ರಸ್ತಾಪಿಸುವುದಕ್ಕೆ ಕಾರಣವೆಂದರೆ ಶರಣ ಸತ್ಪುರುಷರು ಸಾಧಿಸಿದ ಅಲೌಕಿಕ ಸಾಧನೆಗಳನ್ನು ಮತ್ತು ಅಂತರಂಗದಲ್ಲಿ ನಡೆಯುವ ನಿಗೂಢ ವ್ಯವಹಾರವನ್ನು ಕಂಡುಹಿಡಿಯುವಲ್ಲಿ ವಿಜ್ಞಾನದ ಬೆನ್ನುಹತ್ತುವುದಕ್ಕಿಂತ ಬೇರೆ ಮಾಧ್ಯಮದತ್ತ ಗಮನ ಹರಿಸುವುದು ಲೇಸು. ಡಾ|| ಪ್ರಭುಶಂಕರ ಅವರು ಕನ್ನಡ ಸಾಹಿತ್ಯದಲ್ಲಿ ಅಸಾಧಾರಣ ವಿದ್ವಾಂಸರು. ಅವರು ಬರೆದ 'ಬೆರಗು' ವೈಚಾರಿಕ ದೃಷ್ಟಿಯಿಂದ ಮಹತ್ವದ ಗ್ರಂಥ. ಆದರೆ ವೈಚಾರಿಕತೆ ಅಥವಾ ವೈಜ್ಞಾನಿಕತೆಯನ್ನು ಅಗ್ರಪಟ್ಟದಲ್ಲಿ ಕುಳ್ಳಿರಿಸುವ ಸಂಭ್ರಮದಲ್ಲಿ–ಅದನ್ನೂ ಮೀರಿ ನಿಂತ ಮಹಿಮರ ಸಾಧನೆಯ ಅಗಾಧತೆಯನ್ನು ಗೌಣವಾಗಿ ಕಾಣುವುದು ಒಳ್ಳೆಯದಲ್ಲ.

ಬಸವಣ್ಣನವರ ಸಾಧನೆಯನ್ನು ವೈಜ್ಞಾನಿಕ ದೃಷ್ಟಿಯಿಂದ ತೂಗಲು ಹೋಗಿ, ಅವರನ್ನು ಲಘುವಾಗಿ ಕಾಣುವುದು ಸಮಂಜಸವಲ್ಲ. ಸತಿ ನೀಲಲೋಚನೆ, ಮಧುವರಸ ಮೊದಲಾದ ಕೆಲವು ಪಾತ್ರಗಳ ಮುಖದಲ್ಲಿ ಅಭಿವ್ಯಕ್ತಗೊಳಿಸಿದ ಕೆಲ ವಿಚಾರಗಳನ್ನು ಅನ್ವಯಿಸಿ ಈ ಮಾತನ್ನು ಹೇಳಬೇಕಾಗಿದೆ.

"ಅಣ್ಣನವರು ಇನ್ನೂ ಒಂದು ತರ್ಕರಹಿತ ವಾದವನ್ನು ಹೂಡಿದರು. ಮೊರ, ಒನಕೆ, ದೈವವಲ್ಲ ಎಂದರು. ಲಿಂಗ ದೈವ ಎಂದರು. ಒಂದು ಜಡವಸ್ತು ದೈವವಲ್ಲ, ಆದರೆ ಇನ್ನೊಂದು ಜಡವಸ್ತು ದೈವ ಹೇಗೆ ಆದೀತು ? ಅದಕ್ಕೂ ಅಣ್ಣನವರ ಹತ್ತಿರ

ಯಾವ ಉತ್ತರವೂ ಇರಲಿಲ್ಲ. ಜನರ ತಲೆಯಲ್ಲಿ ಗೋದಲಪ್ಪೋ ಗೊಂದಲ. ಗೊಂದಲದಲ್ಲಿ ಪಾರಾಗಲು ಜನ ಯಾರನ್ನು ಬೇಕಾದರೂ ಕೊಲ್ಲುತ್ತಾರೆ"[೧] ಹೀಗೆ ಮಧುವರಸ ಹೇಳಿದ್ದನೆಂಬುದಕ್ಕೆ ಯಾವ ಆಧಾರ ? ಅಥವಾ ಲಿಂಗತತ್ವದಲ್ಲಿ ನಂಬುಗೆಯಿಲ್ಲದಾಗಿನ ಪೂರ್ವಾಶ್ರಮದ ಮಧುವರಸನ ಅನಿಸಿಕೆಯಾಗಿರಬಹುದು. ಹಾಗಿದ್ದರೆ ಅದೀಗ ಪ್ರಸ್ತುತವಲ್ಲ. ಯಾಕೆಂದರೆ ಲಿಂಗ ದೈವವಲ್ಲವೆಂದವನು ಲಿಂಗಧಾರಣವನ್ನೇಕೆ ಮಾಡಿಕೊಂಡ ? ಶರಣ ಧರ್ಮವನ್ನೇಕೆ ಸ್ವೀಕರಿಸಿದ ? ನಂಬುಗೆಯಿಲ್ಲದ ತತ್ವಕ್ಕಾಗಿ ಮಧುವರಸನೇಕೆ ತನ್ನ ಪ್ರಾಣವನ್ನು ದುರಂತ ಮರಣಕ್ಕೆ ಒಡ್ಡಿ ನಿಂತ ? ತನಗೊಪ್ಪದ ತತ್ವದಿಂದ ದೂರ ಸರಿದು ತನ್ನ ಜೀವ ಉಳಿಸಿಕೊಳ್ಳಬಹುದಾಗಿತ್ತು !

ಬಸವಣ್ಣನವರ ತರ್ಕಬದ್ಧ ದೃಷ್ಟಿಯಿಂದ ನೋಡಿ, ಈ ವಿಷಯದ ಒಳಹೊಕ್ಕು ಪರಾಮರ್ಶಿಸಿದ್ದರೆ ಈ ಗೊಂದಲ, ಈ ಸಂಶಯ ಲೇಖಕರಲ್ಲಿ ಉದ್ಭವಿಸುತ್ತಿರಲಿಲ್ಲ ವೇನೊ. ತಿಥಿ, ವಾರ, ನಕ್ಷತ್ರ, ಶಕುನ, ಅಪಶಕುನ ಸೂಚಕ –ಮುಂತಾದ ವಿಚಾರಗಳ ಬಗೆಗೆ ಬಸವಣ್ಣನವರು ತಾಳಿದ ಖಚಿತ ನಿಲುವು ಅವರಲ್ಲಿಯ ವೈಜ್ಞಾನಿಕ ತರ್ಕಬದ್ಧ ಮನೋಧರ್ಮಕ್ಕೆ ಪ್ರಮಾಣವಾಗಿದೆ.

ಅನೇಕ ದೈವಗಳ ಹೆಸರಿನಲ್ಲಿ ಅಂದು ನಡೆದ ಅನಾಚಾರ ಅವ್ಯವಹಾರಗಳಿಂದ ಜನಸಾಮಾನ್ಯರು ಕಂಗೆಟ್ಟುಹೋದ ವಿಷಮ ಪರಿಸ್ಥಿತಿಯಲ್ಲಿ ಬಸವಣ್ಣನವರು ಹೇಳಿರುವುದನ್ನು ಗ್ರಹಿಸಿ, ಅವರ ನಿಲುವೆಯನ್ನು ತೂಗಿ ನೋಡುವುದು ಲೇಸು.

**"ನಂಬಿದ ಹೆಂಡತಿಗೆ ಗಂಡನೊಬ್ಬನೆ ಕಾಣಿರೋ**
**ನಂಬಬಲ್ಲ ಭಕ್ತಂಗೆ ದೇವನೊಬ್ಬನೆ ಕಾಣಿರೋ" (ಬ. ವ. ೬೧೬)**

ಬಸವಣ್ಣನವರ ಈ ಆಶಯವನ್ನು ಅರ್ಥಮಾಡಿಕೊಳ್ಳಬೇಕು. "ವೀರಶೈವರ ದೇವರ ಪರಿಕಲ್ಪನೆಯು ಮಾನವನ ಧಾರ್ಮಿಕ ಜಿಜ್ಞಾಸೆ ಹಾಗು ಅವನ ಅವಶ್ಯಕತೆಗಳನ್ನು ತೃಪ್ತಿಪಡಿಸುವ ಸ್ವರೂಪವನ್ನು ಹೊಂದಿದೆ."[೨] ಅಹುದು, ಅಂದಿನ ಅವಶ್ಯಕತೆ ಧಾರ್ಮಿಕ ಸ್ವಾತಂತ್ರ್ಯ. ಆದರ ಮೂಲಕ ಮನುಷ್ಯನಿಗೆ ಮೂಲಭೂತ ಹಕ್ಕು ದೊರೆಯುವಂತೆ ಮಾಡುವುದು ಅಗತ್ಯವಾಗಿತ್ತು. ಅಂದು ಗುಡಿಗಳಿಗೆ ಪ್ರವೇಶಿಸಲು ಹಾಗು ದೇವರನ್ನು ಪೂಜಿಸಲು ಜನಸಾಮಾನ್ಯರಿಗೆ ಸ್ವಾತಂತ್ರ್ಯವಿರಲಿಲ್ಲ. ಆದರೆ ಅವರಿಗೆ ದೇವರ ಮೇಲಿನ ಪ್ರೀತಿ-ಭಕ್ತಿ ಹೋದೀತೆ? ಎಲ್ಲವನ್ನು ಮನುಷ್ಯನಿಂದ ಕಸಿದುಕೊಳ್ಳಬಹುದು. ನಂಬುಗೆಯನ್ನು ಕಸಿದುಕೊಳ್ಳಲಾಗದು. ಹಲವು ದೈವಗಳಿಂದುಂಟಾದ ತೊಳಲಾಟವನ್ನು ಹೋಗಲಾಡಿಸಿ, ಏಕದೇವೋಪಾಸನೆಯ ಮೂಲಕ ಜನರ ಬದುಕಿನಲ್ಲಿ ಒಂದು ಆತ್ಮವಿಶ್ವಾಸವನ್ನು ಮೂಡಿಸುವುದು ಅಂದಿನ ಅವಶ್ಯಕತೆಯಾಗಿತ್ತು. 'ಅಲ್ಲಿ ಇಲ್ಲಿ

---

೧. 'ಬೆರಗು' –ಡಾ॥ ಪ್ರಭುಶಂಕರ, ಪು. ೮೫

೨. 'ಅರ್ಚನ' ಗ್ರಂಥ– 'ಲಿಂಗತತ್ವ' –ಎಸ್. ಎಸ್. ಪಾಟೀಲ, ಪು. ೬೮೫

ಹುಡುಕುವುದೇಕೆ ? ನಮ್ಮ ದೇವರು ನಮ್ಮ ಎದೆಯೊಳಗೇ ಇದ್ದಾನೆ' ಎಂಬ ತರ್ಕ ಪೂರ್ಣ ವಿಚಾರದಿಂದ ಬಸವಣ್ಣನವರು ಎದೆಯ ಮೇಲೆ ಆ ದೇವರನ್ನು ಇಷ್ಟಲಿಂಗ ರೂಪದಲ್ಲಿ ಧರಿಸಿಕೊಳ್ಳುವ ಪರಿಕಲ್ಪನೆಯನ್ನೂ ಗಟ್ಟಿಗೊಳಿಸಿದರು. ವರ್ಗ, ಅಂತಸ್ತು, ಲಿಂಗ ಮುಂತಾದ ತಾರತಮ್ಯವನ್ನು ದಾಟಿ, ಜನಸಾಮಾನ್ಯರಿಗೆ ಇಷ್ಟವಾದ ದೇವರನ್ನು ಈ ಇಷ್ಟಲಿಂಗದಲ್ಲಿ ಕಾಣುವಂತೆ, ಅದರ ಮೂಲಕ ಒಂದು ಆತ್ಮಸಂತೋಷವನ್ನು ತಮ್ಮದನ್ನಾಗಿ ಮಾಡಿಕೊಳ್ಳುವಂತೆ ಸದವಕಾಶವನ್ನು ಕಲ್ಪಿಸಿಕೊಟ್ಟರು.

ದೈವವೆಂದರೇನು ? ದೇವರೆಂದರೇನು ? ದೇವರ ಸ್ವರೂಪವೆಂತಹುದು ? ನಿಜಗುಣ ಶಿವಯೋಗಿಗಳು ಕಂಡಂತೆ ಅದೊಂದು ಮಾತು ಮನಂಗಳಿಂದತ್ತತ್ತ ಬೆಳಗುವ ಪರಂಜ್ಯೋತಿ, ಶಿವಶರಣರು ಅನುಭವಿಸಿ ನುಡಿದಂತೆ ಅದು ಚಿದ್ಬೆಳಗು, ಮಹಾ ಬೆಳಗು,ಭಾನು ಕೋಟಿಯ ಮೀರಿದ ಜ್ಞಾನಜ್ಯೋತಿ ! ಈ ದೈವತ್ವವನ್ನು ಒಂದುವಸ್ತು ಪಡೆಯಬಲ್ಲುದು, ಇನ್ನೊಂದು ಪಡೆಯಲಾರದು—ಎನ್ನುವುದಕ್ಕೆ ಕಾರಣವೂ ಉಂಟು.

**“ಕೀಟೋ ಭ್ರಮರ ಯೋಗೇನ ಭ್ರಮರೋ ಭವತಿ ಧ್ರುವಂ ।**
**ಮಾನವಃ ಶಿವಯೋಗೇನ ಶಿವೋ ಭವತಿ ನಿಶ್ಚಯಂ ॥”**

ಲಿಂಗಪುರಾಣದಲ್ಲಿ ಉಕ್ತವಾದ ಪ್ರಕಾರ ಕೀಟವು ಭ್ರಮರದ ಧ್ಯಾನದಿಂದ ಭ್ರಮರವಾಗ ಬಲ್ಲುದು, ಆದರೆ ಎಲ್ಲ ಹುಳುಗಳು ಹಾಗೆ ಭ್ರಮರವಾಗಲಾರವು. ಹಾಲು ಕ್ರಿಯಾ ಮಥನದಿಂದ ತುಪ್ಪವಾಗಬಲ್ಲುದು. ಆದರೆ ಬಹುಪಾಲು ನೀರು ಬೆರೆದ ಹಾಲು ತುಪ್ಪ ವಾಗಲರಿಯದು ಮತ್ತು ಆ ತುಪ್ಪ ಕ್ರೀಯಳಿದು ಮತ್ತೆ ಹಾಲಾಗದು. ಅದರಂತೆ 'ಕೂಡಲ ಸಂಗನ ಶರಣನಾಗಿ ಮರಳಿ ಮಾನವನಾಗನು ಕ್ರೀಯಳಿದು ! ಲಿಂಗಸಂಸ್ಕಾರ ಕ್ಕೊಳಪಟ್ಟಿದ್ದು (ಒಳಪಟ್ಟರು) ಹೀಗಾಗುವುದು ಸಹಜ.

ಇಷ್ಟಲಿಂಗ ದೈವವಾಗುವುದಕ್ಕೆ ಅದರ ಆಕಾರವೂ ಒಂದು ಕಾರಣವಾದರೆ, ಗುರುವಿನ ಮೂಲಕ ಹಸ್ತ ಮಸ್ತಕ ಸಂಯೋಗದಿಂದ ವಿಶಿಷ್ಟ ಸಂಸ್ಕಾರ ಹೊಂದುವುದೂ ಒಂದು ಕಾರಣವಾಗಿದೆ.

೧) “ಇಷ್ಟಲಿಂಗ ಶಿಷ್ಯನ ಚಿತ್ಕಳೆಯ ಸಾಕಾರ ರೂಪು”[೩]

೨) “ಎರಡು ಕಣ್ಣುಗಳ ಹಿಂದೆ ಮೆದುಳಿಗೆ ಅನುಬಂಧದಂತಿರುವ ಆಜ್ಞಾ ಚಕ್ರ ದಂತೆ ಈ ಇಷ್ಟಲಿಂಗವು ಇದೆ.”[೪]

೩) “ಶಿವಯೋಗ ಸಾಮರ್ಥ್ಯವನ್ನು ಸಂಪಾದಿಸಿದ ಸದ್ಗುರುವು ಶಿಷ್ಯನ ಮಸ್ತಕದ ಮೇಲೆ ತಮ್ಮ ಅಮೃತ ಹಸ್ತವನ್ನಿರಿಸಿದಾಗ ಶಿಷ್ಯನ ಶರೀರದಲ್ಲಿಯ ಆಧಾ ರಾದಿ ಚಕ್ರಗಳು ಜಾಗ್ರತಗೊಂಡು ಅಧೋಮುಖವಾದ ಶಕ್ತಿಯು ಊರ್ಧ್ವಮುಖ ವಾಗುವುದು. ಹೀಗೆ ಎಲ್ಲ ಚಕ್ರಗಳಲ್ಲಿಯ ಶಕ್ತಿಗಳು ಊರ್ಧ್ವಮುಖವಾದಂತೆ

೩.–೪. 'ಇಷ್ಟಲಿಂಗದ ವೈಜ್ಞಾನಿಕ ಪರಿಕಲ್ಪನೆ' ವ್ಹಿ. ಜಿ. ಮಾರೀಹಾಳ, ಪುಟ ೨೮–೨೯

ಆಜ್ಞಾಚಕ್ರದಲ್ಲಿಯ ಶಾಂತ್ಯತೀತೋತ್ತರ ಕಲಾರೂಪವಾದ ಪರಾಶಕ್ತಿಯು ಅಥವಾ ಶಿವಕಲೆಯು ಊರ್ಧ್ವಮುಖವಾಗಿ ಬ್ರಹ್ಮರಂಧ್ರ ಮತ್ತು ಪಶ್ಚಿಮ ಚಕ್ರಗಳತ್ತ ಪ್ರವಹಿಸುತ್ತಿರಲು ಸದ್ಗುರುಗಳು ಪಶ್ಚಿಮ ಚಕ್ರದಲ್ಲಿಯ ಆ ಶಿಷ್ಯ ಚಿತ್ಕಳೆಯನ್ನು... ಆಹ್ವಾನಿಸಿ ಶಿಷ್ಯನ ಇಷ್ಟಲಿಂಗದಲ್ಲಿ ಸ್ಥಾಪಿಸುತ್ತಾರೆ."೫

ಹೀಗೆ ಅಗಮ್ಯ ಅಪ್ರಮಾಣ ಅಪ್ರತಿಮ ಲಿಂಗವು (ಮಹಾಚೇತನವು) ಚುಳುಕಾಗಿ ಗುರುಕರುಣಮುಖದಿಂದ ಭಕ್ತನ ಕರಸ್ಥಲಕ್ಕೆ ಬಂದುದಾಗಿದೆ. ಈ ಇಷ್ಟಲಿಂಗದಂತೆ ಮೊರ ಒನಕೆ ದೈವೀಸ್ತರಕ್ಕೆ ಏರಬಾರದೇಕೆ ಎಂಬ ವಾದ ಉದ್ಭವಿಸ ಬಹುದು. ಅದಕ್ಕೆ ಉತ್ತರವಿಷ್ಟೆ :

ಕಾವ್ಯಕರ್ತನಾದ ಕವಿ ತಾನು ರಚಿಸಿದ ಕಾವ್ಯದಲ್ಲಿ ಮೂಡಿರುತ್ತಾನೆ. ಆದರೆ ಆ ಕಾವ್ಯವನ್ನು ಕವಿಯೆಂದು ಕರೆಯಲು ಬರುವಂತಿಲ್ಲ. ಹಾಗೆಯೆ ಬ್ರಹ್ಮಾಂಡದ ನಿಯಾಮಕನಾದ ಬ್ರಹ್ಮ ಆ ಬ್ರಹ್ಮಾಂಡದಲ್ಲಿ ಮೂಡಿರುತ್ತಾನೆ. ಬ್ರಹ್ಮಾಂಡ ವೆಲ್ಲವೂ ಬ್ರಹ್ಮವಲ್ಲ. ಗುಡಿಯೊಳಗಿನ ಮೂರ್ತಿ ದೇವರೆನಿಸಬಹುದಲ್ಲದೆ, ಗುಡಿಗೆ ಹೋಗುವಾಗಿನ ನಡುವಣ ಸೋಪಾನ ಕಟ್ಟೆ ಮಂಟಪ-ಮೊದಲಾದುವು ದೇವರೆನಿಸ ಬಹುದೆ ? ಮೊರ ಒನಕೆ ದೈವವಲ್ಲ. ಲಿಂಗ ದೈವ ಎನ್ನುವುದಕ್ಕೆ ಒಂದು ತರ್ಕವಿದೆ. ಆಧ್ಯಾತ್ಮಿಕ ಹಿನ್ನೆಲೆಯಿದೆ. ಪೂಜ್ಯತೆಯನ್ನು ಹೊಂದುವ ವಸ್ತು ಪೂಜ್ಯವೆನಿಸಬೇಕು. ಮತ್ತು ಅಂಥ ನಂಬುಗೆಯನ್ನು ಪುಷ್ಟೀಕರಿಸುವುದಕ್ಕೆ ಅಗತ್ಯವಾದ ಆಕಾರ ಹೊಂದಿರ ಬೇಕು. ಇಷ್ಟಲಿಂಗವನ್ನು ನೋಡಿದಾಕ್ಷಣ ನಮ್ಮಲ್ಲಿ ಸ್ಫುರಿಸುವ ಪೂಜ್ಯ ಹಾಗೂ ಪ್ರಸನ್ನಭಾವ-ಮೊರ ಒನಕೆಗಳನ್ನು ನೋಡಿದಾಕ್ಷಣ ಹುಟ್ಟಬಹುದೆ ? ಈ ರೀತಿ ವಿಶಿಷ್ಟ ರೂಪ ಲಕ್ಷಣ ಹೊಂದಿರುವುದರಿಂದ ಮತ್ತು ಯೋಗ್ಯ ಗುರು ಹಸ್ತದಿಂದ ವಿಶಿಷ್ಟ ಸಂಸ್ಕಾರ ಪಡೆಯುವುದರಿಂದ ಲಿಂಗ ದೈವವಾಗಬಲ್ಲುದು. ಆದರೆ ಅಂಥ ಸಲ್ಲಕ್ಷಣ – ಸಂಸ್ಕಾರ ಹೊಂದದೆ ಇರುವುದರಿಂದ ಮೊರ ಒನಕೆ ದೈವವಾಗಲಾರವು. ಇದಕ್ಕೆ ಕೆಲವು ಪ್ರಮಾಣಗಳನ್ನು ಕೊಡಲಾಗಿದೆ.

ಮಹಾಶಿವಯೋಗಿ ಅನಿಮಿಷಯ್ಯನಿಂದ ಕರದಿಷ್ಟ ಲಿಂಗವನ್ನು ಪಡೆದ ಮೇಲೆ ಅಲ್ಲಮಪ್ರಭುಗಳಲ್ಲಿ ಒಂದು ಅಲೌಕಿಕ ಅರಿವು ಸ್ಫುರಣವಾಗಿ ಅವರು ಹರ್ಷಪುಳಕಿತ ರಾದುದನ್ನು ಅವರ ವಚನದಿಂದಲೆ ಅರಿತುಕೊಳ್ಳಬೇಕು.

**"ನಾನರಸುತ್ತಲರಸುತ್ತ ಬಂದು**
**ಭಾವಕ್ಕಗಮ್ಯವಾದ ಮೂರ್ತಿಯ ಕಂಡೆ ನೋಡಾ**
**ಎನ್ನ ಅರಿವಿನ ಹರಿವ ಕಂಡೆ ನೋಡಾ**
**ಎನ್ನ ಒಳ ಹೊರಗೆ ಎಡೆದೆರಹಿಲ್ಲದೆ ಥಳಥಳಿಸಿ ಬೆಳಗಿ**

---

೫. 'ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ' ಪುಟ. ೨೬-೨೭
ಡಾ॥ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು

**ಹೊಳೆಯುತ್ತಿಪ್ಪ ಅಖಂಡ ಜ್ಯೋತಿಯ ಕಂಡೆ ನೋಡಾ**
**ಕುರುಹಳಿದ ಕರಸ್ಥಲದ ನಿಬ್ಬೆರಗಿನ ನೋಟದ**
**ಎನ್ನ ಪರಮ ಗುರುವ ಕಂಡು ಬದುಕಿದೆನು ಕಾಣಾ ಗುಹೇಶ್ವರ**
**(ಅ. ಪ್ರ. ವ. ೭೫೪)**

'ಘನ ಮನದೊಳಡಗಿ ಆ ಮನ ಲಿಂಗದೊಳಡಗಿ ಆ ಲಿಂಗವೆನ್ನ ಕರಸ್ಥಲಕೆ ಬಂದುದೆಂದು' ಆವಾಗ ಅಲ್ಲಮಪ್ರಭು ಉದ್ಗರಿಸಿದ್ದುಂಟು. ಅನಿಮಿಷ ಸದ್ಗುರುವಿನ ಯೋಗಬಲದಿಂದ ಆ ಲಿಂಗಕ್ಕೆ ಪ್ರಾಣ ಪ್ರತಿಷ್ಠಾಪನೆಯಾಗಿ, ಅದು ದೈವೀಸ್ವರೂಪ ಪಡೆದುದುಂಟು.

"ಇಂಥ ದೇವದರ್ಶನಕ್ಕೆ ಮಾನವ ತನ್ನ ಪ್ರಕೃತಿಯ ಜಡತೆ ಬಿಟ್ಟು, ಅಂತರಂಗದ ಅರಿವಿನ ಆಳಕ್ಕೆ ಇಳಿದಾಗ ಆ ನಿರಾಳ ಚೈತನ್ಯದ ದರ್ಶನಾನುಭವ ಪಡೆಯಬಲ್ಲ."[೬]

"ಸ್ವಯಂ ದೇವನ ನಿಲವಿಗೇರಿದ ಮಾನವದೇವನಿಗೆ ಮಾತ್ರ ಆ ಮಹಾದೇವನ ಸ್ವರೂಪ ತಿಳಿಯಬಲ್ಲುದೆ ಹೊರತು ಅನ್ಯರು ಅರಿಯುವುದು ಅಸಾಧ್ಯ."[೭]

**"ಅಯ್ಯಾ, ಎನ್ನ ಹೃದಯದಲ್ಲಿ ವ್ಯಾಪ್ತವಾಗಿಹ ಪರಮ ಚಿದ್ಬೆಳಗ**
**ಹಸ್ತಮಸ್ತಕ ಸಂಯೋಗದಿಂದೊಂದುಗೂಡಿ**
**ಮಹಾ ಬೆಳಗ ಮಾಡಿದಿರಲ್ಲಾ ?**
**ಅಯ್ಯಾ ಎನ್ನ ಕರಸ್ಥಲದಲ್ಲಿ ಥಳಥಳಿಸಿ ಬೆಳಗಿ ಹೊಳೆಯುತ್ತಿಪ್ಪ**
**ಅಖಂಡ ತೇಜವನೆ ಇಷ್ಟಲಿಂಗವೆಂಬ ದೃಷ್ಟವ ತೋರಿ**
**ನಿಶ್ಚಯವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ !**
**ಅಯ್ಯಾ, ಎನ್ನ ಆರಾಧ್ಯ ಕೂಡಲಸಂಗಮದೇವಾ,**
**ಎನ್ನೊಳಗೆ ನಿಮ್ಮಿರವ ಈ ಪರಿಯಲ್ಲಿ ಕಾಣಿಸುತ್ತಿರ್ದಿರಲ್ಲಾ"**
**(ಬ. ವ. ೧೨೧೮)**

**"ಮಂತ್ರ ಮಧ್ಯೇ ಭವೇಲ್ಲಿಂಗಂ । ಲಿಂಗ ಮಧ್ಯೇ ಭವೇನ್ಮಂತ್ರಃ ।**
**ಮಂತ್ರಲಿಂಗ ದ್ವಯೋರೈಕ್ಯಂ । ಇಷ್ಟಲಿಂಗಂ ತು ಶಾಂಕರೀ ॥"**

ಎಂಬುದಾಗಿ ಎನ್ನ ರೇಚಕ ಪೂರಕ ಕುಂಭಕ ಸ್ವರೂಪವಪ್ಪ ಶಿವಮಂತ್ರವೆ ಶಿವಲಿಂಗ ಸ್ವರೂಪವಾಗಿ. ಎನ್ನ ಕರಸ್ಥಲದಲ್ಲಿ ಕರತಳಾಮಳಕವಾಗಿ ಕಾಣಲ್ಪಟ್ಟಿತು ನೋಡಾ".
(ತೋ. ಸಿ. ವ. ೨೦೮)

---

೬. & ೭. 'ಗೌರವ' –ಶ್ರೀ ಎಸ್. ಎಸ್. ಭೂಸನೂರಮಠ ಅಭಿನಂದನ ಗ್ರಂಥ 'ವಚನಸಾಹಿತ್ಯ ಸಂಗ್ರಹ' ಲೇಖನ. ಶ್ರೀಮತಿ ಪಾರ್ವತಮ್ಮ–ಚಂದ್ರಣ್ಣ ಪು. ೧೦೧–೧೦೫

"ಎನ್ನ ಕರಸ್ಥಲದ ಮಧ್ಯದಲ್ಲಿ
ಪರಮ ನಿರಂಜನ ಕುರುಹು ತೋರಿದ,
ಆ ಕುರುಹಿನ ಮಧ್ಯದಲ್ಲಿ
ಅರುಹಿನ ಕಳೆಯು ತೋರಿದ
ಆ ಕಳೆಯು ಮಧ್ಯದಲ್ಲಿ
ಮಹಾಜ್ಞಾನದ ಬೆಳಗ ತೋರಿದ
ಆ ಬೆಳಗಿನ ನಿಲುವಿನೊಳಗೆ
ಎನ್ನ ತೋರಿದ, ಎನ್ನೊಳಗೆ ತನ್ನ ತೋರಿದ
ತನ್ನೊಳಗೆ ಎನ್ನನಿಂಬಿಟ್ಟುಕೊಂಡ ಮಹಾಗುರುವಿಂಗೆ
ನಮೋ ನಮೋ ಎನ್ನುತಿರ್ದೆನಯ್ಯಾ ಅಖಂಡೇಶ್ವರಾ
(ಅ. ವ. ವಚನಶಾಸ್ತ್ರ ರಹಸ್ಯ ವಚನ ೪೯೬)

ಹೀಗೆ ಅಲ್ಲಮಪ್ರಭು, ಬಸವಣ್ಣ, ತೋಂಟದ ಸಿದ್ಧಲಿಂಗ ಯತಿಗಳು, ಷಣ್ಮುಖ ಶಿವಯೋಗಿಗಳು -ಲಿಂಗವು ಹೇಗೆ ದೈವವಾಗುತ್ತದೆ ಎಂಬುದನ್ನು ಯೋಗಾನು ಸಂಧಾನದಲ್ಲಿ ಪ್ರತ್ಯಕ್ಷ ಕಂಡುಂಡ ಅನುಭವವನ್ನು ಹೇಳಿದ್ದಾರೆ.

"ಇದು ಯೋಗಾನುಸಂಧಾನದಿಂದ ಅರಿಯಬಲ್ಲ ವಿಷಯವಾಗಿದೆ. ರೇಚಕ, ಪೂರಕ, ಕುಂಭಕಗಳ ಮೂಲಕ ಪ್ರಾಣಾಯಾಮದಿಂದ ಶಿವಮಂತ್ರದೊಂದಿಗೆ ಶ್ವಾಸ ವನ್ನು ಒಳಗೆ ತಕ್ಕೊಳ್ಳುವುದು, ತಡೆದು ನಿಲ್ಲಿಸುವುದು ಹಾಗೂ ಹೊರಗೆ ಬಿಡುವುದು. ಹೀಗೆ ದೀರ್ಘಾವಧಿಯವರೆಗೆ ಅನನ್ಯ ಭಕ್ತಿಯಿಂದ ಸಾಧನೆ ಮಾಡಿದಮೇಲೆ ಭ್ರೂಮಧ್ಯ ದಲ್ಲಿರುವ (ಕರಸ್ಥಲದಲ್ಲಿರುವ) ಆಜ್ಞಾಚಕ್ರದಲ್ಲಿ ಜ್ಯೋತಿಸ್ವರೂಪದಲ್ಲಿ ಶಿವಲಿಂಗ ಹೊಳೆಯುತ್ತಿರುವುದು ಕಾಣುವುದುಂಟು. ಕಣ್ಣಿನೊಳಗಿಂದ ಹಾಯ್ದು ಇಷ್ಟಲಿಂಗವನ್ನು ನಿಶ್ಚಲ ದೃಷ್ಟಿಯಿಂದ ನೋಡುವಾತನ ಆಜ್ಞಾಚಕ್ರದೊಳಗಿರುವ ಜ್ಯೋತಿ ಸ್ವರೂಪ ವಷ್ಟೆ. ಕಣ್ಣು ನೋಡುವಂತಹುದಲ್ಲ. ಅದು ಮಾಧ್ಯಮವಷ್ಟೆ. ಕಣ್ಣಿನ ಹಿಂದಿನ ಕಣ್ಣಾದ ಜ್ಯೋತಿ ನೋಡುವಂತಹುದು. ಆ ಜ್ಯೋತಿಯು ಪರಮಾತ್ಮ ಸ್ವರೂಪ ಅಥವಾ ದೈವ, ಪರಮಾತ್ಮ ಸ್ವರೂಪವಾದ ಆ ಜ್ಯೋತಿ ಇಷ್ಟಲಿಂಗದ ಮೇಲೆ ಮೂಡಿ, ಏಕಾಕಾರವಾಗಿ ಆ ಲಿಂಗವನ್ನು ಜ್ಯೋತಿರ್ಲಿಂಗವನ್ನಾಗಿ ಮಾಡಿ ಬೆಳಗುವು ದುಂಟು. ಅಂದರೆ ಇಷ್ಟಲಿಂಗ ದೈವತ್ವವನ್ನು ಪಡೆಯುವುದುಂಟು. ಶಿವಯೋಗ ಬಲ್ಲ ಸದ್ಗುರುವು ಯೋಗಬಲದಿಂದ ಹೀಗೆ ಇಷ್ಟಲಿಂಗಕ್ಕೆ ಪ್ರಾಣಸ್ಥಾಪನೆ ಮಾಡಬಲ್ಲನು."

ಈ ವಿಷಯದಲ್ಲಿ ನಂಬುಗೆಯೂ ಅಗತ್ಯ. ನಂಬುವುದಕ್ಕೆ ತಕ್ಕ ವಸ್ತುವೂ ಅಗತ್ಯ. ಗುರುಮಾರ್ಗದರ್ಶನದಲ್ಲಿ ಇಂಥ ಸಾಧನೆಯೂ ಅಗತ್ಯ. ಡಾ॥ ಪ್ರಭುಶಂಕರ ಅವರು ಈ ನಿಟ್ಟಿನಲ್ಲಿ ಮರುಪರಿಶೀಲನೆ ಮಾಡಲೆಂಬ ಸದುದ್ದೇಶದಿಂದ ಈ ಲೇಖನವನ್ನು ಬರೆಯಲಾಗಿದೆ. ಆದರೆ ಈ ಲೇಖನಕ್ಕೆ ಬೇರೆ ಉದ್ದೇಶವಿಲ್ಲ.

# ೧೪.

# ಯೋಗ ಸಿದ್ಧಾಂತ ಪ್ರವೇಶ !

---

"ಮಾನವಜನ್ಮ ದೊಡ್ಡದು, ಇದನು ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಎಂಬ ಪುರಂದರದಾಸರ ವಿಚಾರ ಮಾನವಜನ್ಮದ ಮಹತ್ವವನ್ನು ಹೇಳಿದರೆ "ಕೂಡಲ ಸಂಗಮದೇವರನೊಲಿಸಿ ಬಂದ ಪ್ರಸಾದ ಕಾಯುವ ಕೆಡಿಸಲಾಗದು" ಎಂಬ ಬಸವಣ್ಣನವರ ವಿಚಾರ ಮಾನವಜನ್ಮದ ಗುರಿಯೇನೆಂಬುದನ್ನು ತಿಳಿಸುತ್ತದೆ. ಎರಡೂ ನುಡಿ ಮಾನವನ ಮಲಗಿದ ಪ್ರಜ್ಞೆಯನ್ನು ಎಚ್ಚರಿಸಿ ಅರಿವಿನತ್ತ ಕರೆದೊಯ್ಯುತ್ತವೆ. ಕಾಯ (ದೇಹವ) ಹೊತ್ತು ಬಂದ ಜೀವಾತ್ಮ ಬರಿ ತಿಂದುಂಡು ಬದುಕಲೆಂದು ಬಂದವನಲ್ಲ, 'ತಾನಾರು, ತಾನು ಎಲ್ಲಿಂದ ಬಂದೆ, ಏನಾಗಬೇಕಾಗಿದೆ?' ಎಂದು ತನ್ನನ್ನು ತಾನು ಪ್ರಶ್ನಿಸಿಕೊಳ್ಳಬೇಕು. ಥಟ್ಟನೆ ಉತ್ತರ ಸಿಗಲಿಕ್ಕಿಲ್ಲ. ಬಲ್ಲ ಸತ್ಪುರುಷರನ್ನು ಕೇಳಬೇಕು. ಸದುವಿನಯದ ಬಿನ್ನಹಕ್ಕೆ ಉತ್ತರ ಸಿಕ್ಕಲೇಬೇಕು. ಪರಮಾತ್ಮನ ಮಹಾಚೇತನದಿಂದ ಈ ಜೀವಾತ್ಮ ಬಂದವನು. ಈ ಕಾಯ (ದೇಹ) ಆತ್ಮಕ್ಕೆ ಆಶ್ರಯ ನೀಡಿದ ವಸ್ತು. ಈ ದೇಹಕ್ಕೆ ಆತ್ಮವೇ ಜೀವಾಳ. ಜೀವಾತ್ಮ ಪರಮಾತ್ಮನಾಗುವುದೇ ಮಾನವ ಜನ್ಮದ ಮುಖ್ಯ ಗುರಿ. ಪರಮಾತ್ಮನಿಂದ ಬಂದು ಮತ್ತೆ ಪರಮಾತ್ಮನಾಗಬೇಕಾದ ಮಾನವಜನ್ಮ ದೊಡ್ಡದಲ್ಲದೆ ಮತ್ತೇನು ? ಜೀವಾತ್ಮಕ್ಕೆ ಆಶ್ರಯ ನೀಡಿದ ದೇಹ ಪ್ರಸಾದ ಕಾಯವಲ್ಲದೆ ಮತ್ತೇನು? ಅಂಥ ಪ್ರಸಾದ ಕಾಯವನ್ನು ಆಶೆ ಆಮಿಷಗಳಿಗೆ ಒಡ್ಡಿ ಕೆಡಿಸಿಕೊಳ್ಳುವದು ಯೋಗ್ಯವಲ್ಲ.

ಈವರೆಗೆ ಈ ವಿಚಾರ ನಮಗೆ ಹೊಳೆದಿರಲಿಕ್ಕಿಲ್ಲ. ಎಚ್ಚರ ಹುಟ್ಟಿರಲಿಕ್ಕಿಲ್ಲ. ಮಹಾತ್ಮರು ಎಚ್ಚರ ನೀಡಿದಾಗಲೂ ಎಚ್ಚರ ತಪ್ಪಿ ನಡೆಯುವುದೆಂದರೆ–ತುಂಬಿ ಹರಿಯುವ ನದಿಯ ದಂಡೆಯ ಮೇಲೆ ನಿಂತು ನೀರಡಿಸಿ ಸತ್ತಂತೆ. ಸಂತ ಶರಣ ಯೋಗಿಗಳು ಆತ್ಮಾನುಸಂಧಾನದಲ್ಲಿ ದುಡಿದು ಅನುಭವಿಸಿ, ಅನುಭವಿಸಿ ದುಡಿದು ತಮ್ಮನ್ನು ತಾವು ಎಚ್ಚರಿಸಿಕೊಂಡು, ತಮಗಾದ ಅನುಭವದ ಮೂಲದಿಂದ ಎಚ್ಚರ ನೀಡಿದ್ದಾರೆ. ಅವರ ಅನುಭವ–ಕತ್ತಲಲ್ಲಿ ತತ್ತರಿಸುತ್ತಿರುವ ನಮಗೆ ಬೆಳಕನ್ನು ತೋರುವಂತಿದ್ದರೆ ನಾವೇಕೆ ಅತ್ತ ಗಮನ ಕೊಡಬಾರದು ?

ಮನಬಂದ ಹಣ್ಣುಹಂಪಲ ತಿಂದು, ಜೀವ ಹರಿದತ್ತ ಹರಿದಾಡಿ ಮೈಮರೆತ ಗಿಳಿ–ಹದ್ದು ಪ್ರಳಯವಾಗ್ನಿ ಯಾವಾಗ ಬಂದೀತು ಎಂಬುದನ್ನು ತಿಳಿಯದು. ಆ ಗಿಳಿಯ ಸ್ಥಿತಿಯಿಂದ ಮನುಷ್ಯನ ಸ್ಥಿತಿ ಭಿನ್ನವಾಗಿಲ್ಲ. ತಿಂದದ್ದು ಬಂತು, ವಿಲಾಸ

ವೈಭವದಲ್ಲಿ ತೊನೆದಾಡಿದ್ದು ಬಂತು, ಎಲ್ಲಿಯ ಅನುಭಾವ, ಎಲ್ಲಿಯ ಆತ್ಮಜ್ಞಾನ ? ಎಂದು ಹೇಳುವವರೂ ಇಲ್ಲದಿಲ್ಲ. ಆದರೆ ಹಲ್ಲು ಹೋಗಿ ಬೆನ್ನು ಬಾಗಿ ಮೃತ್ಯು ಹತ್ತಿರ ಸುಳಿದಾಗ ಬುದ್ಧಿ ಬಂದರೆ ಪ್ರಯೋಜನವೇನು ? ಹಣ್ಣು ತಿನ್ನುವದು ಬೇಡ ಸುಖಪಡುವುದು ಬೇಡ –ಎಂದು ಯಾರೂ ಹೇಳುವದಿಲ್ಲ. ಆದರೆ ಹಸಿವೆಯನ್ನು ತಣಿಸುವುದಕ್ಕಾಗಿ ಹಣ್ಣು, ಹೊಟ್ಟೆಯನ್ನು ಕೆಡಿಸುವುದಕ್ಕಾಗಿ ಅಲ್ಲ.

ಹಾದಿ ತಪ್ಪಿಸುವ ಹುಚ್ಚು ಸೆಳೆತ ಬಹಳವಿಲ್ಲಿ. ವಿಶ್ವಾಮಿತ್ರನಂಥ ಋಷಿಯೂ ಒಮ್ಮೆ ಜಾರಿಬಿದ್ದ ಮೇಲೆ ನಮ್ಮಂಥವರ ಪಾಡೇನು ಎಂದು ಜಾರಿ ಬಿದ್ದವರ ದೃಷ್ಟಾಂತ –ನಾವೂ ಹಾಗೆ ಬೀಳುವುದಕ್ಕೆ ಉದಾಹರಣೆಯಾಗಬಾರದು. ಅಲ್ಲದೆ ಬೀಳುವುದರಲ್ಲಿಯೆ ವಿಶ್ವಾಮಿತ್ರನ ಕಥೆ ಮುಗಿಯಲಿಲ್ಲ. ಬಿದ್ದ ಮೇಲೆ ಬುದ್ಧಿ ಬಂತು, ಎಚ್ಚರಾಗಿ ಸುಧಾರಿಸಿಕೊಂಡ, ಸಾಧನೆ ಮಾಡಿ, ತಾನಿರಿಸಿಕೊಂಡ ಗುರಿಯನ್ನು ತಲುಪಿ ಬ್ರಹ್ಮರ್ಷಿಯಾದ. ಪುಣ್ಯಪುರುಷರ ಹೋರಾಟದಲ್ಲಿ ಏಳು ಬೀಳು ಎರಡೂ ಇರುವುದುಂಟು. ಸೋಲು ಗೆಲುವೂ ಉಂಟು. ಅಂಥವರು ಗೆದ್ದ ರೀತಿ ನಮಗೆ ಆದರ್ಶವಾಗಬೇಕು ಹೊರತಾಗಿ ಸೋಲು ಅನುಭವಿಸಿದ ಘಟನೆಯಲ್ಲ. ಹೀಗೆ, ಯೋಗಿ ಋಷಿಗಳ, ಸಂತ ಶರಣರ ಚರಿತ್ರೆಯತ್ತ ಕಣ್ಣು ಹಾಯಿಸಬೇಕು. ಅವರ ಬಗೆಗೆ ಬರೆದಂಥ ಅಥವಾ ಅವರೇ ಬರೆದಂಥ ಕಾವ್ಯ ಕಥೆ ಹಾಡು ವಚನಗಳತ್ತ ಚಿತ್ತ ಹರಿಸಬೇಕು. ಆದರೆ ಅಂಥ ನೀತಿಪರ ಗ್ರಂಥಗಳಿರುವುದು ಅರ್ಥವಾಗದ ಸಂಸ್ಕೃತದಲ್ಲಿ ಅಥವಾ ಕ್ಲಿಷ್ಟವಾದ ಪದ್ಯ ರೂಪದಲ್ಲಿ. ಸಾಮಾನ್ಯರು ಎತ್ತುವ ಈ ಆಕ್ಷೇಪ ಸುಳ್ಳೇನು ಅಲ್ಲ. ಆದರೆ ಇದುವೇ ನಮ್ಮ ಜ್ಞಾನಾರ್ಜನೆಗೆ ಅತಂಕವಾಗಬಾರದು. ಸುಲಭವಾಗಿ ಅರ್ಥವಾಗಬಲ್ಲ ಗ್ರಂಥಗಳೂ ಕನ್ನಡದಲ್ಲಿ ಉಂಟು.

ಅಂಥ ಗ್ರಂಥಗಳಲ್ಲಿ ಈ 'ಯೋಗ ಸಿದ್ಧಾಂತ' ಎಂಬ ಗ್ರಂಥವೂ ಒಂದು. ಯೋಗವೆಂದೊಡನೆ ಗಾಬರಿಯಾಗುವ ಕಾರಣವಿಲ್ಲ. ಮಾನವಜನ್ಮವನ್ನು ಸಾರ್ಥಕ ಪಡಿಸಿಕೊಳ್ಳುವ ಮಾರ್ಗ ಈ 'ಯೋಗ ಸಿದ್ಧಾಂತ'ದಲ್ಲಿದೆ. ಮನುಷ್ಯರು ತಾವು ಜನ್ಮತಾಳಿ ಬಂದುದರ ಉದ್ದೇಶವನ್ನರಿಯದೆ, ತಪ್ಪುದಾರಿ ತುಳಿದು ವೃಥಾ ಕೆಟ್ಟು ಹೋಗುವರಲ್ಲಾ ಎಂದು ಮನಕರಗಿ, ಶ್ರೀ ಚೆನ್ನವೀರ ಶಿವಯೋಗಿಗಳು ಈ ಗ್ರಂಥ ವನ್ನು ರಚಿಸಿದ್ದಾರೆ.

ಎಲ್ಲಿಯ ಧರ್ಮ, ಎಲ್ಲಿದ್ದಾನೆ ದೇವರು ? ಎನ್ನುವ ಬಳಗ ಒಂದು ಕಡೆಗೆ, ದೇವರನ್ನು ಕಾಣುವ ನಿಜ ದಾರಿ ಬಿಟ್ಟು, ಕಾಣದ ದಾರಿ ಹಿಡಿದು ಸೋಲುಂಡವರು ಇನ್ನೊಂದು ಕಡೆಗೆ, ನಡೆನುಡಿಶುದ್ಧವಿಲ್ಲದೆ, ಬರಿದೆ ಆಡಂಬರದಿಂದ ದೇವರನ್ನು ಪೂಜಿಸುವ ಡಂಬಾಚಾರಿಗಳು ಮತ್ತೊಂದು ಕಡೆಗೆ, 'ಅಹಂ ಬ್ರಹ್ಮಾಸ್ಮಿ' 'ಶಿವೋಽಹಂ' ಎಂದಾಡುವ ಅರಿತ ಅಜ್ಞಾನಿಗಳು ಮಗದೊಂದು ಕಡೆಗೆ. ಹೀಗೆ ವಿಚಿತ್ರ ವಿಚಾರದವರಿಂದ, ವಿಲಕ್ಷಣ ವರ್ತನೆಯುಳ್ಳವರಿಂದ ಈ ಪ್ರಪಂಚ ತುಂಬಿದೆ.

ಆದರೆ ನಿಜವಾಗಿ ಜ್ಞಾನದ ಹಸಿವೆಯುಳ್ಳವರಿಗೆ ಯಾವುದು ಸರಿಯಾದ ಮಾರ್ಗ, ಯಾವುದು ಉದ್ಧಾರವಾಗುವ ದಾರಿ ಎಂದು ಪರದಾಟ (ಪೇಚಾಟ) ಉಂಟಾಗದಿರದು. ಹಾಗಾಗಬಾರದೆಂದು ತರತರದ ವಾದ ವಿಚಾರಗಳಲ್ಲಿಯ ಕಸುರು ಕಡಿಯನ್ನು ತೆಗೆದು ಹಾಕಿ ಹಿಂಜಿ, ಹಸನು ಮಾಡಿ, ಬತ್ತಿ ಹೊಸೆಯುವದಕ್ಕೆ ಸಿದ್ಧಮಾಡಿ ಇರಿಸಿದ ಶುಭ್ರ ಅರಳೆಯಂತೆ ಚೊಕ್ಕವಾಗಿದೆ, ಶ್ರೀಗಳ ಈ ಗ್ರಂಥದಲ್ಲಿಯ ನಿರೂಪಣೆ, ವಿಚಾರ ಪ್ರತಿಪಾದನೆ.

ಹುಟ್ಟು ಸಾವು, ಜೀವಾತ್ಮ ಪರಮಾತ್ಮ, ಬ್ರಹ್ಮಾಂಡ, ಪಂಚಭೂತ, ಸೃಷ್ಟಿ, ಸ್ಥಿತಿ, ಲಯ, ಶಿವಯೋಗ ಮುಂತಾದ ಕ್ಲಿಷ್ಟ ವಿಚಾರಗಳನ್ನು ಸರಳವಾಗಿ ತಿಳಿಯು ವಂತೆ ಶ್ರೀಗಳು ಹೇಳಿದ್ದಾರೆ. ದೇವರ ಬಗೆಗೆ ಒಂದು ನಿಚ್ಚಳ ಪರಿಕಲ್ಪನೆಯನ್ನು ಮೂಡಿಸಿದ್ದಾರೆ. 'ಅಹಂ ಬ್ರಹ್ಮಾಸ್ಮಿ' ಅಥವಾ 'ಶಿವೋऽಹಂ' ತತ್ವವೇನೂ ಸುಳ್ಳಲ್ಲ. ಯೋಗಿ ತಪಸ್ವಿಗಳು ಯೋಗಾನುಸಂಧಾನ ಮಾಡಿದ ಫಲವಾಗಿ ಅವರ ಮನದ ಕೊನೆಯ ಮೊನೆಯ ಮೇಲೆ ಹೊಳೆದಂಥ ದರ್ಶನವಿದು. ಬರಿ ಮಾತಿನ ಮೋಡಿಯಲ್ಲ. ಅಹಂಕಾರವಳಿದು, ನಿರಹಂಕಾರದಿಂದ ಸಾಧನೆ ಮಾಡಿ ನಿಜದ ನೆಲ ಕಂಡಾಗ ಉಕ್ಕಿಬಂದ ಪರಮಾನಂದದ ಉದ್ಗಾರವಿದು. ಐಕ್ಯಸ್ಥಲ ಮುಟ್ಟಿದವರ ಅನುಭಾವವಿದು. 'ನಾನಾರು' ಎಂಬುದನ್ನು ಚಿಂತನ ಮಂಥನ ಮಾಡಿ ಜ್ಞಾನೋದಯ ಹೊಂದಿದ ಮೇಲೆ ಋಷಿಗಳು ಹೇಳಿದ ಪ್ರಸಾದ ವಾಣಿಯಿದು ! ಅನುಭವಿಸಿ ಅನುಭಾವಿಗಳು ಹೇಳಿದರೆಂದು ಎಲ್ಲರೂ ಹಾಗೆ ಹೇಳಬಹುದೆ ? ಆಚಾರದ ಮುಖದಲ್ಲಿ ವಿಚಾರ ಮೂಡಿಬಂದರೆ ಅದಕ್ಕೊಂದು ಸಜೀವತೆ ಇದೆ. 'ಶಿವೋऽಹಂ' ಬೆಳಕಿಗೆ ದಾರಿಯಾಗಬೇಕಲ್ಲದೆ ಜಂಭಪಡುವದಕ್ಕಲ್ಲ. ಬಾಯಿ ಬ್ರಹ್ಮಜ್ಞಾನದಿಂದ ಶಿವ ಸಾಕ್ಷಾತ್ಕಾರ ಸಾಧ್ಯವಿಲ್ಲ. ಸೋರುವ ಮಡಿಕೆಯಲ್ಲಿ ನೀರೆರೆಯುವುದೂ ಒಂದೆ, ಸದಾಚಾರ ಸಾಧನವಿಲ್ಲದೆ, ತಲೆಯಲ್ಲಿ ಪಾಂಡಿತ್ಯವನ್ನು ತುಂಬುವುದು ಒಂದೆ. 'ಶಿವೋऽಹಂ' ಎಂದು ಕನವರಿಸಿದರೆ, ಶಿವನಾಗಬಹುದೇ ಎಂದಾದರೂ ಮಾತಿನ ಮಹಿಮರು ?

ಚಿತ್ರಕದೊಳಡಗಿದ ನಿರಾಕಾರ ಚಿತ್ರ ಸಾಕಾರವಾಗಿ ಕಂಗೊಳಿಸುವ ಹಿನ್ನೆಲೆ ಯಲ್ಲಿ ಅವನ ಅನನ್ಯ ಶ್ರದ್ಧೆ ಇದೆ, ಸಾಧನೆ ಇದೆ. ಹಾಲಿನೊಳಗೆ ಕಾಣದಂತಿದ್ದ ತುಪ್ಪ ಹೊರಹೊಮ್ಮಿ ಬರುವ ಹಿನ್ನೆಲೆಯಲ್ಲಿ ಗೃಹಿಣಿಯ ಅವಿಶ್ರಾಂತ ಶ್ರಮವಿದೆ. ಅದರಂತೆ 'ಶಿವೋऽಹಂ' ಎಂಬುದು ತಪಸ್ವಿಯ ಸತ್ ಸಾಧನೆಯ ಪ್ರತಿಫಲ. ಜಿಜ್ಞಾಸುಗಳು ಬೇನೆ ತಿಂದ ಬಳಿಕ ಮೂಡಿಬಂದ ಆತ್ಮೋದ್ಧಾರದ ಕೂಸು. 'ಶಿವೋऽಹಂ' ಎಂಬುದು ಈ ವಿಚಾರವನ್ನು ಮುಂದುವರಿಸುತ್ತ ಶ್ರೀಗಳು ಶಿವಸಾಕ್ಷಾತ್ಕಾರ ಸಾಧಿಸುವ ಬಗೆಗೆ ಮನಂಬುಗುವಂತೆ ಹೇಳಿದ್ದಾರೆ. ಪರಶಿವ(ಪರಬ್ರಹ್ಮ) ನಿರಾಕಾರ, ಮನುಷ್ಯ ಸಾಕಾರ,

ಸಾಕಾರ ಮನುಷ್ಯ ಸಾಕಾರ ರೂಪದಲ್ಲಿಯೆ ಪರಶಿವನನ್ನು ಕಾಣಬೇಕು. ಸಾಕಾರ ಲಿಂಗ, ನಿರಾಕಾರ ಪರಶಿವನ ಕುರುಹು.

**"ಅಪ್ರಮಾಣ, ಅಗಮ್ಯ, ಅಗೋಚರ, ಅಪ್ರತಿಮ, ಲಿಂಗವೇ,**
**ಕೂಡಲಸಂಗಮದೇವಯ್ಯಾ,**
**ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ!"** (ಬ. ವ. ೭೪೩)

ಬಸವಣ್ಣನವರ ಅನುಭವದ ನುಡಿ ಇದಕ್ಕೆ ಪ್ರಮಾಣವಾಗಿದೆ. ಅಪ್ರಮಾಣ ಅಗೋಚರ ಲಿಂಗವನ್ನು (ಪರಶಿವನನ್ನು) ಚುಳುಕಾಗಿ ಕರಸ್ಥಲಕ್ಕೆ ಬಂದ ಇಷ್ಟಲಿಂಗ ದಲ್ಲಿ ಕಾಣಬೇಕು.

ಅದಕ್ಕಾಗಿ ಇಷ್ಟಲಿಂಗ ಪೂಜೆ ಅನುಷ್ಠಾನದಲ್ಲಿ ಬಂದಿದೆ. ತನ್ನ ಮೂಲ ಸ್ವರೂಪವನ್ನು ಕಾಣುವ ಮಾಧ್ಯಮ ಇಷ್ಟಲಿಂಗವೆಂಬುದು. ಅಂಗ ಹೊತ್ತು ಬಂದರೂ (ಶರೀರ ಧಾರಣ ಮಾಡಿದರೂ) ಮನುಷ್ಯ ಅಂಗವಲ್ಲ ಲಿಂಗ. ಲಿಂಗಕ್ಕೆ (ತನಗೆ) ಆಶ್ರಯವಸ್ತುವಷ್ಟೇ. ಅಂಗದೊಳಗೆ ಬೆಳಗುವ ಲಿಂಗ ತಾನು. ಮತ್ತೆ ಆ ಲಿಂಗವಾಗಬೇಕಾದುದು ಮಾನವ ಜನ್ಮದ ಮುಖ್ಯಗುರಿಯಾಗಿದೆ. ಹೇಳಿದಷ್ಟು ಇದು ಸುಲಭವಲ್ಲ. ಸಾಧನೆಗೆ ಮೀರಿದುದೂ ಅಲ್ಲ. ತನ್ನ ಮೂಲಸ್ವರೂಪವನ್ನು ಕಂಡು (ಲಿಂಗವನ್ನು) ಆ ಸ್ವರೂಪವೇ ತಾನಾಗುವದನ್ನು ಶಿವಯೋಗಿಗಳು ಯೋಗ ಸಿದ್ಧಾಂತದಲ್ಲಿ ವಿವರಿಸಿದ್ದಾರೆ. ಯೋಗಿಗಳು ಅದನ್ನು ಯೋಗವೆಂದು ಕರೆದರೆ ಶಿವಶರಣರು ಷಟ್‌ಸ್ಥಲವೆಂದು ಕರೆದರು. ಇದು ಯೋಗ್ಯ ಗುರುಮುಖದಿಂದ ಸಾಧ್ಯ.

ಲಿಂಗ (ಇಷ್ಟಲಿಂಗ) ಮತ್ತು ತಾನು ಕಾಣುವದಕ್ಕೆ ಎರಡು ಭಾವಿಸುವುದಕ್ಕೆ ಒಂದು. ಉಂಬುವಲ್ಲಿ ಸುಖಪಡುವಲ್ಲಿ ಭಿನ್ನ ಭಾವ ಸಲ್ಲದು. ತಾನು ಅನುಭವಿಸುವ ಸಕಲ ಪಡಿಪದಾರ್ಥ ಲಿಂಗಕ್ಕೆ ಸಲ್ಲಬೇಕು, ಅಷ್ಟೇ ಅಲ್ಲ, ಮೊದಲು ಲಿಂಗಕ್ಕೆ ಸಂದು, ಆಮೇಲೆ ಲಿಂಗದ ಮೂಲಕ ತನಗೆ ಸಲ್ಲಬೇಕು. ಅರ್ಪಿಸುವುದಾಗಲಿ ಪೂಜಿಸು ವುದಾಗಲಿ ತಾನೇ ತಾನಾದ ಲಿಂಗಕ್ಕೆ ಎಂಬುದನ್ನು ಮರೆಯಕೂಡದು. ಇದೊಂದು ತನ್ನನ್ನು ತಾನು ಪ್ರೀತಿಸುವ ರೀತಿ. ಲೌಕಿಕದಲ್ಲಿ ಅದು ಪ್ರೀತಿ ಎನಿಸಿದರೆ ಪಾರಮಾರ್ಥದಲ್ಲಿ ಭಕ್ತಿ ಎನಿಸುವದು. ಲಿಂಗವಾಗಬೇಕಾದ ಸಾಧಕನಲ್ಲಿ ಲಿಂಗಕ್ಕೆ ಒಪ್ಪುವ ಚಾರಿತ್ರ್ಯವಿರಬೇಕೆಂಬುದನ್ನು ಗಮನದಲ್ಲಿಡಬೇಕು. ಸದ್ಗುಣಶೀಲವೆ ಒಂದು ಪೂಜೆ ಎಂದರೂ ತಪ್ಪಲ್ಲ. ಈ ಮಾರ್ಗ ಕಠಿಣವೆಂದರೆ ಕಠಿಣ, ಸರಳವೆಂದರೆ ಸರಳ. ಮುಖ್ಯ ಒಲವು ಬೇಕು. ಧೃಢ ನಿಲವು ಬೇಕು. ಒಲವಿದ್ದರೆ ದುಸ್ಸಾಧ್ಯವೂ ಸಾಧ್ಯ, ಕಾಠಿಣ್ಯವೂ ಸರಳ. ಆದರೆ ಬಸವಣ್ಣನವರು ಹೇಳಿದಂತೆ ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ ಚಿತ್ರದ ರೂಹು ಮಾತ್ರ. ಒಲವೆ (ಆಸಕ್ತಿ-ಭಕ್ತಿ) ಗೆಲುವಿಗೆ ಸೋಪಾನ.

ಇನ್ನೊಂದು ಬಗೆಯ ವಿಚಾರವಾದರೂ ಉಂಟು. ನೇರವಾಗಿ ಪ್ರಾಣ ಲಿಂಗವನು ಪೂಜಿಸಿದರೆ ಸಾಲದೆ ? ಮಧ್ಯವೊಂದು ಇಷ್ಟಲಿಂಗವೇಕೆ ? ಹೀಗೆ ಅಂಥವರು ಪ್ರಶ್ನಿಸುವುದುಂಟು. ಆಧಾರವಿಲ್ಲದೆ ಮೇಲೇರುವುದು ಹೇಗೆ ? ಮೇಲೇರು ವುದಕ್ಕೆ ಹಕ್ಕಿಗೆ ರೆಕ್ಕೆಯ ಬಲವಿರುವಂತೆ ಮನುಷ್ಯನಿಗೆ ನಿಚ್ಚಣಿಕೆಯ ಬಲವಿರುವಂತೆ ಆತ್ಮೋನ್ನತಿ ಸಾಧಿಸುವವನಿಗೆ ಇಷ್ಟಲಿಂಗದ ಬಲ ಅಗತ್ಯವಾದುದು. "ಆಕಾಶ ದಲ್ಲಾಡುವ ಪಟಕ್ಕಾದರೂ ಮೂಲ ಸೂತ್ರವಿರಬೇಕು" ಎಂದು ಚನ್ನಬಸವಣ್ಣನವರು ಹೇಳಿರುವುದು ಇಲ್ಲಿ ಗಮನಾರ್ಹವಾಗಿದೆ. "ದೇಹದಲ್ಲಿ ಇಷ್ಟಲಿಂಗ ಸ್ಥಾಪಿಸಿದಲ್ಲದೆ ಪ್ರಾಣಲಿಂಗ ಸಂಬಂಧವಾಗದು" ಎಂದು ಅಲ್ಲಮಪ್ರಭುಗಳು ನುಡಿದ ನುಡಿ ಪರಿಶೀಲನಾರ್ಹವಾಗಿದೆ.

ಒಂದೇ ಬಗೆಯ ಉಣಿಸು–ರೂಪ, ರುಚಿ, ತೃಪ್ತಿ ಮೂರನ್ನು ಒಳಗೊಂಡಿರು ವಂತೆ ಒಂದೇ ಒಂದಾದ ಲಿಂಗ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ–ಎಂದು ಮೂರು ಪ್ರಕಾರವಾಗಿದೆ. ಸ್ಥೂಲ ಸೂಕ್ಷ್ಮ ಕಾರಣ ಹೀಗೆ ಮೂರು ಶರೀರವಿದ್ದು, ಅನುಕ್ರಮವಾಗಿ ಇವುಗಳಲ್ಲಿ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗವಿರುತ್ತವೆ. ಹಾಗೂ ಇಷ್ಟ–ಪ್ರಾಣ–ಭಾವಲಿಂಗಗಳಿಗೆ ಅನುಕ್ರಮವಾಗಿ ರೂಪ ರುಚಿ ತೃಪ್ತಿ ಅರ್ಪಿತವಾಗಬೇಕು. ಊಟ ಉಣಿಸು, ಸುಖ ಸೌಕರ್ಯ ಮೊದಲಾದುದೆಲ್ಲವನ್ನು ಕೊಟ್ಟವನು ಪರಮಾತ್ಮ. ಆದ್ದರಿಂದ ಕೊಟ್ಟವನನ್ನು ನೆನೆಯಬೇಕು. ನೆನೆಯುವದಷ್ಟೆ ಅಲ್ಲ, ಕೊಟ್ಟ ಕರುಣಾಳುವಿಗೆ ಕೊಟ್ಟು, ಆಮೇಲೆ ತಾನು ಸೇವಿಸಬೇಕು. ಇದು ಶರಣ ತತ್ವದ ವಿಧಾನ, ಶಿವಸಂಸ್ಕೃತಿಯ ಲಕ್ಷಣ. ಹೀಗೆ ಮಾಡುವುದರಿಂದ ಪದಾರ್ಥಭಾವ ನೀಗಿ ಉಣಿಸು ತಿನಿಸು ಪ್ರಸಾದಭಾವ ಪಡೆಯುವದು. ಪರಮಾತ್ಮನಿಗೆ ಸಲ್ಲಿಸುವುದೆಂದರೆ ಆ ಪರಮಾತ್ಮನ ತೇಜಾಂಶವಾದ ನಮ್ಮೊಳಗಿನ ಆತ್ಮಲಿಂಗಕ್ಕೆ ಸಲ್ಲಿಸುವುದೆಂಬ ಅರ್ಥ. ಸ್ಥೂಲ ತನುವಿನೊಳಗಿನ ಇಷ್ಟಲಿಂಗಕ್ಕೆ ರೂಪಸಂದು, ಸೂಕ್ಷ್ಮದೊಳಗಿನ ಪ್ರಾಣಲಿಂಗಕ್ಕೆ ರುಚಿ ಮುಟ್ಟಿ, ಕೊನೆಗೆ, ಕಾರಣದೊಳಗಿನ ಭಾವಲಿಂಗಕ್ಕೆ ತೃಪ್ತಿ ಸಲ್ಲುವುದುಂಟು. ಇದುವೇ ಪರಮಾತ್ಮನಿಗೆ ಸಲ್ಲಿಸುವ ರೀತಿ. ಇಷ್ಟೇ ಇದರ ಅರ್ಥವಲ್ಲ. ತಾನು ಈ ಸ್ಥೂಲ ದೇಹವಲ್ಲ. ಅದರೊಳಗಿರುವ ಪ್ರಾಣಲಿಂಗ ಭಾವಲಿಂಗ ತಾನು, ಈ ಅರುಹನ್ನು ತಿಳಿಸುವ ಕುರುಹು ಇಷ್ಟಲಿಂಗ ಮತ್ತು ಮಹಾಲಿಂಗದ (ಪರಮಾತ್ಮನ) ಚುಳುಕಾದ ರೂಪು ಈ ಇಷ್ಟಲಿಂಗ.

ಪರಮಾತ್ಮನ ಚೇತನವೆ ಜೀವಾತ್ಮನೆಂದು ಈ ಮೊದಲೆ ವಿವರಿಸಲಾಗಿದೆ. ಆದರೆ ಹೇಳಿದ ಮಾತ್ರಕ್ಕೆ ಜೀವಾತ್ಮ ಪರಮಾತ್ಮನಾಗುವಮ ಸಾಧ್ಯವಿಲ್ಲ. ಅದು ಪರಮೋನ್ನತ ಅವಸ್ಥೆ. ಅದನ್ನು ಸಾಧಿಸುವುದಕ್ಕೆ ತಕ್ಕ ಸಾಧನೆ ಬೇಕು. ಸಾಧನೆಯಷ್ಟೇ ಅಲ್ಲ, ಸದಾಚಾರಬೇಕು. ನೀರು ತುಂಬಿಕೊಳ್ಳಲು ಬಾವಿಯೊಳಗೆ ಇಳಿಯುವಾಗಿನ ಮೊಟ್ಟೆಯ ಸ್ಥಿತಿ (ನಡುವಳಿಕೆ) ಸಾಧಕನದಾಗಿರಬೇಕು. ಆ ಮೊಟ್ಟೆಯಲ್ಲಿ ಸಾಧನೆಯೂ

ಇದೆ. ತಾಗು ಬಾಗು, ಕಾಯಕ ನಿಷ್ಠೆಯೂ ಇದೆ. ಪರಿಪೂರ್ಣತ್ವ ಪಡೆಯಲೆಳಸು ವಾತನಲ್ಲಿ ನಯ ನಮ್ರತೆ ಅಗತ್ಯವೆಂಬುದನ್ನು ಬಿಚ್ಚಿ ಹೇಳಬೇಕಾಗಿಲ್ಲ. ಈ ಬಗೆಯ ಅನುನಯವನ್ನು "ಶರಣಸತಿ ಲಿಂಗಪತಿ" ಎಂದು ಶಿವಶರಣರು ಕರೆದಿದ್ದಾರೆ. ಹಾಲು ತುಪ್ಪವಾಗುವ ಮುನ್ನ ಹಲವು ಕ್ರಿಯೆಗಳಿಗೆ ಒಳಪಡಬೇಕಾಗುವದು. ಅದೇ ರೀತಿ ಅಂಗ (ಸಾಧಕ) ಲಿಂಗವಾಗುವ ಮುನ್ನ ಹಲವು ಆಚಾರ ಕ್ರಿಯೆಗಳಿಗೆ ಒಳಪಡ ಬೇಕಾಗುವದು. ಅಂಗ ಲಿಂಗ ಎರಡಾಗಿ ಮೇಲುನೋಟಕ್ಕೆ ಕಂಡರೂ ಸಾಧನೆಯ ಅಂತಿಮ ಘಟ್ಟದಲ್ಲಿ ಒಂದು. ಅದೇ ರೀತಿ ಶಿವಶಕ್ತಿ ಭಿನ್ನವಾಗಿ ತೋರಿದರೂ ಶಿವನನ್ನು ಬಿಟ್ಟು ಶಕ್ತಿಯಿಲ್ಲ. ಶಕ್ತಿಯನ್ನು ಬಿಟ್ಟು ಶಿವನಿಲ್ಲ. ಪರಾತ್ಪರ ವಸ್ತುವಿನ ಎರಡು ಮುಖವಷ್ಟೆ. ಶಿವನೇ ತಾನೆಂದು ಭಾವಿಸಿ ಪೂಜಿಸುವುದು ಅಗತ್ಯವಾದರೂ, ಪೂಜಿಸುವಾತನಲ್ಲಿ (ಶರಣನಲ್ಲಿ) ಸತಿ ಭಾವ, ಪೂಜಿಸಿಕೊಂಬ ಲಿಂಗದಲ್ಲಿ ಪತಿಭಾವ ಅಳವಡುವುದು ಅವಶ್ಯಕವಾಗಿದೆ.

ನಾಟಕದೊಳಗಿನ ರಾಜ ಹೇಗೆ ನಿಜ ರಾಜನಲ್ಲವೊ ಹಾಗೆಯೇ, ಅದ್ವೈತ ವಿಚಾರವರಿತವನೂ ಬ್ರಹ್ಮಜ್ಞಾನಿಯಲ್ಲ, ಅದ್ವೈತಿಯೂ ಅಲ್ಲ. ನಾಟಕದ ಪಾತ್ರಧಾರಿಯಂತೆ ಆ ಹೊತ್ತಿಗಷ್ಟೆ ಅದ್ವೈತದ ಮಾತನಾಡುವ ವಾಗದ್ವೈತಿ, ಲೋಕವನ್ನು ಎಷ್ಟು ರಂಜಿಸಿದರೂ ಅವನು ರಾಜನಲ್ಲ. ಇವನು ಅದ್ವೈತಿಯಲ್ಲ. ಶಾಸ್ತ್ರವಶವಲ್ಲ. ಬ್ರಹ್ಮ, ಜ್ಞಾನದ ವಶವಲ್ಲ ಬ್ರಹ್ಮ, ಶುದ್ಧ ಸದಾಚಾರ ಸಾಧನೆಯ ವಶ ಬ್ರಹ್ಮ; ಆಚರಿಸಿ ಬ್ರಹ್ಮವಾಗಬೇಕು. ಬ್ರಹ್ಮವಾಗಿ ಆಚರಿಸಬೇಕು. ಕಲ್ಲೊಳಗೆ ಬೆಂಕಿಯಿರುವುದಾದರೂ ಕಲ್ಲು ಬೆಂಕಿಯಲ್ಲ. ಅದನ್ನು ಘರ್ಷಣೆಗೆ ಒಳಪಡಿಸಿದಾಗ ಬೆಂಕಿ ಪ್ರಕಟವಾಗುವುದುಂಟು. ಹಾಗೆಯೆ, ತನ್ನನ್ನು ತಾನು ವಿಶಿಷ್ಟ ಸಾಧನೆಗೆ ಒಳಪಡಿಸಿಕೊಂಡಾಗ ಬ್ರಹ್ಮ ತೇಜ ಗೋಚರಿಸುವುದುಂಟು. ಹೀಗೆ ಸಾಮಾನ್ಯ ದೃಷ್ಟಾಂತಗಳ ಮೂಲಕ ಸುಲಭ ಗ್ರಾಹ್ಯವಲ್ಲದ ಬ್ರಹ್ಮಜ್ಞಾನ ಸಾಮಾನ್ಯರಿಗೂ ತಿಳಿಯುವಂತೆ ಶ್ರೀಗಳು ನಿರೂಪಿಸುವಲ್ಲಿ ಸಫಲರಾಗಿದ್ದಾರೆ. ಇದು ಅವರ ದುಡಿತದ ಫಲ, ಯೋಗಾನುಷ್ಠಾನದಲ್ಲಿ ಅವರು ಸಾಧಿಸಿದ ನಿಷ್ಪತ್ತಿಯ ಫಲ.

ಯಾರು ಶರಣರು ? ಯಾರನ್ನು ಶರಣರೆಂದು ಮನ್ನಿಸಬೇಕು ? ಈ ವಿಚಾರ ಶರಣಸ್ಥಲದಲ್ಲಿ ಮಾರ್ಮಿಕವಾಗಿ ವಿವರಿಸಲಾಗಿದೆ. ವಿಭೂತಿ, ರುದ್ರಾಕ್ಷಿ ಧಾರಣ ಶರಣನ ಲಕ್ಷಣವಲ್ಲ. ವಿರಕ್ತನಾದ ಮಾತ್ರಕ್ಕೆ ಶರಣನಲ್ಲ. ಅಂಗದವಗುಣಗಳಿಗೆ ಶರಣು ಹೊಡೆದಾತ ಶರಣ. ಕರಣೇಂದ್ರಿಯಗಳಲ್ಲಿ ಜೀವಭಾವಗಳಲ್ಲಿ ವೈರಾಗ್ಯಭಾವ ತುಂಬಿಕೊಂಡವನೆ ಶರಣ. ಬೇಕು ಬೇಡವೆಂಬುದನ್ನು ಹುರಿದು ಪರಸ್ತ್ರೀ ವ್ಯಾಮೋಹ ವಳಿದು, ಮಾಂಸಪಿಂಡವನ್ನು ಮಂತ್ರಪಿಂಡವನ್ನಾಗಿ ಮಾಡಿಕೊಂಡಾತ ಶರಣ.

ಐಕ್ಯಸ್ಥಲ ಶಿವಜೀವರ ಐಕ್ಯ. ಸತ್ತಮೇಲೆ ಅನುಭವಿಸುವ ಸ್ಥಿತಿಯೆಂದು ಕೆಲವರ ಗ್ರಹಿಕೆಯಾಗಿದೆ. ಬದುಕಿದ್ದಾಗ ಸಾಧಿಸಬಹುದಾದ ಪರಮೋನ್ನತ

ಸ್ಥಿತಿಯದು. "ತತ್" ಪದದಲ್ಲಿ "ತ್ವಂ"ಪದ ಎರಡಿಲ್ಲದಂತೆ ಕೂಡಿಕೊಳ್ಳುವುದು ಐಕ್ಯಸ್ಥಲ. ಇದು ಯೋಗದ ವಿಚಾರ. ಶಬ್ದಕ್ಕೆ ನಿಲುಕದ ವಿಷಯ. ಹಸಿದುಂಡವರಿಗೇ ಗೊತ್ತು ಊಟದ ರುಚಿ. ಜಿಜ್ಞಾಸೆಯಿಂದ ಯೋಗಸಾಧನೆ ಮಾಡಿ ಸಿದ್ಧಿಪಡೆದ ಯೋಗಿಗೇ ಗೊತ್ತು ಐಕ್ಯಸ್ಥಲದ ನೆಲೆಬೆಲೆ. ಆರನೆಯ ಚಕ್ರದಿಂದ ಒಂಭತ್ತನೆಯ ಚಕ್ರದವರೆಗೆ ಹೋಗುವಾಗ, ಹೋಗಿ ಮುಟ್ಟಿದ ಮೇಲೆ ಸಾಧಕನು ಅನುಭವಿಸುವ ಯೋಗಾನಂದದ ಅಲೌಕಿಕ ಅನುಭವವನ್ನು ಶ್ರೀಗಳ ಬಾಯಿಂದಲೇ ಕೇಳಿ ತಿಳಿದು ಕೊಳ್ಳಬೇಕು ಅಥವಾ ಈ ಗ್ರಂಥದಲ್ಲಿಯ ವಿವರಣೆಯನ್ನು ಓದಿ ಅರಿತುಕೊಳ್ಳಬೇಕು. ಚಿದ್ರೂಪ ಸದ್ರೂಪದಲ್ಲಿ ಕೂಡಿ ಸಮರಸ ಹೊಂದಿ ಪರಬ್ರಹ್ಮ (ಪರಶಿವ) ಸ್ವರೂಪವೇ ತನ್ನ ಸ್ವರೂಪವೆಂದು ಖಚಿತವಾದ ಬಳಿಕ ಆಗುಂಟಾಗುವ ನಿಸ್ಸೀಮ ನಿರುಪಮ ಆನಂದವನ್ನು ಕೆಲವು ಶಬ್ದಗಳಲ್ಲಿ ಹೇಗೆ ಹಿಡಿದಿರಿಸುವುದು ಸಾಧ್ಯ ? ಅದೊಂದು ಸಚ್ಚಿದಾನಂದ ಸ್ಥಿತಿ. ಆಚರಿಸಿ ಅನುಭವಿಸುವ ಸ್ಥಿತಿ. ಈ ಐಕ್ಯಸ್ಥಲ ಮುಟ್ಟಿದವನು ಪ್ರಾಪಂಚಿಕನಾಗಿದ್ದರೂ ವಿರಕ್ತನಾದವನು. ಏಕೆಂದರೆ ಅಂಥವನು ಜೀವಗುಣಗಳಿಗೆ ಅಂಟಿಕೊಳ್ಳುವನು.

ಪರಮಾತ್ಮನು ತಾನೇ ತನ್ನ ನಿಜದಲ್ಲಿ ಮುಳುಗಿದಾಗ ನಿಷ್ಕಲಂಕ ನಿರಾಳ ಆನಂದದೊಳಗೆ ಓಲಾಡಿ, ಆನಂದವೆ ತಾನಾಗಿ ತಾನೆ ಆನಂದವಾಗಿದ್ದಾಗ ಮಿಕ್ಕಿಮೀರಿದ ಆನಂದ ಉಕ್ಕಿ ಹೊರಸೂಸಿತಂತೆ ! ಕಾಯಲಿರಿಸಿದ ಹಾಲು ಕಾಯ್ದು ಕಾಯ್ದು ಉಕ್ಕಿ ಹೊರಚೆಲ್ಲಿದ ಮೇಲೆ, ಪಾತ್ರೆಯೊಳಗೆ ಉಳಿದ ಹಾಲು ಹೊರಚೆಲ್ಲಿದ ಹಾಲು ಭಿನ್ನವಲ್ಲ, ಎರಡೂ ಒಂದೇ, ಹಾಗೆಯೆ ನಿರಾಕಾರ ಪರಮಾತ್ಮನೊಳಗಿನ ಆನಂದ, ಉಕ್ಕಿ ಹೊರಸೂಸಿದ ಆನಂದ ಭಿನ್ನವಲ್ಲ, ಎರಡೂ ಒಂದೇ. ಪರಮಾತ್ಮನ ಸಂಕಲ್ಪ ದಂತೆ ಹೊರಸೂಸಿದ ಆನಂದಶಕ್ತಿ ಸುವಿಸ್ತಾರವಾದ ಬ್ರಹ್ಮಾಂಡವಾಯಿತಂತೆ. ಈ ಶಕ್ತಿ ಪಂಚಮಹಾಭೂತಗಳಲ್ಲಿ ಸೇರಿಕೊಂಡು, ಜೀವರಾಶಿ ನಿರ್ಮಾಣವಾಯಿತು. ಆ ಮೂಲ ಪರವಸ್ತುವೆ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿವಿಧ ರೂಪತಾಳಿ, ಆ ವಸ್ತುವಿನೊಳಗಡಗಿದ ಕ್ರಿಯಾಶಕ್ತಿ ಸರಸ್ವತಿಯಾಗಿ ಬ್ರಹ್ಮನ ಸಹಧರ್ಮಿಣಿಯೆನಿ ಸಿದಳು. ಇಚ್ಛಾಶಕ್ತಿ ಲಕ್ಷ್ಮಿಯಾಗಿ ವಿಷ್ಣುವಿನ ಸಹಧರ್ಮಿಣಿಯೆನಿಸಿದಳು, ಜ್ಞಾನಶಕ್ತಿ ಪಾರ್ವತಿಯಾಗಿ ಮಹೇಶ್ವರನ ಸಹಧರ್ಮಿಣಿಯಾದಳು. ಈ ತ್ರಿಮೂರ್ತಿಗಳು ಆ ಮಹಾ ವಸ್ತುವಿನ ಮೂರು ಮುಖಗಳು, (ರೂಪಗಳು) ಹೊರತಾಗಿ ಭಿನ್ನವಲ್ಲ. ಈ ಮೂವರು ಮೂರು ಬಗೆಯ ಶಕ್ತಿ ಪಡೆದ ಸಹಧರ್ಮಿಣಿಯರ ಆನುವಿನಿಂದ ಸೃಷ್ಟಿ ಸ್ಥಿತಿ ಲಯ-ಕಾರ್ಯಗಳನ್ನು ನೆರವೇರಿಸುತ್ತಲಿದ್ದಾರೆ. ಕ್ರಿಯಾರ್ಥಕ್ಕಾಗಿ (ಬ್ರಹ್ಮ ವಿಷ್ಣು ಮಹೇಶ್ವರ) ಪುರುಷವೆಂದು (ಸರಸ್ವತಿ ಲಕ್ಷ್ಮಿ ಪಾರ್ವತಿ) ಪ್ರಕೃತಿ ಯೆಂದು ಎರಡಾಗಿದ್ದರೂ, ಮೂಲ ಪರವಸ್ತು ಒಂದೇ ಒಂದು !

ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಇವು ಪಂಚಭೂತಗಳು. ಸ್ಥೂಲ ದೇಹ ನಿರ್ಮಿತಿಯಲ್ಲಿ ಇವುಗಳ ಪಾತ್ರ ಆಗಾಧವಾಗಿದೆ. ಇವುಗಳಲ್ಲಿ ಮೊದಲು

ಆಕಾಶ ಹುಟ್ಟಿದ್ದು, ಶಬ್ದಧಾರಣ ಇದರ ಗುಣಧರ್ಮ. ಆ ಮೇಲೆ ಹುಟ್ಟಿದ ವಾಯು ಪ್ರಾಣಧಾರಣ ಶಕ್ತಿಗೆ ಕಾರಣವಾಯಿತು. ಆಕಾಶ ವಾಯು ಉಭಯತತ್ವ ಕೂಡಿ ಅಗ್ನಿತತ್ವ ಜನಿಸಿ ಜಠರಾಗ್ನಿಗೆ ಪ್ರೇರಕ ಶಕ್ತಿಯಾಯಿತು. ಉರಿಯುವ ಕಟ್ಟಿಗ ಮೂರು ತತ್ವಗಳನ್ನೊಳಗೊಂಡಿದೆ. ಅದು ಉರಿಯುವಾಗ ಧಗ ಧಗ ಎಂದುಂಟಾಗುವ ಶಬ್ದ ಆಕಾಶತತ್ವಕ್ಕೆ. ಜ್ವಾಲೆಯ ಚಲನವಲನ ವಾಯುತತ್ವಕ್ಕೆ, ಸುಡುವುದು ಅಗ್ನಿತತ್ವಕ್ಕೆ ಸಂಕೇತವಾಗಿವ. ಜಲ ನಾಲ್ಕನೆಯ ತತ್ವ. ಅದರ ಗುಣಧರ್ಮ ದ್ರವೀಕರಣ. ಇದರಲ್ಲಿ ನಾಲ್ಕು ತತ್ವ ಅಡಕವಾಗಿವೆ. ನೀರು ಹರಿಯುವಾಗುಂಟಾಗುವ ಜುಳು ಜುಳು ಶಬ್ದ ಆಕಾಶತತ್ವಕ್ಕೆ, ನೀರಲ್ಲಿ ಜಲ ಪ್ರಾಣಿ ಬದುಕುವುದರಿಂದ ವಾಯುತತ್ವಕ್ಕೆ, ಬೆಳಗಿನಲ್ಲಿ ನೀರು ಬಿಸಿಯಾಗಿರುವುದರಿಂದ ಅಗ್ನಿತತ್ವಕ್ಕೆ, ದ್ರವತ್ವ ಇರುವುದರಿಂದ ಜಲತತ್ವಕ್ಕೆ ಕುರುಹಾಗಿವೆ. ಪೃಥ್ವಿ ಐದನೆಯ ತತ್ವವಾಗಿದ್ದು ಅದರ ಗುಣ ಜಿಗುಟುತನ (ಸ್ನಿಗ್ಧತೆ). ಇದರಲ್ಲಿ ಐದು ತತ್ವ ಕೂಡಿವೆ. ಕಲ್ಲು ಕಟೆಯುವುದರಿಂದ ಶಬ್ದವಾಗುವ ಕಾರಣ ಆಕಾಶ ತತ್ವಕ್ಕೆ, ಪೃಥ್ವಿ ತಿರುಗುವ ಕಾರಣದಿಂದ ವಾಯುತತ್ವಕ್ಕೆ, ಕಲ್ಲಿಗೆ ಕಲ್ಲು ತಾಕುವುದರಿಂದ ಕಿಡಿ ಹುಟ್ಟುವ ಕಾರಣ ಅಗ್ನಿತತ್ವಕ್ಕೆ, ಬೆಂಕಿಯನ್ನು ಕಲ್ಲಿನ ಮೇಲಿರಿಸಿದರೆ ತಣ್ಣಗಾಗುತ್ತ ಹೋಗುವುದರಿಂದ ಜಲತತ್ವಕ್ಕೆ, ಕಲ್ಲುಮಣ್ಣಿನಲ್ಲಿ ಜಿಗುಟು ಗುಣ ಇರುವ ಕಾರಣ ಪೃಥ್ವಿತತ್ವಕ್ಕೆ ದ್ಯೋತಕವಾಗಿವೆ.

ಪಂಚಮಹಾಭೂತಗಳಿಂದ ನಾಲ್ಕು ಪ್ರಕಾರದ ಜೀವೋತ್ಪತ್ತಿಯಾಗಿದೆ. ೧. ಪಿಂಡಜ-ಪ್ರಾಣಿ, ಮನುಷ್ಯ ೨. ಅಂಡಜ-ತತ್ತಿಯ ಮೂಲಕ ಹುಟ್ಟುವಂಥವು ಪಕ್ಷಿ ಮೊದಲಾದುವು. ೩. ಉದ್ಭಿಜ-ಸಸ್ಯವರ್ಗ, ಗಿಡ, ಮರ ೪. ಜಲಜ-ಜಲ ಪ್ರಾಣಿಗಳು ಮೀನು, ಮೊಸಳೆ ಮುಂತಾದುವು. ದೈವದತ್ತವಾಗಿ ಬಂದ ಬುದ್ಧಿ ವಿಶೇಷತೆಯಿಂದಾಗಿ, ಮನುಷ್ಯನೇ ಸರ್ವ ಜೀವಿಗಳಲ್ಲಿ ಶ್ರೇಷ್ಠನಾದವನು. ಪಂಚೇಂದ್ರಿಯಗಳಲ್ಲಿ ಪಂಚತತ್ವ ಅಡಕವಾಗಿವೆ. ೧. ಕಿವಿಯಲ್ಲಿ ಆಕಾಶತತ್ವ ಶ್ರವಣಶಕ್ತಿಯಿಂದ ೨. ಚರ್ಮದಲ್ಲಿ ವಾಯುತತ್ವ ೩. ಕಣ್ಣಿನಲ್ಲಿ ಅಗ್ನಿತತ್ವ ನೋಡುವ ತೇಜ ಬಲವಿರುವ ಕಾರಣ. ೪. ನಾಲಿಗೆಯಲ್ಲಿ-ಜಲತತ್ವ-ಜೊಲ್ಲು ದ್ರವಿಸುವ ಕಾರಣ, ೫. ಮೂಗಿನಲ್ಲಿ ಪೃಥ್ವಿತತ್ವ. ಕಣ್ಣು ನೋಡುವುದೆಂದು ಎನಿಸಿದರೂ, ಆ ಕಣ್ಣಿನ ಮೂಲಕ ನೋಡುವಂತಹದು, ಆ ಪರವಸ್ತುವಿನ ಮಹಾಚೇತನ. ಅದೇ ರೀತಿ ಕಿವಿಯ ಮೂಲಕ ಕೇಳುವಂಥ ನಾಲಗೆಯ ಮೂಲಕ ರಸಾಸ್ವಾದ ಮಾಡುವಂಥ ಮೂಗಿನ ಮೂಲಕ ಮೂಸುವಂಥ ಮನಸ್ಸಿನ ಮೂಲಕ ತೃಪ್ತಿಪಡುವಂಥ ಶಕ್ತಿ ಆ ಮಹಾಚೇತನವೇ ಆಗಿದೆ. ಈ ರೀತಿ ಶ್ರೀಗಳು ಪಂಚಭೂತ ತತ್ವ ಕುರಿತು ವೈಜ್ಞಾನಿಕವಾಗಿ ವಿವರಿಸಿರುವರಲ್ಲದೆ, ದಿನ ಬಳಕೆಯ ಉದಾಹರಣೆಗಳ ಮೂಲಕ ಅವುಗಳನ್ನು ಕುರಿತು ಒಂದು ಸ್ಪಷ್ಟ ಚಿತ್ರವನ್ನು ಮೂಡಿಸಿದ್ದಾರೆ.

ಮನುಷ್ಯನು ತಾನು ಹುಟ್ಟಿ ಬಂದುದರ ಮೂಲ, ಮುಟ್ಟಬೇಕಾದ ಗುರಿ ಈ ವಿಚಾರ ಬಗೆಗೆ ಈ ಗ್ರಂಥದಲ್ಲಿ ವಿಪುಲವಾಗಿ ನಿಷ್ಕರ್ಷೆ ಮಾಡಲಾಗಿದೆ. ಈ ದೇಹದ

ಮೂಲಕವೇ ಮನುಷ್ಯನ ಪ್ರಾಪಂಚಿಕ ವ್ಯವಹಾರ ಸಾಗುವದರಿಂದ, ಸುಖದುಃಖ ಅನುಭವಿಸುವದರಿಂದ, ದೇಹವೇ ತಾನು, ಅದರ ವಿಲಾಸ ವೈಭವವೇ ಜೀವನದ ಗುರಿ ಎಂದು ಮನುಷ್ಯ ಭ್ರಮಿಸುತ್ತಾನೆ. ತಾನು ಪರಮಾತ್ಮನಿಂದ ಬಂದ ಆತ್ಮ ಸ್ವರೂಪಿ ಈ ದೇಹ ಕೇವಲ ತನಗೆ (ಆತ್ಮಕ್ಕೆ) ಆಶ್ರಯವಸ್ತು ಎಂಬುದರ ಬಗೆಗೆ ಇಲ್ಲಿ ಸುದೀರ್ಘ ಪ್ರಸ್ತಾಪ ಬಂದುದಾಗಿದೆ. ಮನುಷ್ಯನ ಮೂಲವನ್ನು ತಿಳಿಸಿ ಕೊಡುವದು ಸಾಧಿಸಬೇಕಾದ ಅಂತಿಮ ಗುರಿಯತ್ತ ಅವನ ಕಣ್ಣು ತೆರೆಯಿಸುವದು ಶ್ರೀಗಳವರ ಗ್ರಂಥ ರಚನೆಯ ಮುಖ್ಯ ಉದ್ದೇಶವಾಗಿದೆ. ತಮ್ಮ ಮೂಲವನ್ನು ಅರಿಯುವಗೋಸುಗ ಯೋಗಾನುಷ್ಠಾನ ಮಾಡಿ ತುತ್ತತುದಿಗೆ ಪುರಾತನ ತಪಸ್ವಿ ಯೋಗಿಗಳು ತಾವು ಕಂಡುಕೊಂಡ ಪ್ರಕಾರ 'ಅಹಂ ಬ್ರಹ್ಮಾಸ್ಮಿ' ಎಂದು ಆನಂದದಲ್ಲಿ ಉದ್ಗರಿಸಿದ್ದಾರೆ. ಆದರೆ ದುಡಿದ ಫಲವಾಗಿ ಮೂಡಿದ ಸತ್ಯವೆಂಬುದನ್ನು ಅರಿಯದೆ ದುಡಿಯದ ವೇಷಧಾರಿಗಳು ಸಹ 'ಅಹಂ ಬ್ರಹ್ಮಾಸ್ಮಿ' ಎಂದು ಹೇಳುವುದು ಉಚಿತವಲ್ಲ, ಬಾಯಿ ಬ್ರಹ್ಮಜ್ಞಾನದಿಂದ ತನ್ನ ಸ್ವರೂಪ ದರ್ಶನವಾಗುವದಿಲ್ಲ. ದುಡಿ, ದುಡಿದು ಪಡೆ –ಎಂಬುದನ್ನು ಶ್ರೀಗಳು ಈ ಗ್ರಂಥದಲ್ಲಿ ಸವಿವರವಾಗಿ ಸ್ಪಷ್ಟೀಕರಿಸಿದ್ದಾರೆ.

ಬ್ರಹ್ಮಜ್ಞಾನ ಕುರಿತು ಎಷ್ಟು ಹೇಳಿದರೇನು, ಓದಿದರೇನು ಅದು ಬರಿ ಶಬ್ದ ಜ್ಞಾನ, ಬ್ರಹ್ಮಜ್ಞಾನವಲ್ಲ. ಯೋಗಾನುಷ್ಠಾನದಿಂದ ಜ್ಞಾನ ಪಡೆದವನಿಗೆ ಮಾತ್ರ ಬ್ರಹ್ಮಸಾಕ್ಷಾತ್ಕಾರ(ಸ್ವಸ್ವರೂಪದರ್ಶನ) ಸಾಧ್ಯವೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಜಾಗೃತ, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳನ್ನು ಪಲ್ಲಟ ಮಾಡಿ, ಸವಿಕಲ್ಪ ನಿರ್ವಿಕಲ್ಪ ಎಂಬ ನಾಲ್ಕನೆಯ ಐದನೆಯ ಅವಸ್ಥೆಗಳಿಗೆ ತಲುಪಿದವನಿಗೆ ಮಾತ್ರ ಬ್ರಹ್ಮಜ್ಞಾನ ಸಾಧ್ಯ. ಅಂಥವನೆ ನಿಜವಾದ ಯೋಗಿ. ಹಾಗೆ ಯೋಗದಲ್ಲಿ ಪರಿಪೂರ್ಣತ್ವವನ್ನು ಸಾಧಿಸಿಕೊಂಡವನೆ ಯೋಗ ವಿಚಾರ ಕುರಿತು ಮಾರ್ಗದರ್ಶನ ಮಾಡಬಲ್ಲ ಗುರು. ಅಂಥ ಯೋಗ್ಯ ಗುರುವಿನ ಮಾರ್ಗದರ್ಶನ ಪಡೆದು ಯೋಗಾನು ಸಂಧಾನ ಮಾಡಿದ ಮೇಲೆ ಬ್ರಹ್ಮಸಾಕ್ಷಾತ್ಕಾರವುಂಟಾಗುವದು. ಆದರೆ ಮೊದಲಿನ ಮೂರು ಅವಸ್ಥೆಗಳನ್ನು ಮುಟ್ಟಿದವನಿಗೆ ಕೇವಲ ಶಬ್ದಜ್ಞಾನ ವುಂಟಾಗುವದು. ಅಂಥವನು ಶರೀರ ಗುಣಗಳಿಗೆ ಒಳಗಾಗಿ, ಇಂದ್ರಿಯ ಗಳಿಗೆ ಪ್ರಭುವಾಗಲಾರನು. ಅವನು ಪಂಡಿತನೆನಿಸಬಹುದು, ಆದರೆ ನಿಜ ಬ್ರಹ್ಮಜ್ಞಾನಿ ಎನಿಸಲಾರನು. ಭವ ಬಂಧನದಿಂದ ಬಿಡುಗಡೆಯಾಗಲಾರನು. ಮತ್ತೆ ಹುಟ್ಟು ಮತ್ತೆ ಸಾವು ಅಂಥವನಿಗೆ ತಪ್ಪಲಾರದು. ಅಂಥವನು ಹಾಲಿನಲ್ಲಿ ತುಪ್ಪವಿರುವುದೆಂದು ಕಲ್ಲಿನಲ್ಲಿ ಬೆಂಕಿಯಿರುವುದೆಂದು ಹೇಳಬಹುದು. ಆದರೆ ಪ್ರತ್ಯಕ್ಷ ತುಪ್ಪವನ್ನು ಪಡೆದುಕೊಂಡು ಹಾಗೂ ಬೆಂಕಿಯನ್ನು ಕಂಡುಕೊಂಡ ಸ್ವಾನುಭವ

ಇರುವದಿಲ್ಲ. ಅಂಥವನು ಶರೀರಗುಣದಿಂದ ಕ್ಷಣಿಕಾನಂದ ಪಡೆಯಬಹುದು, ಹೊರತು ಪೂರ್ಣಾನಂದ ಬ್ರಹ್ಮಾನಂದ ಪಡೆಯಲಾರನು.

ಐದು ಅವಸ್ಥೆಗಳನ್ನು ಸಾಧಿಸಿ ಸಿದ್ಧಿ ಪಡೆದವನು ಶರೀರ ಗುಣಗಳಿಗೆ ಅಂಟಿಕೊಳ್ಳಲಾರನು. ಮಜ್ಜಿಗೆಯ ಮೇಲೆ ತೇಲುವ ಬೆಣ್ಣೆಯಂತೆ ಅವನ ಇರವು. ಕೆಸರಿನೊಳಗಿದ್ದು ಕೆಸರಿಗಂಟಿಕೊಳ್ಳದ ಕುಂಬಾರ ಹುಳುವಿನ ಪರಿ ಅವನದು. ನೀರಿನೊಳಗಿದ್ದು ನೀರಿಗಂಟಿಕೊಳ್ಳದ ಕಮಲದ ನಿರ್ಲಿಪ್ತತೆ ಆತನದು. ಆತ ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ, ಕಾಯವಿದ್ದು ಅಕಾಯನು. ಭಾವವಿದ್ದು, ನಿರ್ಭಾವ ಅವನದು. ಶಿವಸಾಕ್ಷಾತ್ಕಾರ ಮಾಡಿಕೊಂಡವನ ಸ್ಥಿತಿಯಿದು. ಸಂಪತ್ತು ಬಂದರೆ ಶಿವ ಕೊಟ್ಟನೆನ್ನುವನು. ಶಿವನ ಸೊಮ್ಮು ಶಿವನಿಗೆ ಸಲ್ಲಿಸಿ ಸಂತೃಪ್ತಿ ಹೊಂದುವನಾತ. ಸಂಪತ್ತು ಕಳೆದು ಹೋದರೆ, ಶಿವ ತನ್ನದನ್ನು ತಾನು ಒಯ್ದನೆಂದು ನಿಶ್ಚಿಂತನಾಗುವನು. ಬಂದರೆ ಹಿಗ್ಗಲಾರ, ಹೋದರೆ ಕುಗ್ಗಲಾರ. ಇದು ಕೈಲಾಗದವನ ನಿರಾಶಾವಾದವಲ್ಲ. ಆಶೆ ನಿರಾಶೆಯಿಂದಾಚೆ ನಿಂತ ಸ್ಥಿತಪ್ರಜ್ಞ ಸ್ಥಿತಿ! ಯಾರಿಗೂ ಬಿರುನುಡಿಯಾಡಲಾರ. ಹೊಗಳಿದರೆ ಹೊನ್ನಶೂಲಕ್ಕೇರಿಸಿದ ರೆನ್ನುವನು. ತೆಗಳಿದರೆ ಕರ್ಮಕಳೆಯಿತೆಂಬನು. ಅವನು ದುಡಿಮೆಯಿಂದ ದೂರನಲ್ಲ ವ್ಯವಹಾರಶೂನ್ಯನಲ್ಲ.

"ನಾನು ಆರಂಭವ ಮಾಡುವೆನಯ್ಯಾ ಗುರು ಪೂಜೆಗೆಂದು, ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು". ಬಸವಣ್ಣನವರು ದುಡಿಯುವದನ್ನು ಬಿಡಲಿಲ್ಲ, ಸಂಸಾರದಿಂದ ವಿಮುಖರಾಗಲಿಲ್ಲ. ತಮ್ಮ ಜೀವನದ ಗುರಿಯನ್ನು ಮರೆಯಲಿಲ್ಲ. ಗುರು ಪೂಜೆಗೆ, ಲಿಂಗಾರ್ಚನೆಗೆ, ಜಂಗಮ ದಾಸೋಹಕ್ಕೆ ಬೆವಹಾರ ಬೇಕು, ಶಿವಸಾಕ್ಷಾತ್ಕಾರಕ್ಕೆ (ಆತ್ಮಸಾಕ್ಷಾತ್ಕಾರಕ್ಕೆ) ಗುರು ಪೂಜೆ, ಲಿಂಗಾರ್ಚನೆ, ಜಂಗಮ ದಾಸೋಹ ಬೇಕು. ಸಂಸಾರಿಯಾಗಿದ್ದೂ ಬಸವಣ್ಣ ಶಿವಯೋಗಿಯಂತಿದ್ದ. ಶಿವಸಾಕ್ಷಾತ್ಕಾರ ಮಾಡಿಕೊಂಡ ಶಿವಯೋಗಿಯ ಸ್ಥಿತಿ ಇಂತಿಹುದು. ಲಿಂಗವನರಿತು ಲಿಂಗವಾದವರ ಪರಿಯನ್ನು ಹಾಗೆ ಲಿಂಗವಾದವರ ಪ್ರಸಾದ ವಾಣಿಯಿಂದಲೇ ತಿಳಿದುಕೊಳ್ಳಬೇಕು.

**"ಕರಸ್ಥಲ ಲಿಂಗವೆ ಕಾಯಕ್ಕೆ ವೇಧಿಸಿದಲ್ಲಿ**
**ಕಾಯ ಲಿಂಗವಾಯಿತ್ತು.**
**ಅಂತಾದ ಮಹಾಘನ ಲಿಂಗವೆ ಪ್ರಾಣಕ್ಕೆ ವೇಧಿಸಿದಲ್ಲಿ**
**ಪ್ರಾಣ ಲಿಂಗವಾಯಿತ್ತು.**
**ಅಂತಾದ ಮಹಾಘನ ಲಿಂಗವೆ ಭಾವಕ್ಕೆ ವೇಧಿಸಿದಲ್ಲಿ**
**ಭಾವ ಲಿಂಗವಾಯಿತ್ತು.**

ಅಂತಾದ ಮಹಾಘನ ಲಿಂಗವೆ ಜ್ಞಾನಕ್ಕೆ ವೇಧಿಸಿದಲ್ಲಿ
ಜ್ಞಾನ ಲಿಂಗವಾಯಿತ್ತು"

(ಅಲ್ಲಮಪ್ರಭುದೇವರ ವಚನ: ೧೩೬೧)

ಶರಣ ಶಿವಯೋಗಿಗಳ ಸರ್ವಾಂಗ ಲಿಂಗವಾಗುವ ಬಗೆಯನ್ನು ಅಲ್ಲಮಪ್ರಭು ಅನುಭವಿಸಿ ಹೇಳಿದ ನುಡಿಯಿದು.

ಹೀಗೆ ಲಿಂಗಸ್ವರೂಪಿಯಾದ ಶರಣನು ಎಲ್ಲರೂ ಇರುವಂತೆ ಇದ್ದು, ಲೋಕದ ನಡವಳಿಕೆಯಿಂದ ಭಿನ್ನವಾಗಿರುತ್ತಾನೆ. ಕರಣೇಂದ್ರಿಯ ಮನಸ್ಸು, ಅಹಂಕಾರ, ಸಪ್ತ ವ್ಯಸನ, ಅಷ್ಟಮದ, ಅರಿಷಡ್ವರ್ಗ ಮೊದಲಾದವುಗಳಿಗೆ ಅಧೀನವಾಗುವುದಿಲ್ಲ. ತನ್ನ ಉದ್ದೇಶಕ್ಕನುಗುಣವಾಗಿ ಅವನು ಅವುಗಳನ್ನು ಪರಿವರ್ತಿಸಿಕೊಳ್ಳುತ್ತಾನೆ. ಅಂಗದ ಅವಗುಣ ಕಳೆದು ಲಿಂಗಗುಣದ ಆವಿಷ್ಕಾರ ನೀಡುವುದು ಶರಣ ಶಿವಯೋಗಿಗಳ ನೀತಿ.

ಪ್ರಾಣದ ಗುಣಧರ್ಮ ಪಚನಕ್ರಿಯೆ, ಅನ್ನದ ರುಚಿಯ ಮೂಲಕ ತೃಪ್ತಿ ಪಡುವುದು ಆತ್ಮದ ಧರ್ಮ. ಸರಿ-ತಪ್ಪು ತೂಗಿ ನೋಡುವುದು ಬುದ್ಧಿಯದಾದರೆ, ಸಂಕಲ್ಪ ವಿಕಲ್ಪ ಮಾಡುವುದು ಮನಸ್ಸಿನದು. ನಾ ನನ್ನದು ಎಂಬುವುದು ಅಹಂಕಾರದ ಧರ್ಮ. ಸಕಲವನ್ನು ಚಿತ್ರಿಸಿಕೊಳ್ಳುವುದು ಚಿತ್ತಿನ ಧರ್ಮ. ಸಾಮಾನ್ಯರಲ್ಲಿ ಇವು ತಮ್ಮ ಮೂಲಸ್ವಭಾವದಂತೆ ವರ್ತಿಸಿದರೆ, ಯೋಗಿಯಲ್ಲಿ ಯೋಗಿಯ ಒಲವಿನಂತೆ ವರ್ತಿಸುತ್ತವೆ. ಶರಣ ತಾನು ಲಿಂಗವಾಗುವನಲ್ಲದೆ ತನ್ನ ಜೀವನದೊಳಗೆ ಪ್ರವೇಶಿಸುವ ಜೀವಭಾವ ಕ್ರಿಯೆಗಳಿಗೆಲ್ಲ ಲಿಂಗಸಂಸ್ಕಾರ ನೀಡುತ್ತಾನೆ. ಬೆಳದಿಂಗಳು ಸ್ವತಃ ಶಾಂತಿ ಪ್ರಶಾಂತವಾಗಿರುವುದಲ್ಲದೆ ತನ್ನ ಪರಿಸರದೊಳಗೆ ಬಂದ ಸಕಲ ಪಡಿ ಪದಾರ್ಥಕ್ಕೆ ಶಾಂತಿ ಪ್ರಶಾಂತಿಯನ್ನು ನೀಡುವುದುಂಟು. ಶಿವಯೋಗಿ ಶರಣರ ನಡವಳಿಕೆ ಈ ರೀತಿಯದು.

ಅಲ್ಲಮಪ್ರಭು ಹೇಳಿದಂತೆ ಶರಣನು ಗುರುತತ್ವದಲ್ಲಿ ಹುಟ್ಟಿ ಶಿವತತ್ವದಲ್ಲಿ ಬೆಳೆದು ಪರತತ್ವದಲ್ಲಿ ಮಗ್ನನಾದವನು. ಕಾಯ ಸಮಾಧಿ, ಕರಣ ಸಮಾಧಿ, ಭಾವ ಸಮಾಧಿಯಾಗಿ ಸುಜ್ಞಾನ ಸಮಾಧಿಯ ಹೊಂದಬಲ್ಲಾತ ಶರಣ, ಅದೇ ಶಿವಯೋಗಿ ಶರಣರು ಸಾಧಿಸುವ ನಿಜ ಸಮಾಧಿ, ಹಾಗೆ ಯೋಗಾನುಷ್ಠಾನದಿಂದ ಶ್ರೀ ಚೆನ್ನವೀರ ಶಿವಯೋಗಿಗಳು ಸುಜ್ಞಾನಿ ಸಮಾಧಿಯ ಹೊಂದಿದವರು. ಯೋಗಾನುಭಾವದ ಫಲವಾಗಿ ಮೂಡಿ ಬಂದ ಈ ಗ್ರಂಥಕ್ಕೆ ಒಂದು ವಿಶಿಷ್ಟ ಸ್ಥಾನಮಾನವಿದೆ. ಯೋಗ ಸಾಧನೆಯಲ್ಲಿ ಎಲ್ಲ ಅವಸ್ಥೆಗಳಲ್ಲಿಯ ವಿಶೇಷವಾಗಿ ನಾಲ್ಕನೆಯ (ಸವಿಕಲ್ಪ) ಮತ್ತು ಐದನೆಯ (ನಿರ್ವಿಕಲ್ಪ) ಅವಸ್ಥೆಗಳಲ್ಲಿಯ ಅಲೌಕಿಕ ಅನುಭವದ ಬಗೆಗೆ ರಸವತ್ತಾದ ಚಿತ್ರ ಇಲ್ಲಿ ಮೂಡಿಬಂದಿದೆ. ನಾದ ಬಿಂದು ಕಲೆಗಳ ಬಗೆಗೆ ಮತ್ತು ಬ್ರಹ್ಮ ವಿಷ್ಣು ಮಹೇಶ್ವರರ ದಿವ್ಯ ದರ್ಶನ ಬಗೆಗೆ ಹಾಗೂ ಶರಣ ಗಣ ದರ್ಶನ ಬಗೆಗೆ ತಾವು

ಕಂಡುಕೊಂಡ ಸ್ವಾನುಭವವನ್ನಿಲ್ಲಿ ಶ್ರೀಗಳು ಮನಂಬುಗುವಂತೆ ವಿವರಿಸಿದ್ದಾರೆ. ಕೋಟಿಸೂರ್ಯಪ್ರಭೆಯಂತಹ ಸಪ್ತವರ್ಣ ಜ್ಯೋತಿಯೆ ಪರಶಿವನ ಸಚ್ಚಿದಾನಂದ ಸ್ವರೂಪವೆಂದು, ಅದುವೆ ತನ್ನ (ಮಾನವನ) ಮೂಲ ಸ್ವರೂಪವೆಂದು ಅರಿತ ಮೇಲೆ ಓದುಗರ ಮೈಗುಡಿಗಟ್ಟುವುದು. ಮನ ಪುಳಕಾಂಕುರಗೊಳ್ಳುವುದು. ಇನ್ನು ಕಂಗಳಲ್ಲಿ ಮಹಾಬೆಳಗು ತುಂಬಿಕೊಂಡ ಆ ಮಹಾಬೆಳಗೆ ತಾನಾದ ಮಹಾಯೋಗಿ ಗುಂಟಾದ (ಪ್ರತ್ಯಕ್ಷದರ್ಶಿಗುಂಟಾದ) ಅನುಭಾವಕ್ಕೆ ಸ್ವಾನುಭವವೆ ವಿವರಣೆ, ಮಹದಾನಂದದಲ್ಲಿ ತನ್ಮಯವಾದ ಜೀವಭಾವಕ್ಕೆ ಹೇಳಬೇಕೆಂದು ಹೊಳೆಯುವದೆಂತು? ಭಾವಮೂಕವಾದ ಮೇಲೆ ಶಬ್ದ ಮುಗ್ಧವಷ್ಟೆ !

ಬ್ರಹ್ಮಜ್ಞಾನದಂಥ ವಿಷಯ ಪ್ರತಿಪಾದನೆ ಬಹು ಜಟಿಲವಾದುದು. ಆ ವಿಷಯ ಕುರಿತು ಹಲವಾರು ಗ್ರಂಥ ಓದಿ ಬರೆಯುವಂಥ ವಿಷಯವಲ್ಲ. ಬ್ರಹ್ಮ ಜ್ಞಾನದ ಅನುಭಾವ ನಿರೂಪಣೆಗೆ ಸ್ವಾನುಭವವೆ ಶಬ್ದ, ಸ್ವಾನುಭವವೆ ಶೈಲಿ. ಜಿಜ್ಞಾಸುಗಳು ಈ ಗ್ರಂಥದಲ್ಲಿ ಮೈದುಂಬಿಕೊಂಡ ಅನುಭಾವವನ್ನು ಗಮನಿಸಬೇಕು ಹೊರತಾಗಿ ಭಾಷೆಯನ್ನಲ್ಲ. ಶ್ರೀಗಳವರು ವಿಷಯಕ್ಕನುಗುಣವಾಗಿ ಉಪನಿಷತ್ತಿನ ಶ್ಲೋಕಗಳನ್ನು ಕನ್ನಡದ ಅನುಭವದ ಪದ್ಯಗಳನ್ನು ವಿಷಯಪುಷ್ಟಿಗೆಂದು ಬಳಸಿ ಕೊಂಡಿದ್ದಾರೆ.

ತಾಯಿ ಕೂಸಿಗೆ ತುತ್ತು ಮಾಡಿ ಉಣಿಸುವ ರೀತಿ ಈ ಶಿವಯೋಗಿಗಳ ಶೈಲಿ. ಅಕ್ಕರೆ ತುಂಬಿದ ಉಣಿಸು, ಬೆಳೆದು ಬೆಳಕಾಗಲೆಂಬ ಹಿರಿದಾದ ಮನಸ್ಸು ಇದ್ದ ಮೇಲೆ ಕೂಸು ಬೆಳೆದು ದೊಡ್ಡವನಾಗದಿರುವನೆ ? ಮನೆಗೆ ಬೆಳಕಾಗದಿರುವನೆ ? ತಾಯಿಯ ತುತ್ತಿನಿಂದ ಮಗು ಉದ್ಧಾರವಾಗುವಂತೆ ತಾಯಿಯಂಥ ಹೃದಯವುಳ್ಳ ಶ್ರೀಗಳ ಅನುಭಾವದುಣಿಸನ್ನುಂಡ ಓದುಗರು ಉದ್ಧಾರಗೊಂಡರೆ ಅವರು ಪಟ್ಟಶ್ರಮ ಸಾರ್ಥಕವಾದೀತು. ಗಿಡ ಹಚ್ಚಿದ್ದಾರೆ, ಫಲ ಬೆಳೆಸಿದ್ದಾರೆ, ತಿಂದು ತಣಿಯುವದು ನಮ್ಮ ಪಾಲಿಗೆ ಬಿಟ್ಟದ್ದು.

ಉತ್ತಿ ಬಿತ್ತಿದ ಮೇಲೆ ಬೆಳೆ. ಚಿತ್ತವ ನಿಗ್ರಹಿಸಿ ಯೋಗಾನುಷ್ಠಾನ ಮಾಡಿದ ಮೇಲೆ 'ಶಿವೋऽಹಂ' ಅಥವಾ 'ಅಹಂ ಬ್ರಹ್ಮಾಸ್ಮಿ.' ದುಡಿದಲ್ಲದೆ ಪಡೆದಲ್ಲದೆ 'ಅಹಂ ಬ್ರಹ್ಮಾಸ್ಮಿ' ಎಂದು ಹೇಳುವುದು, ಮಾತಿನ ಅದ್ವೈತ. ಅದಕ್ಕಾಗಿ ಗ್ರಂಥಕರ್ತರು ಮಾತಿನ ಅದ್ವೈತಿಗಳ ವಾದವನ್ನು ಖಂಡಿಸಿರುವಲ್ಲಿ ಅವರ ಉದ್ದೇಶ ವಿರುವದು. ವ್ಯರ್ಥ ಮಾತು ಬೇಡ, ಮಾತಾಡಿ ದಣಿಯುವದಕ್ಕಿಂತ ಆಡಿದಂತೆ ಮಾಡಿ ಉದ್ಧಾರವಾಗಬೇಕೆಂಬುದು ಐಕ್ಯಸ್ಥಲ ಮುಟ್ಟಿ, ಶಿವ ಸ್ವರೂಪಿ ತಾನಾಗಿ, ಹೇಳಿಯೂ ಹೇಳದಂತಿದ್ದ ಬಸವಣ್ಣನ ದಿವ್ಯಾನುಭಾವದೊಂದಿಗೆ ಮುಗಿಸುತ್ತೇನೆ.

"ಸಮಸ್ತ ಕತ್ತಲೆಯು ಮುಸುಕಿನ ಕಳೆದಿಪ್ಪ ಇರವ ನೋಡಾ
ಬೆಳಗಿಗೆ ಬೆಳಗು ಸಿಂಹಾಸನವಾಗಿ
ಬೆಳಗು ಬೆಳಗ ಕೂಡಿದ ಕೂಟವ
ಕೂಡಲಸಂಗಯ್ಯ ತಾನೇ ಬಲ್ಲ."

(ಬ. ವ. ೯೫೮)

ಕೂಡಲಸಂಗಯ್ಯ ಹೇಳಬಲ್ಲ ಅನುಭಾವ ಕುರಿತು ನಾನೇನು ತಿಳಿಯಬಲ್ಲೆ ? ಹೇಳಬಲ್ಲೆ ? ಶಿವಯೋಗಿಗಳು ಕೊಡಿಸಿದ ಅಪ್ಪಣೆಯನ್ನು ಶಿರಸಾವಹಿಸಿ ನಾಲ್ಕು ಮಾತು ನುಡಿದಿದ್ದೇನೆ. ಇಂಥ ಅವಕಾಶ ಸಿಕ್ಕಿದ್ದು ನನ್ನ ಪುಣ್ಯ. ಈ ಗ್ರಂಥದ ವಿಷಯ ಪ್ರವೇಶಕ್ಕೆ ಈ ನಾಲ್ಕು ಮಾತು ಉಪಯುಕ್ತವಾದಲ್ಲಿ ನಾನು ಧನ್ಯ. ಶಿವಯೋಗಿಗಳ ಚರಣಾರವಿಂದಕ್ಕೆ ನಮಿಸುವೆ.

# ೧೫.

# ಜ್ಞಾನ ಗುಮ್ಮಟ ಹಳಕಟ್ಟಿಯವರು

ಒಳ್ಳೆಯ ಮನುಷ್ಯನಿಗೆ ಹೇಗೊ ಹಾಗೆಯೆ ಒಳ್ಳೆಯ ಸಾಹಿತ್ಯಕ್ಕೂ ಕಂಟಕ ಹೆಚ್ಚು. ಒಳ್ಳೆಯನಲ್ಲದವನಿಗೆ ಒಳ್ಳೆಯ ಮನುಷ್ಯನಾಗಲಿ ಒಳ್ಳೆಯ (ಉದಾತ್ತ) ಸಾಹಿತ್ಯವಾಗಲಿ ಶತ್ರುವಾಗಿ ಕಂಡರೆ ಆಶ್ಚರ್ಯವಿಲ್ಲ. ಹೂಗಾರನಿಗೆ ಮೀನಿನ ವಾಸದ ಬಗೆಗೆ ಜಿಗುಪ್ಸೆ, ಮೀನುಗಾರನಿಗೆ ಹೂವಿನ ಸುಗಂಧದ ಜಿಗುಪ್ಸೆ. ಸಂಸ್ಕಾರ ಹೇಗೊ ಹಾಗೆ ಮನಸು. ಮನಸು ಹೇಗೋ ಹಾಗೆ ಬದುಕು. ಸಂಸ್ಕಾರದಂತೆ ರುಚಿ ಅಭಿರುಚಿ. ಒಬ್ಬರಿಗೆ ಉದಾತ್ತ ವಿಚಾರ ಅನುದಾತ್ತವಾಗಿ ಅನಿಸಿದರೆ, ಇನ್ನೊಬ್ಬರಿಗೆ ಅನುದಾತ್ತ ವಿಚಾರ ಉದಾತ್ತವಾಗಿ ಅನಿಸಬಹುದು. ಯಾವುದರಿಂದ ಯಾರಿಂದ ತಮ್ಮ ಸ್ವಾರ್ಥ ಸುಖಕ್ಕೆ ವ್ಯತ್ಯಯ ಬರುವುದೊ ಅದೆಲ್ಲವೂ ಅವರಿಗೆ ವರ್ಜ್ಯ.

ಎಲ್ಲ ಅನುಭಾವ ಸಾಹಿತ್ಯದಂತೆ ವಚನಸಾಹಿತ್ಯವೂ ಬದುಕನ್ನು ಉದಾತ್ತೀಕರಿಸುವ ಧೋರಣೆಯುಳ್ಳದ್ದು. ಸಾಹಿತ್ಯಕ್ಕೂ ಜೀವನಕ್ಕೂ ಅವಿನಾಭಾವ ಸಂಬಂಧವಿರುವಂತೆ ತತ್ವಜ್ಞಾನಕ್ಕೂ ಜೀವನಕ್ಕೂ ಒಂದು ಅನ್ಯೋನ್ಯ ಸಂಬಂಧವಿರುತ್ತದೆ. ಜೀವನಕ್ಕೆ ಸಂಬಂಧವಿಲ್ಲದ ಸಾಹಿತ್ಯವಾಗಲಿ ತತ್ವಜ್ಞಾನವಾಗಲಿ ಹುಟ್ಟುವುದು ಹೇಗೆ ? ತನ್ನ ಬದುಕನ್ನೂ ಬದುಕುತ್ತ ಸುತ್ತಲಿನ ಬದುಕನ್ನೂ ವೀಕ್ಷಿಸುತ್ತ ಪಡೆದ ಅನುಭವಕ್ಕೆ ಶಬ್ದಗಳಿಂದ ಒಪ್ಪ ಓರಗೊಳಿಸಿ, ಸಾಹಿತಿ ಸಾಹಿತ್ಯವನ್ನು ರಚಿಸುತ್ತಾನೆ. ಉದಾತ್ತವನ್ನೆ ಬದುಕನ್ನಾಗಿ ಮಾಡಿಕೊಂಡಾಂತ ತನ್ನ (ಉದಾತ್ತ) ಅನುಭವಕ್ಕೆ ಒಂದು ತಾತ್ವಿಕ ರೂಪುರೇಷೆ ಕೊಟ್ಟು ತತ್ವಜ್ಞಾನವನ್ನೂ ಹುಟ್ಟುಹಾಕುತ್ತಾನೆ. ಎಲ್ಲ ಸಾಹಿತ್ಯವು ತತ್ವಜ್ಞಾನವಾಗಲಿಕ್ಕಿಲ್ಲ, ಆಗಬೇಕೆಂಬ ನೇಮವಿಲ್ಲ. ಎಲ್ಲ ತತ್ವಜ್ಞಾನವೂ ಸಾಹಿತ್ಯ ವಾಗಲಿಕ್ಕಿಲ್ಲ, ಆಗಬೇಕೆಂಬ ನೇಮವಿಲ್ಲ. ಆದರೆ ಬಸವಾದಿ ಶರಣರ ಕೆಲ ವಚನಗಳು ಮಾತ್ರ ಸಾಹಿತ್ಯವೂ ಅಹುದು, ತತ್ವಜ್ಞಾನವೂ ಅಹುದು. ಯಾಕಂದರೆ ಸಕಲ ಜೀವಾತ್ಮರ ಬದುಕನ್ನೂ ಅಚ್ಚುಕಟ್ಟುಗೊಳಿಸುವ ಹಾಗು ಲೇಸ ಬಯಸುವ ಉದಾತ್ತ ಧೋರಣೆಯುಳ್ಳದ್ದು ವಚನ ಸಾಹಿತ್ಯ.

ಆದರೆ ಸಕಲರಿಗುಂಟಾಗುವ ಸುಖ ಸೌಲಭ್ಯ ಸಮಾನತೆ ಕೆಲವರ ಅನಾಯಸ ವೈಭವ ವಿಲಾಸಕ್ಕೆ ವ್ಯತ್ಯಯವನ್ನುಂಟುಮಾಡಲೂಬಹುದು. ಅವರಿಗದು ಮಾರಕ ವಾಗಿ ಪರಿಣಮಿಸಿದರೆ ಸೋಜಿಗವಲ್ಲ. ಕೆಳಮಟ್ಟದಲ್ಲಿದ್ದವರು ಕೆಳಗೇ ಇರಬೇಕು. ಎತ್ತರದಲ್ಲಿದ್ದವರು ಎತ್ತರದಲ್ಲಿಯೇ ಇರಬೇಕು. ಅವರು ಎತ್ತರಕ್ಕೇರಿದರೆ ತಮ್ಮ

ಪ್ರತಿಷ್ಠೆಗೆ ಕುಂದು ಎಂದು ವಂಶಪರಂಪರೆಯಿಂದ ಉನ್ನತಸ್ಥಾನದಲ್ಲಿದ್ದವರು ಭಾವಿಸುತ್ತಾರೆ. ಏಸುವಿನ ಉದಾತ್ತಧೋರಣೆ ಕೆಲವರಿಗೆ ಅಪಥ್ಯವಾಗಿ ಕಂಡುಬಂದದ್ದರಿಂದ, ಅಂಥವರಲ್ಲಿ ಸಿಡಿದ ರೊಚ್ಚು ಅವಿವೇಕವಾಗಿ ವರ್ತಿಸಿದ್ದರಿಂದ, ಆ ಪುಣ್ಯಾತ್ಮ ದುರಂತ ಮರಣವನ್ನಪ್ಪಬೇಕಾಯಿತು. ಆದರೆ ಅವನ ಉದಾತ್ತ ವೈಚಾರಿಕ ತತ್ವಕ್ಕೆ ಮರಣವಿಲ್ಲ. ಹಾಗೆಯೇ ಉದಾತ್ತ ಧೋರಣೆ ಆಚರಣೆಯಿಂದಾಗಿಯೆ, ಶರಣದ್ವಯರ ಹೊಸ ಬಾಂಧವ್ಯಕ್ಕೆ ವರ್ಣಸಂಕರದ ಬಣ್ಣ ಬಳಿದ ಪರಿಣಾಮವಾಗಿ, ಅವರಿಬ್ಬರು ಅಮಾನುಷ ಸಾವಿಗೆ ಆಹುತಿಯಾಗಬೇಕಾಯಿತು, ಆದರೆ, ಒಟ್ಟಂದದ ಶರಣರ ವಚನಗಳ ಉದಾತ್ತ ವಿಚಾರಕ್ಕೆ ಎಂದೆಂದಿಗೂ ಸಾವೆಂಬುದಿಲ್ಲ.

ಎಲ್ಲಿಯೋ ಅಜ್ಞಾತದಲ್ಲಿದ್ದ ೧೨ನೆಯ ಶತಮಾನದಲ್ಲಿಯ ಈ ವಚನಗಳನ್ನು ಶೋಧಿಸಿ ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಕನ್ನಡ ನಾಡಿಗೆ ಕೊಟ್ಟವರು ಡಾ॥ ಫ. ಗು. ಹಳಕಟ್ಟಿಯವರು. ವಿದ್ಯಾರ್ಥಿ ದೆಸೆಯಲ್ಲಿಯೆ ತಾಡೋಲೆಗಳನ್ನು ಶೋಧಿಸುವಲ್ಲಿ ಹಳಕಟ್ಟಿಯವರಿಗೆ ಒಂದು ಬಗೆಯ ಅಭಿರುಚಿ, ಆಸಕ್ತಿ ಇದ್ದಿತು. ವಕೀಲರಾದ ಮೇಲೆ ಸಂಸಾರ ಕಟ್ಟಿಕೊಂಡ ಮೇಲೆ ಅವರು ಕವಲು ದಾರಿಯಲ್ಲಿ ಬಂದು ನಿಲ್ಲುವಂತಾಯಿತು. ಸಂಸಾರವನ್ನು ವ್ಯವಸ್ಥಿತವಾಗಿ ಸಾಗಿಸಿಕೊಂಡು ಹೋಗಬೇಕಾದರೆ ವಕೀಲಿವೃತ್ತಿಯನ್ನು ಕೈಬಿಡದೆ ಮುಂದುವರಿಸಿಕೊಂಡು ಹೋಗಬೇಕು. ಈ ವೃತ್ತಿಗೆ ಅಂಟಿಕೊಂಡರೆ ತಾಡೋಲೆಗಳನ್ನೂ, ವಚನಗಳನ್ನೂ ಶೋಧಿಸುವ ಕೆಲಸಕ್ಕೆ ಶರಣು ಹೊಡೆಯಬೇಕು. ಈ ಧರ್ಮಸಂಕಟದಲ್ಲಿ ತೊಳಲಾಡುವಾಗ ಹಳಕಟ್ಟಿಯವರಿಗೆ ಸೂಕ್ತ ಮಾರ್ಗದರ್ಶನ ಮಾಡಿ ವಚನ ಶೋಧನೆಯ ಕೆಲಸಕ್ಕೆ ಪ್ರೇರೇಪಿಸಿದವರು ಚಿಕ್ಕೋಡಿ ತಮ್ಮಣ್ಣಪ್ಪನವರು. ಹಳಕಟ್ಟಿಯವರಿಗೆ ತಮ್ಮಣ್ಣಪ್ಪನವರು ಮಾವಂದಿರು. ವೈಯಕ್ತಿಕ ಸಂಸಾರದ ಮಟ್ಟಕ್ಕೆ ಆ ಬಾಂಧವ್ಯ ಸೀಮಿತಗೊಂಡಿದ್ದರೆ, ಹಳಕಟ್ಟಿಯವರು ವಚನ ಪಿತಾಮಹರಾಗಿ ಬೆಳಗುತ್ತಿರಲಿಲ್ಲ. ವಚನ ಸಾಹಿತ್ಯದ ಸಂಶೋಧನೆಯ ಸೇವೆಯಿಂದಾಗಿ ಕನ್ನಡ ನಾಡಿನೊಂದಿಗೆ ವಿಶ್ವವಿಸ್ತಾರದೊಂದಿಗೆ ಹಳಕಟ್ಟಿಯವರ ಬಾಂಧವ್ಯ ಬೆಳೆಯುವಂತಾಯಿತು. ಚಿಕ್ಕೋಡಿಯವರು ಸಾಹಿತ್ಯಾಭಿಮಾನಿ, ದೇಶಾಭಿಮಾನಿ, ಒದುಕನ್ನೇ ನಾಡು ನುಡಿಯ ಏಳಿಗೆಗಾಗಿ ತಮ್ಮನ್ನೂ ತಾವು ಅರ್ಪಿಸಿಕೊಂಡವರು. ಹೆದ್ದಾರಿಯಲ್ಲಿ ನಡೆದವರು ಉಳಿದವರನ್ನು ಹೆದ್ದಾರಿಯಲ್ಲಿಯೇ ನಡೆಸುತ್ತಾರೆ. ಅಂಥ ತ್ಯಾಗ ಸಾಹಸವುಳ್ಳವರನ್ನೆ ಅಂಥ ಮಹತ್ವದ ಕೆಲಸಕ್ಕೆ ತೊಡಗಿಸುತ್ತಾರೆ. ಜಾಣ ಶಿಲ್ಪಿ ಮೂರ್ತಿಯನ್ನು ನಿರ್ಮಿಸುವುದರಲ್ಲಿ ಮಾತ್ರ ಜಾಣನಾಗಿರುವುದಿಲ್ಲ. ಜಾತಿಯ ಶಿಲೆಯನ್ನು ಕಂಡು ಹಿಡಿಯುವುದರಲ್ಲಿಯೂ ಜಾಣನಾಗಿರುತ್ತಾನೆ. ಹೀಗೆ ವಚನ ಶೋಧನೆಯಲ್ಲಿ ತಮ್ಮ ತನು ಮನ ಧನವನ್ನು ಅರ್ಪಿಸಿಕೊಂಡು ಅನುಪಮ ಸಾಹಿತ್ಯದ ಕೊಡುಗೆಯನ್ನು ಕನ್ನಡ ನಾಡಿಗೆ ನೀಡಿ ಹಳಕಟ್ಟಿಯವರು ಕೀರ್ತಿಭಾಜನರಾಗುವಲ್ಲಿ ಚಿಕ್ಕೋಡಿ ತಮ್ಮಣ್ಣಪ್ಪನವರ ಪಾತ್ರವಿದ್ದುದನ್ನು ನಾವು ಕೃತಜ್ಞತೆಯಿಂದ ನೆನೆಯಲೇಬೇಕು.

ಕರ್ತೃತ್ವಶಕ್ತಿಯಿದ್ದು, ದಾಸೋಹಂಭಾವವುಳ್ಳ ಸೇವಾಸಕ್ತಿಯನ್ನೂ ಹೊಂದಿದವರಿದ್ದರೆ ಅಂಥವರಿಂದ ದೇಶಕ್ಕೆ ಉಪಯುಕ್ತವಾಗಬಲ್ಲ ಅನೇಕ ಕಾರ್ಯಗಳು ಫಲಕಾರಿಯಾಗುವುದು ಸಾಧ್ಯವಿದೆ. ಫ. ಗು. ಹಳಕಟ್ಟಿ ಅವರು ಕರ್ತೃತ್ವಶಾಲಿಯೂ ದಾಸೋಹಜೀವಿಯೂ ಆಗಿದ್ದರು. ಅವರು ಕಟ್ಟಿ ಬೆಳೆಸಿದ ಸಂಘ ಸಂಸ್ಥೆಗಳಿಗೆ ಲೆಕ್ಕವಿಲ್ಲ. ವಿಜಾಪುರ ನಗರಸಭೆಯ ಅಧ್ಯಕ್ಷರಾಗಿ, ಮುಂಬಯಿ ವಿಶ್ವವಿದ್ಯಾಲಯದ ಸಿನೇಟರರಾಗಿ ಹಾಗೂ ಅಲ್ಲಿಯ ಅಭ್ಯಾಸ ಮಂಡಲಿಯ ಸದಸ್ಯರಾಗಿ, ವಿಜಾಪುರದ ಶ್ರೀ ಸಿದ್ಧೇಶ್ವರ ಅರ್ಬನ್ ಕೋ-ಆಪರೇಟಿವ್ ಸೊಸೈಟಿಯ ಅಧ್ಯಕ್ಷರಾಗಿ, ನೇಕಾರ ಸಹಕಾರಿ ಸಂಘದ ಅಧ್ಯಕ್ಷರಾಗಿ, ವಿಜಾಪುರದಲ್ಲಿ ಲಿಂಗಾಯತ ಶೈಕ್ಷಣಿಕ ಸಂಘವನ್ನು ಸ್ಥಾಪಿಸಿ ಅದರ ಮೂಲಕ ಅನೇಕ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಶೈಕ್ಷಣಿಕ ಜಾಗೃತಿಯನ್ನು ಹೆಚ್ಚಿಸಿ ವಿವಿಧಮುಖ ಸೇವೆ ಕೈಕೊಂಡು ಕೃತಾರ್ಥರಾದವರು ಹಳಕಟ್ಟಿಯವರು: ಬಳ್ಳಾರಿಯಲ್ಲಿ ಜರುಗಿದ ಅ. ಭಾ. ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ, ಧಾರವಾಡದಲ್ಲಿಯ ಕರ್ನಾಟಕ ಏಕೀಕರಣ ಪರಿಷತ್ತಿಗೆ ಹಾಗೂ ವೀರಶೈವ ಮಹಾಸಭೆಗೆ ಅಧ್ಯಕ್ಷರಾದ ಹಳಕಟ್ಟಿಯವರ ಕರ್ತೃತ್ವ ಶಕ್ತಿಯನ್ನು ಒಂದೆರಡು ಶಬ್ದದಲ್ಲಿ ಹಿಡಿದಿರಿಸುವುದು ಸಾಧ್ಯವಿಲ್ಲ.

ಇವು ಏನು ಸಾಮಾನ್ಯ ಕಾರ್ಯಗಳಲ್ಲವಾದರೂ, ಯಾರಾದರೂ ಸೇವಾತತ್ಪರರು ಇವುಗಳನ್ನು ಮಾಡಬಹುದಾಗಿದೆ. ಆದರೆ ಹಳಕಟ್ಟಿಯವರನ್ನು ನಾವು ನೆನೆಯುವುದು ಅವರು ಕೈಕೊಂಡ ವಚನ ಸಂಶೋಧನೆಗಾಗಿ, ಪಟ್ಟ ಪರಿಶ್ರಮ, ತ್ಯಾಗಕ್ಕಾಗಿ. ಒಂದು ವಿಶ್ವವಿದ್ಯಾಲಯ ಮಾಡಲಾಗದ ಕೆಲಸ ಒಬ್ಬ ವ್ಯಕ್ತಿಯಿಂದ ಸಾಧ್ಯವಾಗಬೇಕಾದರೆ, ಆ ವ್ಯಕ್ತಿಯ ಕರ್ತೃತ್ವಶಕ್ತಿಯು ಹಾಗು ಮಾಹೇಶ್ವರ ನಿಷ್ಠೆಯ (ಹಿಡಿದದ್ದನ್ನು ಬಿಡದೆ ಸಾಧಿಸುವ ನಿಷ್ಠೆಯ) ಅರಿವು ಮನದಟ್ಟಾಗುವುದು. ೧೨ನೆಯ ಶತಮಾನದ ವಚನಕಾರರು ತಮ್ಮ ಬದುಕನ್ನು ಪ್ರಯೋಗಕ್ಕೆ ಒಳಪಡಿಸಿಕೊಂಡವರು. ಸತ್ಯಶುದ್ಧರಾಗಿ ದುಡಿಯುವ, ದುಡಿದ ಫಲದಲ್ಲಿ ಸಾಧ್ಯವಾದಷ್ಟು ಜಂಗಮ ದಾಸೋಹಕ್ಕೆ (ಸಮಾಜೋನ್ನತಿಗೆ) ಸಲ್ಲಿಸುವ ತಮ್ಮ ಬದುಕಿನಲ್ಲಿ ಎಷ್ಟೇ ಕಷ್ಟ ಬಂದರೂ. ತಮ್ಮ ಪ್ರಾಮಾಣಿಕತೆಯನ್ನು ಕಳೆದುಕೊಳ್ಳದ ಕಾಯಕ ದಾಸೋಹವನ್ನು ಬಿಟ್ಟುಕೊಡಲಾರದ ಅಂದಿನ ವಚನಕಾರರ ಜೀವನವೆಂದರೆ ಕತ್ತಲೆಗೆ ಬೆಳಕೀಯುವ ಹುಣ್ಣಿಮೆಯ ಬೆಳದಿಂಗಳಿದ್ದಂತೆ. ದುಡಿಯದೆ ದುಡಿಯುತ್ತಿರುವ ಸುಲಿಗೆಯನ್ನೆ ಬದುಕಾಗಿಸಿಕೊಂಡಿರುವ ಇಂದಿನ ಬಹುಪಾಲು ಜನರ ಬದುಕಿನೊಂದಿಗೆ ಅಂದಿನ ಶರಣರ ಬದುಕನ್ನು ಹೋಲಿಸಿ ನೋಡಿದರೆ ಅವರ ಬದುಕಿನ ತೂಕ ತಿಳಿದುಬರುವುದುಂಟು. ಸತ್ಯ ಶುದ್ಧ ಬದುಕಿನಿಂದ ವಚನೋದಯವಾಗಿ ವಚನವೆ ಅವರ ಪರಿಶುದ್ಧ ಬದುಕಾಗಿ ಮಾನವ ಕುಲದ ಲೇಸನ್ನು ಬಯಸಿ ಹೋರಾಡಿದ ಅಂದಿನ ವಚನಕಾರರು ನಿಜವಾಗಿ ಶರಣರು।

ಆ ಶರಣರ ದಾರಿಯಲ್ಲಿಯೆ ನಡೆದು ಬಂದವರು ಫ. ಗು. ಹಳಕಟ್ಟಿಯವರು. ಸುಖ ಬರಲಿ, ದುಃಖ ಬರಲಿ ಬಂದುದೆಲ್ಲವನ್ನು ಪ್ರಸಾದವನ್ನಾಗಿ ಸಂತೋಷದಿಂದ ಸ್ವೀಕರಿಸುವ ಮನೋಧರ್ಮ ಬೆಳೆಸಿಕೊಂಡು ಬಂದವರು ಶರಣರು. ಆಗು ಹೋಗು ಗಳಿಂದ ನಿರ್ಲಿಪ್ತವಾಗಿ ನಿಂತು, ನಿರಾಳವಾಗಿ ಬದುಕಿಗೆ ಶರಣರಿಗೆ ಕಷ್ಟನಷ್ಟ ಎಂದಿಗೂ ಹೊರೆಯಾಗಲಿಲ್ಲ. ಇದಕ್ಕೆ ಶರಣರ ಕೈಹಿಡಿದ ಸಹಧರ್ಮಿಣಿಯರು ಹೊರತಾಗಿರಲಿಲ್ಲ. ಅಷ್ಟೇಯಲ್ಲ, ತಮ್ಮ ಗಂಡಂದಿರು ಒಮ್ಮೊಮ್ಮೆ ತಪ್ಪಿದಲ್ಲಿ ಅವರನ್ನು ತಿದ್ದುವ, ಕಷ್ಟ ಕಾಲದಲ್ಲಿ ಧೈರ್ಯ ನೀಡುವ ಪಾತ್ರ ವಹಿಸಿದವರು ಅಂದಿನ ಶರಣೆಯರು. ಸತಿ-ಪತಿ ಒಂದಾಗಿ ಶಿವಗೊಪ್ಪುವಂತೆ ಬದುಕಿದವರು ಶರಣ ಶರಣೆಯರು. ಶರಣರ (ಮನೋ ಧರ್ಮ ತಳೆದ) ಪ್ರತಿರೂಪ ಹಳಕಟ್ಟಿಯವರು. ಅವರೇನು ವಚನ ರಚನೆ ಮಾಡಲಿಲ್ಲ. ಆದರೆ, ಕಲ್ಯಾಣ ಕ್ರಾಂತಿಯ ಕಾಲದಲ್ಲಿ ವಚನಗಳನ್ನು ರಕ್ಷಿಸುವಲ್ಲಿ ಶರಣರು ಪಟ್ಟ ಪಾಡಿಗಿಂತ ಅವುಗಳನ್ನು ಶೋಧಿಸಿ ಸಂಗ್ರಹಿಸುವಲ್ಲಿ ಹಳಕಟ್ಟಿಯವರು ಅನುಭವಿಸಿದ ಕಷ್ಟವೇನು ಕಡಿಮೆಯದಲ್ಲ. ಇವರು ನಿಜವಾಗಿ ಆಧುನಿಕ ಶುದ್ಧ ಶರಣರು. ಶರಣರಾದವರೆ ಶರಣರನ್ನು ಅರ್ಥಮಾಡಿಕೊಳ್ಳಬಲ್ಲರು, ಆರಾಧಿಸಬಲ್ಲರು. ಅಂದು ಪಾಂಡವರು ವನವಾಸವನ್ನು ಅನುಭವಿಸುವ ಪ್ರಸಂಗ ಬಂದರೂ, ಅವರ ಬೆನ್ನ ಹಿಂದೆ ಶ್ರೀ ಕೃಷ್ಣನ ಬೆನ್ನಾಸರೆಯಿತ್ತು. ಅವರ ಹೋರಾಟದಲ್ಲಿ ನ್ಯಾಯವಿದ್ದರೂ, ಅವರ ಹೋರಾಟಕ್ಕೆ ಅವರದೇ ಪ್ರಮಾದ ಕಾರಣವಾದುದನ್ನು, ಮತ್ತು ಆ ಹೋರಾಟದಲ್ಲಿ ಸ್ವಲಾಭ ರಾಜ್ಯಲೋಭವಿದ್ದುದನ್ನು ಅಲ್ಲಗಳೆಯಲಿಕ್ಕಾಗದು. ಆದರೆ ಹಳಕಟ್ಟಿಯವರು ವಚನಶೋಧನೆ ಸಂಗ್ರಹಿಸುವಲ್ಲಿ ಪಟ್ಟ ವನವಾಸವನ್ನು ನೆನೆದರೆ ಅವರ ಹೋರಾಟದಲ್ಲಿ ಸ್ವಲಾಭವಾಗಲಿ ಯಾವ ಲೋಭವಾಗಲಿ ಇರಲಿಲ್ಲವೆಂಬುದನ್ನು ಮರೆಯಲಾಗದು.

ಸಂಸಾರದ ತಾಪತ್ರಯವು ಮಹಾಪೂರವಾಗಿ ಉರದುದ್ದ ಶಿರದುದ್ದದವರೆಗೆ ಆಕ್ರಮಿಸಿ ಜೀವದಸುತ್ತ ಬಂದರೂ, ಎದೆಗೆಡದೆ ಈಜಿ ಪಾರಾದವರು ನಿಜವಾಗಿ ಅಪ್ರತಿಮ ಸಾಹಸಿಗರೆಂಬಲ್ಲಿ ಸಂದೇಹವಿಲ್ಲ. ಆದರೂ ಅಂಥವರನ್ನು ಮಹಾನು ಭಾವರೆಂದು ದೊಡ್ಡವರೆಂದು ಕರೆಯಲು ಬರುವಂತಿಲ್ಲ. ಜೀವದ ಮೇಲೆ ಬಂದ ಆಪತ್ತನ್ನೆದುರಿಸಿ ಅದರ ಹಿಂಸೆಯನ್ನೂ ಲೆಕ್ಕಿಸದೆ, ತಾನು ಬದುಕುವುದರೊಂದಿಗೆ ನಾಡಿಗೆ ನುಡಿಗೆ ಉಪಯುಕ್ತವಾದುದನ್ನು ಬದುಕಿಸಿಕೊಟ್ಟವರು ದೊಡ್ಡವರು. ಅಂಥ ದೊಡ್ಡವರ ಪಂಕ್ತಿಯಲ್ಲಿ ನಿಂತವರು ಹಳಕಟ್ಟಿಯವರು. ಯಾವುದೇ ಕೆಲಸಕ್ಕೆ ಹೋಗಿ ಬರುವುದಕ್ಕೆ ಸೈಕಲ್ ಅವರ ಸಂಗಾತಿಯಾಗಿತ್ತು. ಶಿವಾನುಭವ ಪತ್ರಿಕೆಯಲ್ಲಿ ಸಂಗ್ರಹಿಸಿದ ವಚನಗಳನ್ನು ಮುದ್ರಿಸುವುದಕ್ಕೆ ಅಗತ್ಯವಾದ ಮುದ್ರಣಾಲಯವನ್ನು ಸ್ಥಾಪಿಸಲೋಸುಗ ಸ್ವಂತ ಮನೆಯನ್ನೂ ಮಾರಿಬಿಡಲು ಹಿಂದೆಗೆಯದ ಅಪ್ಪಟ ದಾಸೋಹಿ ಹಳಕಟ್ಟಿಯವರು. ಹಮ್ಮಿಕೊಂಡ ಕೆಲಸಕ್ಕೆ ಹಣದ ಕೊರತೆಯಾದಾಗ

ತಮ್ಮ ಬಂಗಾರದ ಕರಡಿಗೆಯನ್ನೇ ಮಾರಿದರು. ಆಸ್ತಿಯನ್ನು ಕಳಕೊಳ್ಳುವದರಿಂದ ಉಂಟಾಗುವ ವೇದನೆ ಅವರಿಗೆ ವೇದನೆ ಅನಿಸಿರಲಿಕ್ಕಿಲ್ಲ. ಹಿಡಿದ ಧ್ಯೇಯ ಪೂರ್ತಿಯಾದರೆ ಸಾಕು. ಅದರಿಂದ ಅವರಿಗೊಂದು ವಿಜಯ ಸಾಧಿಸಿದ ಉಲ್ಲಾಸವಾಗುತ್ತಲಿತ್ತು.

'ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕೆ ಅಳಿವಿಲ್ಲ' ಎಂಬ ಬಸವ ತತ್ವದ ಮರ್ಮವನ್ನು ಅರಿತವರು ಹಳಕಟ್ಟಿಯವರು. ಸಂಸಾರಕ್ಕೆ ಮನೆ ಮಾರು ಬೆಳ್ಳಿ ಬಂಗಾರ ಅಗತ್ಯವಾದರೂ, ಇವು ಸ್ಥಾವರ, ಇವಕ್ಕೆ ಅಳಿವುಂಟು. ವಚನದಂಥ ಅನುಭಾವ ಸಾಹಿತ್ಯ ಮೌಲಿಕವಾದರೂ, ಬರಿ ತಿನ್ನುಣ್ಣುವುದೇ ಸಂಸಾರವೆಂದವರಿಗೆ, ಅದರ ಅಗತ್ಯವೆನಿಸಲಿಕ್ಕಿಲ್ಲ. ಬರಿ ತಿನ್ನುಣ್ಣುವುದೇ ಸಂಸಾರವಲ್ಲ ಸಂಸ್ಕಾರ ಹೊಂದಿದರೆ ಅದು ನಿಜ ಸಂಸಾರ ! ಹಾಗೆ ತನುಮನ ಭಾವಗಳಿಗೆ ಸಂಸ್ಕಾರ ನೀಡುವಂತಹುದು ವಚನ ಸಾಹಿತ್ಯ. ಅದು ಜಂಗಮ, ಅದಕ್ಕೆ ಅಳಿವಿಲ್ಲ. ಹೀಗೆ ಅಳಿವಿಲ್ಲದ ಜಂಗಮ ಆಸ್ತಿಗಾಗಿ (ವಚನ ಸಾಹಿತ್ಯಕ್ಕಾಗಿ) ಅಳಿದು ಹೋಗಬಹುದಾದ ತಮ್ಮ ಸ್ಥಾವರ ಆಸ್ತಿಯನ್ನು ದಾಸೋಹಂಭಾವದಿಂದ ಮಾರಿಕೊಂಡ ಶರಣರು ಹಳಕಟ್ಟಿಯವರು! ಇಂದಿಂಗೆ ನಾಳಿಂಗೆ ಬೇಕೆಂದು ಕುದಿದವರಲ್ಲ, ಹಿರಿಯ ಮಗ ಚಂದ್ರಶೇಖರ ಅಕಾಲಮರಣವನ್ನಪ್ಪಿದರೂ ಅವರು ಕಳವಳಪಡಲಿಲ್ಲ. ಶಿವನ ಸೊಮ್ಮು ಶಿವನಿಗೆ ಸಂದುದೆಂದು ನಿರಾಳಭಾವದಲ್ಲಿ ನಿಂದವರು. ಕರುಳಬೇನೆಯಿಂದಾಗಿ ಶಸ್ತ್ರ ಚಿಕಿತ್ಸೆ ಪಡೆದು ಹಾಸಿಗೆಯ ಮೇಲೆ ಮಲಗಿದ್ದರೂ ಅವರು ಕರಡು ಪ್ರತಿ ತಿದ್ದುವ ಕಾಯಕವನ್ನು ಬಿಡಲಿಲ್ಲ.

> **"ಸಂಗಮದೇವಾ, ನೀನು ಜಂಗಮರೂಪಾಗಿ ಬಂದು**
> **ಆ ಧನವನು ನೀನು ಬಲ್ಲಂತೆ ಸೂರೆಗೊಳುತಿರ್ದಡೆ**
> **ನಾನು ಬೇಕು ಬೇಡೆಂದು ಮನದಲ್ಲಿ ಮರುಗಿದೆನಾದಡೆ**
> **ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಮನದೊಡೆಯ ನೀನೆ ಬಲ್ಲೆ !**
> **ಎನ್ನಂಗದ ಮೇಲೆ ಶಸ್ತ್ರವನಿಕ್ಕಿ ನೋಡು,**
> **ಸೂಜಿಯ ಮೊನೆಯಂತಿರ್ದ ಶೂಲದ ಮೇಲಿಕ್ಕಿ ನೋಡು,**
> **ಲಿಂಗಾರ್ಚನೆಯ ಮಾಡುವುದ ಬಿಡೆ**
> **ಜಂಗಮದಾಸೋಹವ ಮಾಡುವುದ ಬಿಡೆ !"**

**(ಬ. ವ. ೧೯೪)**

ಇಂಥ ದೊಡ್ಡ (ಉದಾತ್ತ) ಮಾತನಾಡಿದನೆಂದು, ಬರೆದನೆಂದು ಬಸವಣ್ಣ ದೊಡ್ಡವನಾಗಲಿಲ್ಲ. ಆತ ದೊಡ್ಡವನಾದದ್ದು ಆಡಿದಂತೆ ನಡೆದನೆಂದು. ಹಳಕಟ್ಟಿಯವರು ಹಾಗೆ ಹೇಳಲೂ ಇಲ್ಲ. ಅಂಥ ವಚನ ಬರೆಯಲೂ ಇಲ್ಲ. ಅಂಥ ವಚನವನ್ನು ತಮ್ಮ ಜೀವನದಲ್ಲಿ ಅರಗಿಸಿಕೊಂಡರು. ಹಾಗೆ ಆ ಅರಿವಿನ ದಾರಿಗುಂಟ ನಡೆದರು. ವಚನ ಶೋಧನೆಯಾಗಲಿ, ಸಂಘ ಸಂಸ್ಥೆಯ ಸಾಮಾಜಿಕ ಸೇವೆಯಾಗಲಿ

ಎಲ್ಲವೂ ಜಂಗಮ ದಾಸೋಹವಾಗಿತ್ತು ಅವರಿಗೆ. ಲೋಕವಿಸ್ತಾರವೆ ಹಳಕಟ್ಟಿಯವರಿಗೆ ಜಂಗಮಸ್ವರೂಪ. ಲೋಕ ಸೇವೆಯೆ ಜಂಗಮದಾಸೋಹ ! ಇವರಂಥ ದಾಸೋಹ ಜೀವಿಯನ್ನು ಇವರಲ್ಲಿಯೇ ಕಾಣಬೇಕು.

ವಚನ ಶೋಧನೆ-ಸಂಗ್ರಹಕ್ಕಾಗಿ ಹಳಕಟ್ಟಿಯವರು ಹೋಗದೆ ಇದ್ದ ಮನೆಯಿಲ್ಲ. ಅಲೆದಾಡದೆ ಇದ್ದ ಮಠ ಮಂದಿರವಿಲ್ಲ. ಬಾಯಿ ತೆರೆಯದೆ ಇದ್ದ ಪ್ರಸಂಗವಿಲ್ಲ. ಕೈಮುಗಿದು ಕೇಳಿದರು, ದುಡ್ಡು ಕೊಟ್ಟು ಪಡೆದರು. ಹೊಟ್ಟೆಯನ್ನು ಕಟ್ಟಿ ಹಾಕುವ ಪ್ರಸಂಗ ಬಂದರೂ ಚಿಂತೆಯಿಲ್ಲ, ವಚನಕಟ್ಟುಗಳು ಸಿಕ್ಕರೆ ಸಾಕು. ವಚನಪ್ರಾಪ್ತಿಯ ಹಸಿವೆಯಷ್ಟು ಅವರಿಗೆ ಹೊಟ್ಟೆಯ ಹಸಿವು ಬಾಧಿಸಲಿಲ್ಲವೇನೊ ! ಅವರು ಒಟ್ಟು ಸಂಗ್ರಹಿಸಿದ ತಾಡೋಲೆಗಳು ಹತ್ತು ಸಾವಿರ ಪುಟವಾಗುವಷ್ಟು. ಸಂಗ್ರಹಿಸುವುದಕ್ಕೆ ಮಾತ್ರ ಅವರ ಸಾಧನೆ ಸೀಮಿತವಾಗಿರಲಿಲ್ಲ. ಪರಿಷ್ಕರಿಸುವುದು, ಗ್ರಂಥ ರೂಪದಲ್ಲಿ ಅಳವಡಿಸುವುದು-ಹೀಗೆ ಹಿಡಿದ ಕೆಲಸ ಪೂರ್ತಿಗೊಳಿಸುವಲ್ಲಿ ಅವರಿಗೆ ಅಪಾರ ತಣಿವಲ್ಲದೆ ದಣಿವೆಂಬುದಿರಲಿಲ್ಲ. ಅವರು ಸಂಪಾದಿಸಿ ಪ್ರಕಟಿಸಿದ ಗ್ರಂಥಗಳಿಗೆ ಹಾಗು ವಚನ ಸಾಹಿತ್ಯ ಕುರಿತು ಸ್ವತಃ ರಚಿಸಿದ ಗ್ರಂಥಗಳಿಗೆ ಲೆಕ್ಕವಿಲ್ಲ.

ಮಹಿಮ್ನ ಸ್ತೋತ್ರ, ದೇವರದಾಸಿಮಯ್ಯನ ವಚನಗಳು, ಸಕಲೇಶ ಮಾದರಸನ ವಚನಗಳು, ಶೂನ್ಯ ಸಂಪಾದನೆಯ ಸಟೀಕಾತ್ಮಕ ಪ್ರಕಟನೆ-ಇವು ಸಂಪಾದಿಸಿ ಪ್ರಕಟಿಸಿದ ಮುಖ್ಯ ಗ್ರಂಥಗಳು. ವಚನ ಶಾಸ್ತ್ರಸಾರ ಭಾಗ ೧,೨,೩ ಮತ್ತು ಶಿವಶರಣರ ಚರಿತೆ ಭಾಗ ೧, ೨, ೩ ಹಾಗು ೭೭೦ ಅಮರ ಗಣಾಧೀಶ್ವರರ ಚರಿತ್ರೆಗಳು, ವರದಾನಿ ಗುಡ್ಡಮ್ಮಯ ಚರಿತ್ರೆ, ಅಲ್ಲದೆ ವಚನಾಭ್ಯಾಸಕ್ಕೆ ಉಪಯುಕ್ತವಾಗುವ ಶಿವಾನುಭವ ಕೋಶ-ಹೀಗೆ ಅವರು ರಚಿಸಿದ ಗ್ರಂಥಗಳ ಟಿಪ್ಪಣಿ ಮುಂದುವರಿಯುತ್ತ ಹೋಗುವುದು. ಒಬ್ಬ ಮನುಷ್ಯ ತನ್ನ ಜೀವನದಲ್ಲಿ ಇಷ್ಟೊಂದು ಸಾಧನೆ ಮಾಡಬಲ್ಲನೇ, ಮನುಷ್ಯನಲ್ಲಿ ಇಷ್ಟೊಂದು ಅಸಾಧಾರಣ ಸಾಮರ್ಥ್ಯ ಇರಬಹುದೇ-ಎಂಬುದನ್ನು ನೆನೆದರೆ ಮೈ ಜುಮ್ಮುಗಟ್ಟುವುದು. ಆ ಮನುಷ್ಯ ನಮ್ಮ ನಾಡಿನವರೆ ಎಂದಾಗ ಅಭಿಮಾನ ತುಂಬಿ ತುಳುಕುತ್ತದೆ ! ಹಳಕಟ್ಟಿಯವರ ಮಹತ್ವಾಕಾಂಕ್ಷೆಯ, ಸಾಧನೆಯ ಜ್ಞಾನದಾಸೋಹದ ಮುಖ್ಯ ಮಾಧ್ಯಮ-ಮುಖಪತ್ರಿಕೆಯೆಂದರೆ 'ಶಿವಾನುಭವ'. ಹೆಸರಿಗೆ ತಕ್ಕಂತೆ ಶಿವಾನುಭವ ಸೂರೆಗೊಂಡ ಪತ್ರಿಕೆ. ಶರಣರ ಆಚಾರ ವಿಚಾರವನ್ನು ಲೋಕಕ್ಕೆ ಸಾರಿ ಹೇಳಿದ ಪತ್ರಿಕೆ. ಕಷ್ಟನಷ್ಟದಲ್ಲಿ ಉಸಿರುಗಟ್ಟಿದಾಗ ಹಳಕಟ್ಟಿಯವರಿಗೆ ಉಸಿರು ನೀಡಿ ಬದುಕಿಸಿದ ಪತ್ರಿಕೆ !!

ಹಳಕಟ್ಟಿಯವರ ಅವಿಶ್ರಾಂತ ಸಾಧನೆಯನ್ನು ಮನಸಾರೆ ಮೆಚ್ಚಿ ಅವರಿಗೆ ಕೊಟ್ಟ ಪದವಿ ಪ್ರಶಸ್ತಿಗಳಿಗೆ ಲೆಕ್ಕವಿಲ್ಲ 'ಕರ್ನಾಟಕದ ಮ್ಯಾಕ್ಸಮುಲ್ಲರ' 'ಡಾಕ್ಟರ ಆಫ್ ಲೆಟರ್ಸ್' 'ವಚನ ಪಿತಾಮಹ' ಹಾಗೂ 'ಜ್ಞಾನಗುಮ್ಮಟ'-ಇವು ಮುಖ್ಯವಾದವುಗಳು. 'ಜ್ಞಾನ ಗುಮ್ಮಟ' ಹಳಕಟ್ಟಿಯವರನ್ನು ಮೊದಲು ಕಂಡು ಬರೋಣ.

ಆಮೇಲೆ ಗೋಲಗುಮ್ಮಟ ನೋಡಿದರಾಯಿತು !' ಹೀಗೆ ವಿಜಾಪುರಕ್ಕೆ ಬಂದಾಗ ಬಿ. ಎಂ. ಶ್ರೀಕಂಠಯ್ಯನವರು ಉದ್ಗಾರ ತೆಗೆದರು. ಹಳಕಟ್ಟಿಯವರ ಘನತೆಯನ್ನು ಅಳೆಯುವುದಕ್ಕೆ ಇದಕ್ಕೂ ಮಿಗಿಲಾದ ಮಾನದಂಡ ಇನ್ನಾವುದು ಬೇಕು ! ಗೋಲಗುಮ್ಮಟದಲ್ಲಿ ನಿಂತು ನುಡಿದರೆ ಏಳು ಸಲ ಪ್ರತಿಧ್ವನಿಯಾಗುತ್ತದೆ. ಹಳಕಟ್ಟಿಯವರ ಸಾಧನೆಯ ಗುಮ್ಮಟ ಮಾತ್ರ ನಿರಂತರವಾಗಿ ಸಾಹಿತ್ಯಕ, ಸಾಂಸ್ಕೃತಿಕ ಕ್ಷೇತ್ರದಲ್ಲೆಲ್ಲ ಧ್ವನಿಸುತ್ತಲೇ ಇರುತ್ತದೆ !

ತಮ್ಮ ಎಪ್ಪತ್ತೈದು ವರ್ಷಗಳ ಸಾಧನೆಯ ಅನುಭವವನ್ನು ಸ್ವತಃ ಅವರೇ ಬರೆದುದನ್ನಿಲ್ಲಿ ವಿವರಿಸಿದರೆ ತಪ್ಪಲ್ಲ. "ಒಬ್ಬ ಮನುಷ್ಯನ ಚಟುವಟಿಕೆಗಳು ಯೋಗ್ಯ ನಿರ್ದೇಶನವಿದ್ದರೆ ಜೀವನವನ್ನು ಹಿಗ್ಗಿಸುತ್ತವೆ. ಅವು, ಅವನು ಎಷ್ಟೇ ತೊಂದರೆ ಎದುರಿಸಬೇಕಾಗಿ ಬಂದರೂ ಜೀವನವನ್ನು ಆನಂದಮಯವಾಗಿಸುತ್ತವೆ. ಅಭಿರುಚಿ ಯುಳ್ಳ ಕೆಲಸವು ಎಷ್ಟೇ ದೊಡ್ಡದಾಗಿದ್ದರೂ, ಮನಸ್ಸಿನಲ್ಲಿ ಶಕ್ತಿ ಹಾಗೂ ಉತ್ಸಾಹಗಳನ್ನು ಹುಟ್ಟಿಸುತ್ತದೆ. ಈ ಸಾಹಿತ್ಯ (ವಚನ ಸಾಹಿತ್ಯ)ದಲ್ಲಿ ಧರ್ಮಾಂಧತೆ ಯಿಲ್ಲ. ಅದು ವಿಶ್ವಧರ್ಮವಾಗಿದೆ. ಶರಣರು ಜಾತಿಯನ್ನು ಮನ್ನಿಸುವುದಿಲ್ಲ. ಅವರ ದೃಷ್ಟಿಯಲ್ಲಿ ಕಾಯಕವೇ ಪೂಜೆ, ಕಾಯಕವೇ ಕೈಲಾಸ. (ಅವರಿಗೊಮ್ಮೆ ಪ್ರವಾಸದಲ್ಲಿ ಕಾಲಿಗೆ ಪೆಟ್ಟು ಬಿದ್ದುದನ್ನು ಒಬ್ಬರು ವಿಚಾರಿಸಿದಾಗ) ದೇಹಕ್ಕೆ ನೋವಾಗಿದೆಯಲ್ಲದೆ ಆತ್ಮನಿಗೆ ನೋವಿಲ್ಲ. ನಾನು ಈ ಶರಣ ಸಾಹಿತ್ಯದ ವಿಚಾರ ಬಿಟ್ಟಾಕ್ಷಣವೇ ನನ್ನ ಮನಕ್ಕೆ ನೋವಾಗುತ್ತದೆ. ಆದುದರಿಂದ ತನುವಿನ ನೋವು ತಡೆಯಬಹುದು, ಮನದ ನೋವು ತಡೆಯಲಾರದುದಾಗಿ ನಾನೀ ಕಾರ್ಯ ಮಾಡುತ್ತೇನೆ. ರಚನಾತ್ಮಕ ಕಾರ್ಯಗಳಿಂದ ಆರೋಗ್ಯಮಯ ಹಾಗು ಉಪಯುಕ್ತ ಜೀವನವನ್ನು ಬದುಕಲು ಸಾಧ್ಯವೆಂದು ತೋರಿಸುವುದೇ ನನ್ನ ಉದ್ದೇಶವಾಗಿದೆ. ಅದು ಜೀವನವನ್ನು ಹಿಗ್ಗಿಸುತ್ತದೆ ಮತ್ತು ಮನುಷ್ಯನನ್ನು ಉತ್ಸಾಹಶಾಲಿ ಹಾಗೂ ಸಮರ್ಥನನ್ನಾಗಿ ಮಾಡುತ್ತದೆ. ಜೀವನದಲ್ಲಿ ಯಾವಾಗಲೂ ತೊಂದರೆಗಳು ಬಂದೇ ಬರುತ್ತವೆ. ಅವುಗಳನ್ನು ನಿವಾರಿಸಲು ಮಾಡುವ ಪ್ರಯತ್ನ ಯಾವಾಗಲೂ ಉತ್ಸಾಹವನ್ನು ತಂದುಕೊಡುತ್ತದೆ. ಸಾಹಿತ್ಯದಲ್ಲಿ ಜೀವನವನ್ನು ಮುಂದುವರಿಸಿಕೊಂಡು ಹೋಗುವ ಶಕ್ತಿಯಿದೆ. ಮತ್ತು ಮುಪ್ಪಿನ ಕಾಲದಲ್ಲಿಯೂ ಸಹ ಬುದ್ಧಿಶಕ್ತಿಯನ್ನು ಕ್ರಿಯಾಶೀಲವಾಗಿಡುತ್ತದೆ."[೧]

ಶರಣವರೇಣ್ಯರಾದ ಡಾ॥ ಫ. ಗು. ಹಳಕಟ್ಟಿಯವರ ಮಾತಿನ ಮುಂದೆ ನನ್ನ ಮಾತನ್ನು ಬೆಳೆಸುವುದು ಯೋಗ್ಯವಲ್ಲ. ನುಡಿದರೂ ಚೆನ್ನ, ನಡೆದರೂ ಚೆನ್ನ ಹಳಕಟ್ಟಿಯವರ ಬಿಟ್ಟದಂತಹ ಬದುಕು ! ಅಂಥ ಶರಣರಿಗೆ ನಮೋ ನಮೋ ಎಂದು ಮುಗಿಸುವೆ ! !

---

೧. 'ಬಸವ ಪಥ' ಜೂನ್ ೧೯೮೦ ಸಂಚಿಕೆ 'ನನ್ನ ಎಪ್ಪತ್ತೈದು ವರ್ಷಗಳು'
ಲೇಖನ: ಡಾ॥ ಬಿ॥ ಫ. ಗು. ಹಳಕಟ್ಟಿ

# ೧೬.

# ಈಶ್ವರ ಸಣಕಲ್ಲರ ವಚನಗಳ ಅಧ್ಯಾತ್ಮ ಸಿರಿ !

---

೧೨ನೆಯ ಶತಮಾನದ ವಚನಕಾರರು ಕ್ರಾಂತಿಕಾರರು— ಸಾಮಾಜಿಕದಲ್ಲಿ ಅಧ್ಯಾತ್ಮದಲ್ಲಿ, ಸಾಹಿತ್ಯದಲ್ಲಿ ವಚನಕಾರರು ಸಾಮಾಜಿಕ ಸುಧಾರಕರಲ್ಲ, ಸಾಹಿತಿಗಳಲ್ಲ. ಅಂದಿನ ವಿಷಮ ಪರಿಸರದಿಂದಾಗಿ ಅವರಲ್ಲಿ ಹುಟ್ಟಿದ ಮಾನವೀಯ ಅನುಕಂಪ-ಅವರನ್ನು ಸಾಮಾಜಿಕ ಸುಧಾರಕರನ್ನಾಗಿ ಅಧ್ಯಾತ್ಮಿಗಳನ್ನಾಗಿ, ಸಾಹಿತಿಗಳನ್ನಾಗಿ ಮಾಡಿದೆ.

"ಆ ಕ್ರಾಂತಿಯ ಮಂಥನದಲ್ಲಿ ಉದ್ಭವಿಸಿ ಬಂದ ಅಮೂಲ್ಯ ವಸ್ತುಗಳಲ್ಲಿ ವಚನ ಸಾಹಿತ್ಯವೊಂದು ಅದ್ವಿತೀಯ ರತ್ನವಾಗಿದೆ. ಶರಣರ ಕ್ರಾಂತಿಕಾರಕ ಮನದಲ್ಲಿ ಉಕ್ಕಿಬಂದ ಅನುಭವ ರಸಾವೇಶ ತಾಳಿ, ಭಾವಕ್ಕನುಗುಣವಾದ ಭಾಷೆಯ ಭಟ್ಟಿಯಲ್ಲಿ ಇಳಿದು, ವಚನ ಸಾಹಿತ್ಯ ಪ್ರಕಾರವೊಂದು ಮೂಡಿ ಬಂತು. ಸ್ವಯಂ ಸ್ಫೂರ್ತಿಯಿಂದ ಸೆಲೆಯೊಡೆದು ಬಂದ ಈ ವಚನಗಳು ಕನ್ನಡ ಸಾಹಿತ್ಯವನ್ನು ಬೆಳಗಿದುವು. ಮಾನವ ಕುಲದ ಮನವನ್ನು ತೊಳೆದುವು. ತತ್ವಜ್ಞಾನಕ್ಕೂ ಕಾವ್ಯಕ್ಕೂ ಒಂದು ಬಗೆಯ ಹೆಚ್ಚಿನ ಹತ್ತುಗಡೆಯನ್ನು ತಂದದ್ದು ವಚನ ಸಾಹಿತ್ಯ."[೧]

ವಚನಗಳನ್ನು ಗದ್ಯವೆನ್ನುತ್ತೀರಾ ? ಗದ್ಯವಲ್ಲ. ಪದ್ಯವೆನ್ನುತ್ತೀರಾ ? ಪದ್ಯವಲ್ಲ. ಧೋರಣೆಯಲ್ಲಿ ಉದ್ದೇಶದಲ್ಲಿ, ನಿಲುವು ಸಿದ್ಧಾಂತದಲ್ಲಿ-ಎಲ್ಲದರಿಂದ ಬೇರೆಯಾದ ವಿಶಿಷ್ಟವಾದ ಮನೋ ಮುಕ್ತ ಸ್ಫುರಣಗಳು ! ವಚನ ಹೇಗೆ ಎಲ್ಲ ಸಾಹಿತ್ಯ ಪ್ರಕಾರದಿಂದ ಭಿನ್ನವೊ, ಹಾಗೆಯೆ ವಚನಕಾರರ ಜೀವನವೂ ಭಿನ್ನ. ಬದುಕನ್ನು ಅವರು ಮಿಥ್ಯೆಯನ್ನಲಿಲ್ಲ. ಬಂಗಾರದೊಂದಿಗೆ ಮೂಲತಃ ಸೇರಿಕೊಂಡ ಮಣ್ಣಿನಾಂಶವನ್ನು ತೆಗೆದು, ಚೊಕ್ಕ ಚಿನ್ನವಾಗಿಸುವಂತೆ ಬದುಕಿನಲ್ಲಿಯ ಕಾಳಿಕೆಯನ್ನು ಕಳೆದು ಸತ್ಯಶುದ್ಧ ಜೀವನವನ್ನಾಗಿಸಿ ಕೃತಾರ್ಥರಾದವರು ಶರಣರು. ಅವರು ಲೌಕಿಕವನ್ನು ಅಲ್ಲಗಳೆಯಲಿಲ್ಲ. ಲೌಕಿಕಕ್ಕೆ ತೆಕ್ಕೆ ಬಿದ್ದು, ಅದು ತನ್ನನ್ನು ಬಿಡದೆಂದೂ ಹೇಳಲಿಲ್ಲ. ಬದುಕಿನಲ್ಲಿ ಯಾವುದೂ ಅವರಿಗೆ ತ್ಯಾಜ್ಯವಲ್ಲ. ಬದುಕನ್ನು ರೂಪಿಸುವುದಕ್ಕೆ ಯಾವುದು ಎಷ್ಟು ಅಗತ್ಯವೊ ಅಷ್ಟು ಅವರಿಂದ ಸ್ವೀಕಾರ. ಆದರೆ ಭೋಗ ರೋಗವಾಗಬಾರದು. ಯೋಗವಾಗಬೇಕು. ಅದಕ್ಕಾಗಿ ಅವರು ಕಟ್ಟುನಿಟ್ಟಾಗಿ ಪಾಲಿಸಿದ್ದು ಪರಿವರ್ತನ-ಪ್ರಸಾದೀಕರಣ ತತ್ವವನ್ನು. ಇದು ಅವರು

೧. ಈ ಕಾಲದ ಇತರ ವಚನಕಾರರು: ಬಿ. ಜಿ. ಯಲ್ಲಟ್ಟಿ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. ೪, ಭಾಗ-೧ ಪುಟ ೨೮೮, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಜೀವನದಲ್ಲಿ ಸಾಧಿಸಿದ ಸಿದ್ಧಿ ! ಸಕಲರ ಬದುಕಿನ ಲೇಸಿಗೆ ಉಪಯುಕ್ತವಾಗದ ಕಾವ್ಯ ಇರುವುದಾದರೂ ಏಕೆ ? ಅಂತರಂಗ ಬಹಿರಂಗವೆರಡನ್ನು ಬೆಳಗುವುದಕ್ಕೆ ಕಾವ್ಯ. ಇದು ವಚನಕಾರರ ಕಾವ್ಯ ಧೋರಣೆ ! ವಚನ ರಚನೆಯ ಧ್ಯೇಯೋದ್ದೇಶ !!

ಶ್ರೀ ಈಶ್ವರ ಸಣಕಲ್ಲ ಅವರು ಮೂಲತಃ ಕವಿಗಳು. ಅಂತರಂಗ ಬಹಿರಂಗ ವೆರಡನ್ನೂ ಬೆಳಗುವ ಧೋರಣೆಯಲ್ಲಿ ಅವರ ಕಾವ್ಯ ಧನ್ಯತೆಯನ್ನು ಪಡೆದಿದೆ. 'ಕೋರಿಕೆ' 'ಬಟ್ಟೆ'–ಇವೆರಡೇ ಈವರೆಗೆ ಪ್ರಕಟವಾದ ಕವನ ಸಂಕಲನಗಳು ಈ ಮಾತನ್ನು ಖುಜುವಾತುಪಡಿಸುತ್ತಿವೆ. ಅಪ್ರಕಟಿತ ಕವನಗಳು ಇನ್ನೂ ಬೆಳಕಿಗೆ ಬರಬೇಕಾಗಿದೆ. 'ಬಟ್ಟೆ' ಕವನಸಂಕಲನದಲ್ಲಿ ನೈವೇದ್ಯವೆಂಬ ವಚನವಿದೆ. ಅದರಲ್ಲಿ ಮೂಡಿದ ಅನುಭಾವ ನನ್ನ ಮೇಲೆ ಗಾಢ ಪರಿಣಾಮವನ್ನುಂಟು ಮಾಡಿತು. ಅವರ ವಚನಗಳಲ್ಲಿ ಒಂದು ಜಿಜ್ಞಾಸೆ ಹುಟ್ಟಿತು. ಇನ್ನೂ ಹಲವಾರು ವಚನಗಳನ್ನು ಅವರು ಬರೆದಿರಬಾರದೇಕೆ– ಎಂಬ ಆಸೆಗೆ ಆಸ್ಪದವಾಯಿತು. 'ಪ್ರಬುದ್ಧ ಕರ್ನಾಟಕ'ದಲ್ಲಿ ೧೪ ವಚನಗಳು ಕಂಡು ಬಂದಿವೆ. ಚನ್ನಬಸವಣ್ಣನವರ ವಚನಗಳನ್ನು ಓದಿ ಅವರಲ್ಲಿ ಉಂಟಾದ ಪರಿಣಾಮದಿಂದ ಈ ವಚನಗಳನ್ನು ರಚಿಸಿರುವುದಾಗಿ ಅವರು ಹೇಳಿದ್ದಾರೆ. ಪರಿಣಾಮದಿಂದ ಮೂಡಿದ ವಚನಗಳಾದರೂ ನಮ್ಮ ಮೇಲೆ ಪರಿಣಾಮವನ್ನು ಮಾಡದೆ ಇರಲಾರವು. ಕಾರಣ, ಅಲ್ಲಿ ವ್ಯಕ್ತವಾದ ಅಲೌಕಿಕ ಅನುಭಾವ. ಇವು ಸ್ವತಂತ್ರ ವಚನಗಳಷ್ಟೇ ಶ್ರೇಷ್ಠವಾಗಿವೆ. 'ಪ್ರಬುದ್ಧ ಕರ್ನಾಟಕ'ದ ಬೇರೆ ಸಂಚಿಕೆ ಗಳಲ್ಲಿ ಇನ್ನೂ ಹಲವು ವಚನಗಳು ಪ್ರಕಟವಾಗಿರಬಹುದು– ಎಂಬ ಅನುಮಾನ ಬರುತ್ತದೆ. ಈ ಎಲ್ಲ ಸಂಚಿಕೆಗಳನ್ನು ಸಂಗ್ರಹಿಸಿದವರು ಈ ನಿಟ್ಟಿನಲ್ಲಿ ಹುಡುಕಿ ನೋಡಿದರೆ ಲೇಸು.

ನೈವೇದ್ಯ ಎಂಬ ವಚನ ಮೂರು ಭಾಗವನ್ನೊಳಗೊಂಡಿದೆ.

**"ಕಡಲ್ಗೆ ತನ್ನ ಇಡಿ ಒಡಲನೆ ನಿವೇದಿಸಿದ ನದಿ**
**ಕೊನೆಗೆ ಮಹಾ ಕಡಲೆ ಆಯಿತ್ತು !**
**ಭುವಿಗೆ ತನ್ನ ಬಾಳನೆಲ್ಲವನು ಒಪ್ಪಿಸಿದ ಬೀಜ**
**ಕೊನೆಗೆ ಕೋಟಿ ರೂಪದಲಿ ಬೆಳೆಯಿತ್ತು !**
**ಜೀವ ಜೀವಾತ್ಮರ್ಗೆ ತ್ಯಾಗಯೋಗದಲಿ ತನ್ನನೆ ಸಲ್ಲಿಸಿ**
**ಧನ್ಯತೆಪಡೆದ ಪುನೀತಾತ್ಮ**
**ಕೊನೆಗೆ ಪರಮಾತ್ಮನಾಗಿ, ವಿಶ್ವಾತ್ಮನಾಗಿ ಬೆಳಗಿತ್ತು !**
**ಅದಕಾಗಿ, ವಿಶ್ವದ ಉತ್ಕಟೇಚ್ಛೆ ಮಹಾ ಸಂಕಲ್ಪವೆಂದರೆ–**
**ಈ ನಿವೇದನೆಯು !"**

ಹೀಗೆಯೆ ಈ ವಚನ ಮುಂದುವರಿಯುತ್ತದೆ. ನಿವೇದನೆ ಎಂದರೆ ಅರ್ಪಿಸುವುದು. ನದಿ ಸಮುದ್ರಕ್ಕೆ ಅರ್ಪಿಸಿಕೊಂಡು ತಾನೂ ಸಮುದ್ರವಾಗುವುದು.

ಬೀಜ ಭೂಮಿಗೆ ಅರ್ಪಿಸಿಕೊಂಡು ಕೋಟಿ ರೂಪದಲ್ಲಿ ಬೆಳೆಯಾಗಿ ಫಲಿಸುವುದು. ಜೀವಾತ್ಮ ತ್ಯಾಗದಿಂದ ಜೀವಾತ್ಮರಿಗೆ ಅರ್ಪಿಸಿಕೊಂಡು ಸಕಲ ಜೀವಾತ್ಮರನ್ನು ಹುಟ್ಟಿಸಿದ ಪರಮಾತ್ಮನಾಗಿ ಪರಿಣಮಿಸುವನು. ಇಲ್ಲಿ ಸಣ್ಣದು ದೊಡ್ಡದಕ್ಕೆ ಅರ್ಪಿಸಿದ್ದುಂಟು. ನೋಟಕ್ಕೆ ಆಕಾರದಲ್ಲಿ ಸಣ್ಣವು ಎನಿಸಿದ್ದರೂ ನದಿ, ಬೀಜ, ಆತ್ಮ ದೊಡ್ಡದರಿಂದಲೇ ಜನ್ಮ ಪಡೆದಂಥವು. ಮೂಲ ರೂಪ ತಾಳಬೇಕಾದುದು ಅವುಗಳ ಧರ್ಮ. ಅದಕ್ಕಾಗಿ ಅರ್ಪಿಸಿಕೊಳ್ಳುವುದು. ತ್ಯಾಗವೆಂದರೆ ಇಲ್ಲಿ ಉದಾರವಾಗಿ ವರ್ತಿಸುವ ಅರ್ಥವಲ್ಲ. ತನ್ನ ಮೂಲ ರೂಪದ ತ್ಯಾಗ, ತ್ಯಾಗವೂ ಇಲ್ಲಿ ನಿವೇದನೆಯ ಅರ್ಥವನ್ನೆ ಧ್ವನಿಸುವುದು. ಕೊಟ್ಟದ್ದು ಕೊಂಡದ್ದು ಕೂಡಿ ಆದದ್ದು ಅಥವಾ ಪರಿಣಮಿಸಿದ್ದು ಯೋಗ. ಬೀಜ ಅರ್ಪಿಸಿಕೊಂಡದ್ದು, ಭೂಮಿ ಸ್ವೀಕರಿಸಿದ್ದು, ಫಲದ ವಿಸ್ತಾರ ಯೋಗವಾದದ್ದು. ಮುಖ್ಯ ಭಾವೋದ್ದೇಶಕ್ಕೆ ಒತ್ತುಕೊಟ್ಟು ಹೇಳುವ ಗೋಸುಗ ನದಿ, ಬೀಜ ಮೊದಲಾದ ದೃಷ್ಟಾಂತಗಳನ್ನಿಲ್ಲಿ ಸಮರ್ಪಕವಾಗಿ ಬಳಸಿ ಕೊಳ್ಳಲಾಗಿದೆ,

ಪರಮಾತ್ಮನಿಂದ ಬಂದ ಜೀವಾತ್ಮ (ಮನುಷ್ಯ)ಕೊನೆಗೆ ಪರಮಾತ್ಮನಾಗಬೇಕು. ಆಗುವುದು ಸಾಧ್ಯವಿದೆ. ಆಗುವುದರಲ್ಲಿ ಮನುಷ್ಯ ಜನ್ಮದ ಸಾರ್ಥಕ್ಯವಿದೆ. ಮನುಷ್ಯ ಉಳಿದ ಜೀವಾತ್ಮರಿಗೆ ತನ್ನಲ್ಲಿರುವುದನ್ನು ಕೊಡುವುದೇ ಇಲ್ಲಿ ತ್ಯಾಗ. ತ್ಯಾಗವೆಂದರೆ ನಿವೇದನೆ, ಅರ್ಪಿಸುವುದು. ವಚನಕಾರರು ಹೀಗೆ ಅರ್ಪಿಸುವುದನ್ನು ದಾಸೋಹವೆಂದು ಕರೆದಿದ್ದಾರೆ. ಕೊಡುವುದೆಂದರೆ ಕಳಕೊಳ್ಳುವುದಲ್ಲ, ದೊಡ್ಡಸ್ತಿಕೆಯೂ ಅಲ್ಲ. ಜೀವಾತ್ಮರಿಗೆ ಕೊಡುವುದರಿಂದ ಮನುಷ್ಯ ಪರಮಾತ್ಮನಾಗುವ ಮಾತು ಭಾವಾವೇಶ ದಿಂದ ನುಡಿದದ್ದಲ್ಲ. ಪರಮಾತ್ಮನಿರುವುದು ಎಲ್ಲ ಜೀವಾತ್ಮರಲ್ಲಿ. ಎಲ್ಲ ಜೀವಾತ್ಮರಿಗೆ ಅರ್ಪಿಸುವುದೆಂದರೆ (ಕೊಡುವುದೆಂದರೆ) ಪರಮಾತ್ಮನಿಗೆ ಅರ್ಪಿಸಿದಂತೆ. ಅಲ್ಪತನ ವನ್ನು ಅರ್ಪಿಸಿಕೊಳ್ಳದೆ ಮಹತ್ತಾಗಿ ಪರಿಣಮಿಸುವುದಿಲ್ಲ. ತನ್ನಲ್ಲಿರುವುದರೊಂದಿಗೆ ತನ್ನೊಳಗಿನ ಲೋಪ ತಾಪದೊಂದಿಗೆ ತನ್ನನ್ನು ನಿವೇದಿಸಿಕೊಳ್ಳುವ ಭಾವವಿಲ್ಲಿ ವ್ಯಕ್ತ ವಾಗಿದೆ. ಇಲ್ಲಿ ಪಡೆದುಕೊಳ್ಳುವ ಪ್ರಾಪ್ತಿಯಿದೆ ಹೊರತಾಗಿ ಕಳೆದುಕೊಳ್ಳುವ ಅಳುಕಿಲ್ಲ! ವಿಶ್ವದ ಉತ್ಕಟೇಚ್ಛೆ ವಿಶ್ವನಿರ್ಮಾಪಕನ ಉತ್ಕಟೇಚ್ಛೆ ಒಂದೇ ಆಗಿದೆ. ನೈವೇದ್ಯವನ್ನು ನಿವೇದಿಸುವುದು ಅಂದರೆ ಅರ್ಪಿಸುವುದು. ಉಳ್ಳವರು ಇಲ್ಲದವರಿಗೆ ಅರ್ಪಿಸುವುದು. ಎಲ್ಲರೂ ಎಲ್ಲದರಿಂದ ಉಳ್ಳವರಲ್ಲ. ಎಲ್ಲರೂ ಎಲ್ಲದರಿಂದ ಇಲ್ಲದವರಲ್ಲ. ಅವನು ಇವರಿಗೆ ನೈವೇದ್ಯವಾಗುವುದು. ಇವರು ಅವನಿಗೆ ನೈವೇದ್ಯವಾಗುವುದು. ಇಲ್ಲಿ ನೈವೇದ್ಯಪದ ಅರ್ಥವತ್ತಾಗಿದೆ. ಕೊಟ್ಟೆನೆಂಬ ಹಮ್ಮು ಇಲ್ಲಿ ಸುಳಿಯುವುದಿಲ್ಲ. ಉಪಕಾರ ಮನೋಭಾವಕ್ಕೂ ಅವಕಾಶವಿಲ್ಲ. ಪರಸ್ಪರ ಪೂರಕ ಪೋಷಕವಾಗುವುದಕ್ಕಾಗಿ ಅನನ್ಯ ಪ್ರೀತಿ ಭಕ್ತಿಯಿಂದ ಕೊಡುಕೊಳ್ಳುವುದು. ಹುಟ್ಟಿಸಿದಾತ ತನ್ನಲ್ಲಿರುವುದೆಲ್ಲವನ್ನು ಲೋಕಕ್ಕೆ ಅರ್ಪಿಸಿ

ಬಿಟ್ಟಿದ್ದಾನೆ. ಅವನಿಂದ ಪಡೆದುಕೊಂಡವರು ಈ ತತ್ತ್ವವನ್ನು ಪಾಲಿಸಬೇಕೆಂದು ಇದರ ಅರ್ಥ. ಎಲ್ಲರೂ ಸುಖವಾಗಿ ಬದುಕುವುದರಲ್ಲಿಯ ರಹಸ್ಯ ಈ ನೈವೇದ್ಯ ತತ್ತ್ವವಾಗಿದೆ.

ಸಾಧನೆಯಿರಲಿ, ಬೋಧನೆಯಿರಲಿ, ಶೋಧನೆಯಿರಲಿ, ಆರಾಧನೆಯಿರಲಿ— ಎಲ್ಲೆಂಗದಲ್ಲಿ ನೈವೇದ್ಯಭಾವ ಅಗತ್ಯವಾಗಿದೆ. ಇಲ್ಲಿ ಸಣಕಲ್ಲ ಅವರು ತಮ್ಮನ್ನು ತಾವು ನಿವೇದಿಸಿಕೊಳ್ಳುವ ಪಾತ್ರತೆಯನ್ನು ಪವಿತ್ರತೆಯನ್ನು ದಯಪಾಲಿಸಬೇಕೆಂದು ವಿಶ್ವೇಶ್ವರನಿಗೇ ಪ್ರಾರ್ಥಿಸಿಕೊಂಡಿದ್ದಾರೆ. 'ವಿಶ್ವೇಶ್ವರ' ಅವರ ಅವಚನಾಂಕಿತ ವಾಗಿರುವುದು ಅರ್ಥಪೂರ್ಣವಾಗಿದೆ.

ಈ ವಚನದ ಎರಡನೆಯ ಭಾಗ— ನಿವೇದನೆಯಿಂದ ಸಾಧಿಸಬಹುದಾದ ಫಲವನ್ನು ವಿವರಿಸುತ್ತದೆ. ಅಹಂಕಾರ ಅಲ್ಪತೆ (ಸಣ್ಣತನ)ಗಳು ಮನುಷ್ಯನ ಅಂತರಂಗ ಬಹಿರಂಗ ಏಳಿಗೆಯನ್ನು ಕುಂಠಿತಗೊಳಿಸುತ್ತವೆ. ಇವುಗಳಿಂದ ಮುಕ್ತವಾದಾಗ ನಿವೇದನೆಗೆ ಅರ್ಥ ಬರುತ್ತದೆ. ನಿವೇದನೆಯಿಂದ ವ್ಯಷ್ಟಿಸಮಷ್ಟಿಯಾಗುತ್ತದೆ. ಜೀವಾತ್ಮ ಸರ್ವಾತ್ಮನಾಗುತ್ತಾನೆ. ಸರ್ವರ ಹಿತಚಿಂತಕನೆ ಸರ್ವಾತ್ಮನಾಗುವುದೆಂದರೆ ಪರಮಾತ್ಮ ನಾಗುವುದು. ಅದಕ್ಕಾಗಿ ಸರ್ವಸ್ವವನ್ನು ಸರ್ವಾತ್ಮರಿಗೆ ನಿವೇದಿಸುವಂತೆ (ಅರ್ಪಿಸು ವಂತೆ) ಭಕ್ತಿಯನ್ನು ದಯಪಾಲಿಸಬೇಕೆಂದು ಸರ್ವಾತ್ಮಸ್ವರೂಪಿಯಾದ ಪರಮಾತ್ಮನಿಗೆ ಸಣಕಲ್ಲ ಅವರು ಪ್ರಾರ್ಥಿಸುತ್ತಾರೆ.

ಮೂರನೆಯ ಭಾಗ ನಿವೇದನೆಯ ಪರಮೋಚ್ಚ ನಿಲುವನ್ನು ತಿಳಿಸುತ್ತದೆ. ನಿವೇದನೆ ಒಂದು ತಪಸ್ಸು. ತಪಸ್ಸಿಗೆ ತನ್ನನ್ನು ಅರ್ಪಿಸಿಕೊಳ್ಳದೆ ಸಾಧಕ ಋಷಿ ಯಾಗಲಾರ. ಕಾವ್ಯಕ್ಕೆ ತನ್ನನ್ನು ತಾನು ಅರ್ಪಿಸಿಕೊಳ್ಳದೆ ಬರಹಗಾರ ಕವಿಯಾಗ ಲಾರ. ಪೂರ್ಣವಾಗಿ ಅರ್ಪಿಸಿಕೊಳ್ಳುವುದೆಂದರೆ ಆತ್ಮನೈವೇದ್ಯ. ಆತ್ಮನೈವೇದ್ಯ ವನ್ನು ಅನುಷ್ಠಾನದಲ್ಲಿ ತಂದಲ್ಲದೆ ಕವಿಯಿಂದ ರಸಪೂರ್ಣ ಕಾವ್ಯ ಹುಟ್ಟಲಾರದು. ಇಲ್ಲಿ ಕವಿ ಸಣಕಲ್ಲ ಅವರು ಪದ್ಯವೆಂದರೆ ಆತ್ಮನೈವೇದ್ಯ ಎನ್ನುವಲ್ಲಿ ಒಂದು ವಿಶೇಷ ಅರ್ಥವಿದೆ. ಆತ್ಮನೈವೇದ್ಯ ನಿಶ್ಶಬ್ದಕಾವ್ಯ. ಕಾವ್ಯ ಶಬ್ದಭರಿತ ಕಾವ್ಯ. ಅಂಥ ಆತ್ಮನೈವೇದ್ಯ ತಮ್ಮಲ್ಲಿ ಮೈಗೂಡಲೆಂದು ಕವಿಗಳು ವಿಶ್ವೇಶ್ವರನಿಗೆ ನಿವೇದಿಸಿ ಕೊಳ್ಳುತ್ತಾರೆ.

ಇಲ್ಲಿ 'ಆತ್ಮನೈವೇದ್ಯ' ಪದ ಗಮನಾರ್ಹವಾಗಿದೆ. ತಾನು ಏನಾಗಬೇಕೊ —ಆ ಸಂಕಲ್ಪಕ್ಕೆ ಆತ್ಮವನ್ನು ನೈವೇದ್ಯವನ್ನಾಗಿ ಅರ್ಪಿಸುವುದೆ ಆತ್ಮನೈವೇದ್ಯ. ಕೊಡುವುದು ಬೇರೆ ಅರ್ಪಿಸುವುದು ಬೇರೆ. ಅರ್ಪಿಸುವುದು ಯಾವಾಗಲೂ ಪ್ರಸಾದವಾಗಿರಬೇಕು. ಸದ್ಭಾವ ಸದ್ಭಕ್ತಿಯಿಂದ ಅರ್ಪಿತವಾದುದು ಪ್ರಸಾದವೆನಿಸುತ್ತದೆ. ಅನಾಚಾರ ತೊಲಗಿ ಸದಾಚಾರ ತುಂಬಿದಲ್ಲದೆ ಸದ್ಭಾವ ಸದ್ಭಕ್ತಿ ಎಂಬುದು ತಲೆದೋರದು. ಬಸವಣ್ಣನ ಮಹಾಮನೆಯಲ್ಲಿ ಅಲ್ಲಮಪ್ರಭುವಿನ ಆರೋಗಣೆಯ ಪ್ರಸಂಗವನ್ನು

ಇಲ್ಲಿ ಉದಾಹರಿಸಬಹುದು. ಮಹಾಮನೆಯೊಳಗಿನ ಸಕಲ ಪದಾರ್ಥವನ್ನೂ ಸಲ್ಲಿಸಿದರೂ ಪ್ರಭುವಿನ ಹಸಿವು ಹಿಂಗಲಿಲ್ಲ, ತೃಪ್ತಿಯಾಗಲಿಲ್ಲ. ಚನ್ನಬಸವಣ್ಣನ ಸಲಹೆಯಂತೆ ಬಸವಣ್ಣ ಆತ್ಮವನ್ನೆ ನೈವೇದ್ಯವನ್ನಾಗಿ (ಬೋನವನ್ನಾಗಿ) ಅರ್ಪಿಸಿಕೊಂಡ ಮೇಲೆ ಪ್ರಭುವಿನ ಹಸಿವು ಹಿಂಗುತ್ತದೆ. ಮಹಾಘನಕ್ಕೆ ತೃಪ್ತಿಯುಂಟಾಗುತ್ತದೆ. ಬಸವಣ್ಣ ಆತ್ಮನೈವೇದ್ಯವನ್ನು ಆಚರಣೆಯಲ್ಲಿ ರೂಢಿಸಿಕೊಂಡ ಮೇಲೆ ಆ ಕುರಿತು ಅವನ ವಿಚಾರಧಾರೆ ಹಲವಾರು ವಚನಗಳಲ್ಲಿ ವ್ಯಕ್ತವಾಗಿರುತ್ತದೆ.

**"ತನುವ ಕೊಟ್ಟು ಗುರುವನೊಲಿಸಬೇಕು**
**ಮನವ ಕೊಟ್ಟು ಲಿಂಗವನೊಲಿಸಬೇಕು**
**ಧನವ ಕೊಟ್ಟು ಜಂಗಮವನೊಲಿಸಬೇಕು**
**ಈ ತ್ರಿವಿಧವ ಹೊರಗು ಮಾಡಿ ಹರೆಯ ಹೊಯಿಸಿ**
**ಕುರುಹ ಪೂಜಿಸುವರ ಮೆಚ್ಚ ಕೂಡಲಸಂಗಮದೇವ"**

**(ಬ. ವ. ೨೦೬)**

ತನು, ಮನ, ಧನವ ಕೊಟ್ಟು ಮನುಷ್ಯರನ್ನು ಹುಟ್ಟಿಸಿದಾತ ಪರಮಾತ್ಮ. ಅವನು ಮಹಾದೈವ. ಸಕಲ ವಿಸ್ತಾರದ ರೂಹುಗಳನ್ನು ಕಲ್ಪಿಸಿದ ಮಹಾಘನವಸ್ತು! ಈ ಘನಕ್ಕೆ ಗುರು ಒಂದು ಮುಖ. ಲಿಂಗ ಇನ್ನೊಂದು ಮುಖ ಜಂಗಮ ಮತ್ತೊಂದು ಮುಖ. ತಮ್ಮ ತಮ್ಮೊಳಗೆ ಕೊಟ್ಟುಕೊಂಡು ಜೀವಾತ್ಮರೆಲ್ಲ ಸುಖವಾಗಿ ಬದುಕಬೇಕೆಂಬುದು ಸಕಲ ಪಡಿಪದಾರ್ಥವನ್ನು ಕೊಟ್ಟಾತನ ಆಶಯ. ಈ ಅರಿವನ್ನು ಕಲಿಸುವಲ್ಲಿ ಆ ವಸ್ತು ಗುರುವೆನಿಸುತ್ತಾನೆ. ಈ ಬುದ್ಧಿಯನ್ನು ಅಥವಾ ಅರಿವನ್ನು ತಿಳಿದುಕೊಳ್ಳುವುದಕ್ಕಾಗಿ ತನುಸೇವೆ ಮಾಡಿ ಗುರುವಿನನ್ನು ಒಲಿಸಿಕೊಳ್ಳಬೇಕು. ಈ ಅರಿವು ಹುಟ್ಟಿದರೆ ಮಾತ್ರ ಆತ್ಮ ನೈವೇದ್ಯಕ್ಕೆ ಮನುಷ್ಯ ಮುಂದಾಗುತ್ತಾನೆ. ಇಲ್ಲಿ ತೆಲಸಂಗದ ಶಿವಬಸವ ಗುರುಗಳಿಗೆ ಸೇವೆ ಶುಶ್ರೂಷೆ ಮಾಡಿ ಅವರಿಂದ ಆತ್ಮ ಜ್ಞಾನವನ್ನು ಪಡೆದುಕೊಂಡ ಅಥಣಿ ಶಿವಯೋಗಿಗಳ ದೃಷ್ಟಾಂತ ಸಮಯೋಚಿತವಾಗಿದೆ. ಅನನ್ಯಸೇವೆಯಿಂದ ಗುರುಗಳು ಕುಷ್ಠರೋಗದಿಂದ ಗುಣಮುಕ್ತರಾಗುತ್ತಾರೆ; ಶಿವಯೋಗಿಗಳು ಋಣಮುಕ್ತರಾಗುತ್ತಾರೆ. ಇದು ತನುವ ಕೊಟ್ಟು ಗುರುವನೊಲಿಸುವ ಪರಿ.

ಜೀವಾತ್ಮ ಪರಮಾತ್ಮನಿಂದ ಪಡೆದುಕೊಂಡ ಆತ್ಮವೇ ಲಿಂಗ. ತಾನು ಮಾಡುವುದು ತನ್ನ ಆತ್ಮಕ್ಕೆ ಮೊದಲು ತೃಪ್ತಿಯಾಗಬೇಕು. ಆತ್ಮಕ್ಕೆ ತೃಪ್ತಿಯಾದರೆ ಜಗತ್ತಿಗೇ ತೃಪ್ತಿ. ಸತ್ಕಾರ್ಯ ಅಥವಾ ಸೇವೆಯನ್ನು ಮಾಡುವಲ್ಲಿ ಮನಸ್ಸು ತೊಡಗುವಂತೆ ಮಾಡಬೇಕೆಂದು ಆ ಲಿಂಗವನ್ನು ಒಲಿಸಿಕೊಳ್ಳಬೇಕು. ತನ್ನ ಆತ್ಮ ಅಥವಾ ಲಿಂಗಕ್ಕೆ ಮನವನ್ನು ಒಪ್ಪಿಸಿಕೊಳ್ಳುವುದೆಂದರೆ ಒಲಿಸಿಕೊಳ್ಳುವುದು. ಆತ್ಮ ನೈವೇದ್ಯಕ್ಕೆ ಆತ್ಮ ಸ್ವರೂಪಿಯಾದ ತನ್ನನ್ನು ತಾನು ಎಚ್ಚರಿಸಿಕೊಳ್ಳುವ ಕ್ರಮವಿದು.

ಆತ್ಮನೈವೇದ್ಯಕ್ಕೆ ಮೊದಲು ಮನಸು ಹುಟ್ಟಬೇಕು. ಮನವ ಕೊಟ್ಟು ಲಿಂಗವ ನೊಲಿಸಬೇಕೆಂಬುದರ ತಾತ್ಪರ್ಯ ಇದುವೆ ಆಗಿದೆ.

ಮಹಾದೈವದ ವಿಸ್ತಾರ ಸ್ವರೂಪವೇ ಜಂಗಮ. ಆದರೆ ಜಂಗಮ ತತ್ತ್ವವೆ ಸಕಲ ಜೀವಾತ್ಮರ ರೂಪು ತಾಳಿ ವಿಶ್ವದ ತುಂಬ ತುಂಬಿಕೊಂಡಿದೆ. ತಾನು ಪಡೆದು ಕೊಂಡ ಧನವೆಲ್ಲ ಆ ದೈವದ ಕೊಡುಗೆ. ಆ ದೈವದ ವಿಸ್ತಾರ ರೂಪ ಜಂಗಮಕ್ಕೆ ತನಗೆ ಅಗತ್ಯವಾದುದನ್ನಿರಿಸಿಕೊಂಡು ಮಿಕ್ಕಿದ್ದನ್ನು ಅರ್ಪಿಸಬೇಕೆಂಬ ಅರ್ಥ ಇಲ್ಲಿ ಅಡಕವಾಗಿದೆ. ಸಕಲ ವಿಸ್ತಾರದ ಜೀವಾತ್ಮರಿಗೆ ಸಂದರೆ ಜಂಗಮಕ್ಕೆ ಸಲ್ಲಿದಂತೆ. ಸಕಲವನ್ನು ಕೊಟ್ಟಾತನಗೆ ತನ್ನ ಶಕ್ತ್ಯಾನುಸಾರ ಕೊಟ್ಟು ಮನುಷ್ಯರು ಕೃತಾರ್ಥರಾಗಬೇಕೆಂಬ ತತ್ವ ಇಲ್ಲಿ ಅಡಕವಾಗಿದೆ. ಅದಕ್ಕಾಗಿ ಧನವಕೊಟ್ಟು ಜಂಗಮವನೊಲಿಸಬೇಕೆಂದು ಬಸವಣ್ಣ ಹೇಳಿದ್ದು. ಬಸವಣ್ಣ ಹೇಳಿದ್ದನ್ನು ಸಣಕಲ್ಲ ಅವರು ಬೇರೊಂದು ರೀತಿಯಲ್ಲಿ ಹೇಳಿದ್ದಾರೆ. ಇದು ಆತ್ಮನೈವೇದ್ಯದಲ್ಲಿ ಕೊನೆಯ ಮೆಟ್ಟಿಲು.

'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟವಾದ ಕೆಲವು ವಚನಗಳು ನನಗೆ ಕಂಡು ಬಂದಿವೆ. ಸಂಪುಟ ೪೬, ಸಂಚಿಕೆ ೧ರಲ್ಲಿ ಇಂಥ ೧೪ ವಚನಗಳನ್ನು ನೋಡಬಹುದು. ಕರ್ನಾಟಕ ವಿಶ್ವವಿದ್ಯಾಲಯದ ವಚನ ವಿಭಾಗದಲ್ಲಿ ಸಣಕಲ್ಲ ಅವರು ಪಾಠಾಂತರ, ಪರಿಷ್ಕಾರ ಮೊದಲಾದ ಕಾರ್ಯ ನಿರ್ವಹಿಸಿದಾಗ ಅವರ ಮನಸಿನ ಮೇಲೆ ಚನ್ನ ಬಸವಣ್ಣನವರ ವಚನಗಳು ಅಗಾಧ ಪರಿಣಾಮ ಬೀರಿವೆ. ಆ ಪರಿಣಾಮದಿಂದ ಮೂಡಿಬಂದ ವಚನಗಳಿವು. ಎಂಟನೆಯ ವಚನ ಗಮನಾರ್ಹವಾಗಿದೆ.

**"ಅಯ್ಯಾ ಅಯ್ಯಾ, ನನ್ನದು ಅಜ್ಞಾನ**
**ಅದಕಾಗಿಯೇ ನನ್ನದು ಅಂಥ ದೃಷ್ಟಿ, ಅಂಥ ಸೃಷ್ಟಿ !**
**ಅಯ್ಯಾ ಅಯ್ಯಾ, ನನ್ನದು ಅಂಶ ಜ್ಞಾನ**
**ಅದಕಾಗಿಯೇ ನನ್ನದು ಅಸ್ಪಷ್ಟ ದೃಷ್ಟಿ, ಅಸ್ಪಷ್ಟ ಸೃಷ್ಟಿ !**
**ಅಯ್ಯಾ ಅಯ್ಯಾ, ನನ್ನದು ಅರ್ಧ ಜ್ಞಾನ**
**ಅದಕಾಗಿಯೇ ನನ್ನದು ಅರ್ಧ ದೃಷ್ಟಿ, ಅರ್ಧ ಸೃಷ್ಟಿ !**
**ಅಯ್ಯಾ ಅಯ್ಯಾ, ನನ್ನದು ಅಪೂರ್ಣ ಜ್ಞಾನ**
**ಅದಕಾಗಿಯೇ ನನ್ನದು ಅಪೂರ್ಣ ದೃಷ್ಟಿ, ಅಪೂರ್ಣ ಸೃಷ್ಟಿ !**
**ಇವುಗಳ ಫಲವೋ ಅಹಂಕಾರ ಹೂಂಕಾರಗಳ ಬಲ !**
**ನನ್ನದೇ ಸರಿಯೆಂಬ ಭಾವ-ಭ್ರಮೆಯ ಛಲ !**
**ಅನುಭಾವಿ ನಾನೆಂಬ ಪೊಳ್ಳು ಭರವಸೆಯ ಬಿಲ !"**

ಇಲ್ಲಿ ಸಣಕಲ್ಲ ಅವರು ತಮ್ಮ ಬಗೆಗೆ ವಿಮರ್ಶೆ ಮಾಡಿಕೊಳ್ಳುವ ಮೂಲಕ ಮನುಷ್ಯ ಸ್ವಭಾವ ಹಾಗೂ ವರ್ತನೆ ಕುರಿತು ವಿಮರ್ಶೆ ಮಾಡಿದಂತೆ ಇದೆ. ಮನುಷ್ಯ

ಪರಿಪೂರ್ಣನಲ್ಲ. ಜೀವನದುದ್ದಕ್ಕೂ ಮನುಷ್ಯ ಸಾಧನೆ ಮಾಡಿದರೂ ಜ್ಞಾನದ ಪೂರ್ಣತ್ವವನ್ನು ಅಳವಡಿಸಿಕೊಂಡಿದ್ದಾನೆ ಎಂದು ಖಚಿತವಾಗಿ ಹೇಳಲು ಬರುವಂತಿಲ್ಲ. ಅಲ್ಲಮಪ್ರಭು, ಚನ್ನಬಸವಣ್ಣನಂಥವರು ಕೆಲವರು ಇರಬಹುದು. ತನ್ನಲ್ಲಿರುವುದು ಪೂರ್ಣಜ್ಞಾನವೆಂದು ಮನುಷ್ಯ ಭಾವಿಸುತ್ತಾನೆ. ಆದರೆ ಅವನಲ್ಲಿರುವುದು ಅಜ್ಞಾನ. ಇಲ್ಲಿ ಅನುಕ್ರಮವಾಗಿ ಬಂದ ಅಜ್ಞಾನ, ಅಂಶಜ್ಞಾನ, ಅರ್ಧಜ್ಞಾನ, ಅಪೂರ್ಣಜ್ಞಾನ ಈ ಪದಗಳನ್ನು ಗಮನಿಸಬೇಕು. ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ನೋಡಿದರೆ ಮನುಷ್ಯನಲ್ಲಿ ಕಂಡುಬರುವುದು ಅಜ್ಞಾನ. ಒಂದಿಷ್ಟು ಇದೆ ಎಂದರೂ ಪರಿಪೂರ್ಣವಲ್ಲ. ಅದು ಅಂಶಜ್ಞಾನ, ಅರ್ಧಜ್ಞಾನ, ಅಪೂರ್ಣಜ್ಞಾನ. ಎಂತಹ ಜ್ಞಾನವೊ ಅಂತಹ ದೃಷ್ಟಿ, ಅಂತಹ ಸೃಷ್ಟಿ. ಅದಕ್ಕಾಗಿ ಮನುಷ್ಯ ಪಡೆದದ್ದು ಅಂಧದೃಷ್ಟಿ, ಅಸ್ಪಷ್ಟದೃಷ್ಟಿ, ಅಪೂರ್ಣದೃಷ್ಟಿ ಅದರಂತೆ ಅವನಿಂದ ಮೂಡಿ ಬಂದುದು ಅಂಧಸೃಷ್ಟಿ, ಅಸ್ಪಷ್ಟಸೃಷ್ಟಿ, ಅರ್ಧಸೃಷ್ಟಿ, ಅಸ್ಪಷ್ಟ ಸೃಷ್ಟಿ.

ಈ ಅರ್ಧಮರ್ಧ ದೃಷ್ಟಿ ಸೃಷ್ಟಿಯ ಪರಿಣಾಮದ ಫಲವೆಂದರೆ ಅಹಂಕಾರ, ಭ್ರಮೆ. ಆದರಿಂದಾಗಿ ಪರಸ್ಪರರಲ್ಲಿ ಅವಿಶ್ವಾಸ, ಅಪನಂಬಿಕೆ, ಸಂಶಯ, ತಿಕ್ಕಾಟ, ಮುಕ್ಕಾಟ, ತುಮುಲ ! ಅಲ್ಪಜ್ಞಾನ ಸದಾ ಬಾಯಿ ತೆರೆದುಕೊಂಡೇ ಇರುತ್ತದೆ. ಪೂರ್ಣಜ್ಞಾನ ಬಾಯಿ ಮುಚ್ಚಿಕೊಂಡಿರುತ್ತದೆ. ಅದು ವಾಚಾಳಿ, ಇದು ಮೌನಿ ! ಪೂರ್ಣಜ್ಞಾನದಲ್ಲಿ ತಮ್ಮ (ಮನುಷ್ಯನ)ಅಪೂರ್ಣ ಜ್ಞಾನವೆಲ್ಲ ಕೊಚ್ಚಿ ಹೋಗಲೆಂದು ಸರ್ವಜ್ಞನಾದ ವಿಶ್ವೇಶ್ವರನಿಗೆ ಕವಿ ಇಲ್ಲಿ ಪ್ರಾರ್ಥಿಸುತ್ತಾರೆ. ಅದು ಕೊಚ್ಚಿ ಹೋದಾಗ ಸ್ವಚ್ಛ ಬೆಳಕು ಕಣ್ಮನದೊಳಗಾಡಿ ತನ್ನರಿವು ತನಗೆ ಗೋಚರ ವಾಗುವುದುಂಟು.

ಒಂಬತ್ತನೆಯ ವಚನ ವಚನಕ್ಕೆ ವ್ಯಾಖ್ಯಾನ ಬರೆದಂತಿದೆ. ಹಾಗು ವಚನಕಾರರ ಹಾಗು ಅವರೊಳಗಣ ಅನುಭಾವ ಕುರಿತು ಭಾಷ್ಯ ಬರೆದಂತಿದೆ.

**"ಆತ್ಮತೃಪ್ತಿಯನರಿಯಬಲ್ಲಡೆ ವಚನ**
**ಸ್ಥಾವರ ಜಂಗಮದಲ್ಲಿ ದಯವಾಗಿ ಸಯವಾಗಿ ಇರಬಲ್ಲಡೆ ರಚನೆ**
**ಅರಿಷಡ್ವರ್ಗಗಳ ಇಚ್ಛೆಗೆ ಹರಿಯದಿರಬಲ್ಲಡೆ ಅನುಭಾವ !**
**ಸತ್ವರಜತಮವನೊತ್ತಿ ನಿಂದಿರಬಲ್ಲಡೆ ಸಹಜ !!"**

ವಚನವೆಂಬುದು ಶಬ್ದ ಸಮೂಹವಲ್ಲ, ಶಬ್ದದಾಚೆಯ ನಿಶ್ಶಬ್ದ. ಕವನ ಕಾವ್ಯ ಅನುಭವವನ್ನು ರಸವತ್ತಾಗಿ ಹೇಳಿದರೆ ವಚನ ಅನುಭವವನ್ನು ಅನುಭಾವಕ್ಕೆ ಎತ್ತರಿಸಿ ಮನಂಬುಗುವಂತೆ ಹೇಳುತ್ತದೆ. ತೃಪ್ತಿಯ ಬದುಕನ್ನು ಬದುಕಿದವರು ಶರಣರು, ಶರಣರು ಪಟ್ಟ ಆತ್ಮತೃಪ್ತಿ ಶಬ್ದಮುಖದಲ್ಲಿ ಬಂದುದು ವಚನ ಸ್ಥಾವರವಿರಲಿ. ಜಂಗಮವಿರಲಿ, ಚರವಿರಲಿ, ಅಚರವಿರಲಿ ಸಕಲ ಜೀವಾತ್ಮರಲ್ಲಿ ಸಮಭಾವ ದಯಾಭಾವ ಹುಟ್ಟುವಂತೆ ಬರೆದರೆ, ಅದು ನಿಜವಾದ ವಚನ ರಚನೆ. ಲೋಕದಲ್ಲಿ

ಕಂಡದ್ದು ಬರಿ ಅನುಭವ. ಅನುಭವ ಉದಾತ್ತವಾಗಿ ಬೆಳಗಿದಲ್ಲಿ ಅನುಭಾವವಾಗುತ್ತದೆ. ಕಾಮ, ಕ್ರೋಧಾದಿಗಳತ್ತ ಹರಿಯುವ ಮನವನ್ನು ಶಿವಭಾವದತ್ತ ಒಲಿಯುವಂತೆ ಮಾಡಿ, ಅದರಲ್ಲಿಯೆ ತನ್ನ ಸಾರ್ಥಕ ಸುಖವನ್ನು ಕಾಣುವಂತೆ ಮಾಡುವುದೇ ಉದಾತ್ತೀಕರಣ. ಈ ಅನುಭಾವವನ್ನೆ ಆಸ್ತಿಯನ್ನಾಗಿ ಮಾಡಿಕೊಂಡಿರಬಲ್ಲಾತ ಅನುಭಾವಿ! ಅನುಭಾವಿಗಲ್ಲದೆ ಆತ್ಮಜ್ಞಾನ ಅಳವಡದು. ಆತ್ಮಜ್ಞಾನವೇ ತಾನಾದಲ್ಲದೆ ಆತ್ಮತೃಪ್ತಿಗಟ್ಟಿಗೊಳ್ಳದು !

ಸತ್ವರಜತಮೋಗುಣಗಳಿಂದ ಬಿಡುಗಡೆ ಹೊಂದಿದವನೇ ಸಹಜ, ನಿರಾಳ, ಸ್ಥಿತಪ್ರಜ್ಞ. ರಜತಮ ಗುಣಗಳಂತೂ ಅವಗುಣಗಳು. ಸತ್ವಗುಣವುಳ್ಳ ಸಾತ್ವಿಕ ನಲ್ಲಿಯೂ ಲೋಪ ಸೇರಬಹುದು. ನಾನು ಸಾತ್ವಿಕ ಎಂಬ ಅಹಂಭಾವವೇ ಒಂದು ಲೋಪ, ಸಹಜ ಸ್ಥಿತಿಗೆ ಏರಬೇಕಾದರೆ ಈ ಮೂರರಿಂದಲೂ ಮುಕ್ತವಾಗಿರುವುದು ಅಗತ್ಯವಾಗಿದೆ. ಇಂಥ ವಚನ, ರಚನೆ, ಅನುಭಾವ, ಸಹಜ ಸ್ಥಿತಿಗಳು ತಮ್ಮಲ್ಲಿ ಸಮವಾಗುವಂತೆ ಕರುಣಿಸಬೇಕೆಂದು ವಚನಕಾರ ಸಣಕಲ್ಲ ಅವರು ವಿಶ್ವೇಶ್ವರನಿಗೆ ಬಿನ್ನವಿಸಿಕೊಳ್ಳುತ್ತಾರೆ.

**"ಅಯ್ಯಾ ತಮ್ಮ ವಚನ ಜ್ಯೋತಿ ನಿತ್ಯ ನಂದಾಜ್ಯೋತಿ !**
**ಲೋಕವೆಲ್ಲ ತಮ್ಮಂತೆಯೇ ಆಗಬೇಕೆಂದು ನುಡಿದಿಹಿರಿ**
**'ಲೋಕದ ಮಕ್ಕಳ ಮುನ್ನಡೆಯಿಸುವಾ ತಾಯಿ ತಂದೆ'**
**ಎಂದೊಡೆ ತಮ್ಮ ವಚನ !**
**'ಹರಿವ ಮನವ ಸ್ವಸ್ಥವಾಗಿ ನಿಲಿಸಬಲ್ಲಡೆ' ತಮ್ಮ ವಚನ !**
**ಪಶುವು ಸಹ ಪರಾತ್ಪರ ಪರಂಜ್ಯೋತಿ**
**ನಿತ್ಯ ನಿರವಯಕೇರದೇನಯ್ಯಾ ? ವಿಶ್ವೇಶ್ವರಾ !"**

೧೧ನೆಯ ವಚನದಲ್ಲಿ ಚನ್ನಬಸವಣ್ಣನವರ ವಚನದ ಹಿರಿಮೆಯನ್ನೂ ವಿವರಿಸ ಲಾಗಿದೆ. ಶಿವಶರಣರ ಚಾರಿತ್ರ್ಯ ಹೇಗೊ ಹಾಗೆ ಅವರ ವಚನ. ವಚನ ಹೇಗೊ ಹಾಗೆ ಅವರ ಚಾರಿತ್ರ್ಯ ! ಚನ್ನಬಸವಣ್ಣನವರ ಜ್ಞಾನವೊಂದು ಪ್ರಸಾದ. ಅವರ ಜ್ಞಾನ ಕ್ರಿಯಾರೂಪ ತಾಳಿ ಕ್ರಿಯೆ ಜ್ಞಾನರೂಪ ತಾಳಿ ಒಂದು ಪ್ರಸಾದವಾದುದುಂಟು. ಆ ಪ್ರಸಾದವೇ ಅವರ ವಚನವಾದುದುಂಟು. ಆ ವಚನ ಪ್ರಸಾದಕ್ಕೆ ಅವರೆಂದೂ ತಪ್ಪಿ ನಡೆಯಲಿಲ್ಲ.

# ೧೭

# ಅಧ್ಯಾತ್ಮವೂ – ವೈಜ್ಞಾನಿಕ ವಿಚಾರವೂ

"ಜಟಿಲ ಸಮಸ್ಯೆಗಳನ್ನು, ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸಲಾಗದ ಅಂಜುಗುಳಿಗಳು ಅಧ್ಯಾತ್ಮಕ್ಕಿಳಿಯುತ್ತಾರೆ, ದೇವರಿಗೆ ಮೊರೆ ಹೋಗುತ್ತಾರೆ, ಧರ್ಮ ಧರ್ಮ ಎನ್ನುತ್ತಾರೆ." ಮಾತಿಗೊಮ್ಮೆ ವೈಚಾರಿಕತೆಯ ಹೆಸರೆತ್ತುವವರ ವಾದವಿದು. ನಿರೀಶ್ವರವಾದಿಗಳೆತ್ತುವ ಅಪಸ್ವರ ಇದೆ ಬಗೆಯಾಗಿದೆ.

ಇದು ವೈಜ್ಞಾನಿಕ ಯುಗ. ವೈಜ್ಞಾನಿಕ ಪ್ರಮಾಣ ಒಪ್ಪದ್ದನ್ನು ಇಂದಿನ ವೈಚಾರಿಕರು ಸ್ವೀಕರಿಸುವುದಿಲ್ಲ. ಇದು ತಪ್ಪಲ್ಲ. ಸೃಷ್ಟಿಯ ಕೆಲ ರಹಸ್ಯಗಳನ್ನು, ಗ್ರಹ ತಾರೆಗಳ ನೆಲೆ ಬೆಲೆಯನ್ನೂ ತಿಳಿಯುವಲ್ಲಿ ವಿಜ್ಞಾನ ಸಮರ್ಥವಾಗಿದೆ. ಇದು ವಿಜ್ಞಾನದ ದೊಡ್ಡ ಸಾಧನೆಯೂ ಅಹುದು. ವಿಜ್ಞಾನವನ್ನು ದುಡಿಸಿಕೊಳ್ಳಬಲ್ಲ ಮನುಷ್ಯ ಬುದ್ಧಿಯ ಅಗಾಧತೆಗೆ ಸಂಕೇತವೂ ಅಹುದು. ಆದರೆ, ಮನುಷ್ಯನ ಆಳದ ಆಳದಲ್ಲಿ ನಡೆಯುವ ಕೆಲವೊಂದು ಅಲೌಕಿಕ ಕ್ರಿಯೆಗಳನ್ನು ಹಾಗೂ ಅಂಥವುಗಳಿಗೆ ಪ್ರೇರಕವಾಗಿ ನಿಂತ ಏಕಮೇವ ಶಕ್ತಿ ವಿಶೇಷತೆಯನ್ನೂ ಅರಿಯುವಲ್ಲಿ–ವಿಜ್ಞಾನ ಅರಿಯುವಲ್ಲಿ ಸಮರ್ಥವಾಗಿರುವುದೆ ? ಇದಕ್ಕೆ ಉತ್ತರವೇನು ? ನಿಖರವಾಗಿ ಖಚಿತವಾಗಿ ಅರಿಯುವುದನ್ನು ವಿಜ್ಞಾನವೆಂದು ಕರೆಯುವುದಾದರೆ ಅಂಥ ವಿಜ್ಞಾನಕ್ಕೆ ಬ್ರಹ್ಮಾಂಡದ ನಿಗೂಢ ರಹಸ್ಯಗಳನ್ನು ಪರಿಪೂರ್ಣವಾಗಿ ತಿಳಿದುಕೊಳ್ಳುವ ಸಾಮರ್ಥ್ಯ ಬಂದಿಲ್ಲವೆಂದು ಹೇಳಿದರೆ, ಅಪಾರ್ಥ ಕಲ್ಪಿಸುವ ಕಾರಣವಿಲ್ಲ. ಹಾಗೆ ಅಂಥ ಸಾಮರ್ಥ್ಯವನ್ನು ವಿಜ್ಞಾನ ಪಡೆಯಬಹುದಾದರೆ, ಅದು ಅಧ್ಯಾತ್ಮ ಜ್ಞಾನದ ಬಲದಿಂದ ಮಾತ್ರ ಸಾಧ್ಯವೆಂದು ಹೇಳಬಹುದು.

ವಿಕಾಸ ಹೊಂದಬೇಕಾದ ಸಾಧನೆಯಲ್ಲಿರುವ ಮನುಷ್ಯನಿಗೆ ಅಂಜುಗುಳಿತನ ಸಲ್ಲದು, ಒಣ ಜಂಭವೂ ಸಲ್ಲದು, ತನ್ನ ಶಕ್ತಿಗೆ ಮೀರಿ ನಿಂತಾಗ, ತನಗಿಂತ ಮಿಗಿಲಾದ ಪರಮೋನ್ನತ ಶಕ್ತಿಗೆ ಮೊರೆಯಿಡುವುದು ಅಂಜುಗುಳಿತನವಲ್ಲ. ನಾವು ಹೊತ್ತ ಹೊರೆ ಅತಿಭಾರವಾದಾಗ ಇನ್ನೊಂದು ಹೆಜ್ಜೆ ಹೊತ್ತು ನಡೆಯುವುದು ಅಸಾಧ್ಯವಾಗಿ, ಯಾತನೆಯನ್ನೆದುರಿಸುವಾಗ ನಮ್ಮ ದಾರಿಯಲ್ಲಿ ಬಂದವರಿಗೆ ಯಾಚಿಸುವುದು ಅಂಜುಗುಳಿತನವೇನು ? ನಾವು ಯಾಚಿಸುವ ಪರಮೋನ್ನತ ಶಕ್ತಿ ನಮ್ಮಿಂದ ಬೇರೆಯಲ್ಲ. ಆ ಮಹಾಶಕ್ತಿಯಿಂದಲೆ ನಾವು ಬಂದವರು. ಹಾಗೆ ನೋಡಿದರೆ, ನಮಗೆ ನಾವೇ ಮೊರೆಯಿಟ್ಟಂತೆ, ಇನ್ನೊಂದು ರೂಪದಲ್ಲಿರುವ ಶಕ್ತಿಯನ್ನೆ ಬಳಸಿಕೊಂಡಂತೆ ! ಕೂಸು ತಾಯಿಯ ಸಹಾಯ ಪಡೆಯುವುದನ್ನು

ಇದಕ್ಕೆ ಹೋಲಿಸಬಹುದು. ಪ್ರತಿಕೂಲವನ್ನು ಎದುರಿಸಲು ಪ್ರಯತ್ನ ಬೇಕೇಬೇಕು. ಆದರೆ ಪ್ರಯತ್ನ ಮಾಡುವುದಕ್ಕೆ ಮನುಷ್ಯನಿಗೆ ಬುದ್ಧಿಯನ್ನು ಕೊಟ್ಟವರಾರು ? ಮನುಷ್ಯನನ್ನು ಸೃಷ್ಟಿಸಿದವನೆ ಬುದ್ಧಿಯನ್ನೂ ಸೃಷ್ಟಿಸಿದ್ದಾನೆ. ಅಷ್ಟೆ ಅಲ್ಲ, ಯಾರಿಂದ ಹುಟ್ಟಿ ಬಂದಿರುವನೊ, ಅವನೆ ಆಗಿ ಪರಿಣಮಿಸುವಂತೆ ಅವನಿಂದಲೆ ಅಗತ್ಯವಾದ ಪರಿಜ್ಞಾನವನ್ನು ಪಡೆದುಕೊಂಡು ಬಂದಿದ್ದಾನೆ. ಹೆಪ್ಪಿಟ್ಟ ಹಾಲು, ಮೊಸರು, ಮಜ್ಜಿಗೆಯಾಗಿ ತುಪ್ಪವಾಗುವುದಕ್ಕೆ ಹೇಗೆ ಕ್ರಿಯಾಮಥನ ಅಗತ್ಯವೊ ಹಾಗೆಯೆ ಮನುಷ್ಯ ಮಹೋನ್ನತ ಸ್ಥಿತಿಯನ್ನು ಮುಟ್ಟುವುದಕ್ಕೆ ಕ್ರಿಯಾಮಥನ ಅಗತ್ಯವಷ್ಟೆ.

ಸಿದ್ಧಾಂತವೆಂಬುದು ವೈಜ್ಞಾನಿಕ ತಳಹದಿಯ ಮೇಲೆ ಮೂಡಿ ಬಂದಿರ ಬೇಕೆನ್ನುವ ವಾದ ತಪ್ಪಲ್ಲ. ವೈಜ್ಞಾನಿಕ ಆಧಾರವಿದ್ದಷ್ಟು ಅದಕ್ಕೆ ಗಟ್ಟಿಗುಣ ಬರುವುದೇನು ಸುಳ್ಳಲ್ಲ, ಅಂಥ ಪ್ರಮಾಣವಿದ್ದುದಷ್ಟೆ ಸತ್ಯವೆನ್ನುವುದೂ ತಪ್ಪು. ಮನುಷ್ಯ (ಭೌತಿಕ ಶರೀರ) ಸೀಮಿತ, ಮನುಷ್ಯಜೀವನ ನಿಸ್ಸೀಮಿತ. ಒಬ್ಬ ಸತ್ತ, ಇನ್ನೊಬ್ಬ ಹುಟ್ಟಿಬರುತ್ತಾನೆ. ಹೀಗೆಯೇ ಈ ಮನುಷ್ಯ ಜೀವನ ಜಗತ್ತು ಇರುವವರೆಗೆ ಇರುವಂಥದು. ಇಂಥ ಮನುಷ್ಯಜೀವನ ವೈಜ್ಞಾನಿಕ ತೆಕ್ಕೆಯೊಳಗೆ ಹಿಡಿಸುವಂಥದಲ್ಲ. ಹೊರಗಣವನ್ನು ವಿಜ್ಞಾನ ಕಂಡರಿಯಬಹುದು. ನಿಗೂಢವಾದ ಒಳಗಿನ ಅಂತಃಶಕ್ತಿಯ ಜೀವಂತಿಕೆಯನ್ನು ಕಂಡರಿಯುವಲ್ಲಿ ವಿಜ್ಞಾನ ಇನ್ನೂ ಸಫಲವಾಗಿಲ್ಲ. ಅಖಂಡ ಬ್ರಹ್ಮಾಂಡದ ನಿರಂತರ ಚಲನಶೀಲ ಶಕ್ತಿಯ ಹಿಂದಿನ ಚೈತನ್ಯದ ನೆಲೆ ಬೆಲೆಯನ್ನು ವಿಜ್ಞಾನ ಕಂಡರಿಯಬಹುದೆ ? ಈ ಪ್ರಶ್ನೆ ಪ್ರಶ್ನೆಯಾಗಿಯೆ ಉಳಿಯುವುದೊ, ಉತ್ತರವಾಗಬಹುದೊ ಈಗಂತೂ ಹೇಳಲು ಸಾಧ್ಯವಿಲ್ಲ.

ಮಾನವ ಜೀವನದ ಅನೇಕ ಮುಖಗಳಲ್ಲಿ ವೈಚಾರಿಕತೆ ಹೇಗೆ ಒಂದು ಮುಖವೋ ಹಾಗೆಯೆ ಭಾವನೆಯೂ ಒಂದು ಮುಖ. ಮನುಷ್ಯ ಬದುಕುವುದು ಮುಖ್ಯ. ಸಾಧ್ಯವಾದಷ್ಟು ನಿರಾತಂಕವಾಗಿ ಬದುಕುವುದೂ ಇನ್ನೂ ಮುಖ್ಯ. ಆದರೆ, ಆತಂಕವಿಲ್ಲದೆ ಜೀವನ ಪಥವಿಲ್ಲ. ಆದ್ದರಿಂದ ಎದುರಾದ ಆತಂಕವನ್ನು ಎದುರಿಸ ಬಲ್ಲ ಸಾಮರ್ಥ್ಯವನ್ನು ಗಳಿಸಿಕೊಳ್ಳುವುದು ಮುಖ್ಯ. ನಡೆಯುವುದೆಂದರೆ ಬರಿ ಮುಂದೆ ಹೆಜ್ಜೆಯೂರುವುದಲ್ಲ, ಪ್ರಗತಿಪಥದಲ್ಲಿ ಮುನ್ನಡೆದು ಗುರಿಯತ್ತ ಗಮನ ಹರಿಸಿ ಹೆಜ್ಜೆಯಿರಿಸುವುದು ಮುಖ್ಯ ! ಹೀಗಾಗುವುದಕ್ಕೆ ಯಾವುದು ಪೋಷಕವೊ ಅದನ್ನು ಅವಲಂಬಿಸಬೇಕಾಗುತ್ತದೆ. ವೈಚಾರಿಕತೆ ಸತ್ಯಾನ್ವೇಷಣೆಯತ್ತ ಕರೆದೊಯ್ಯುವು ದಾದರೆ, ಭಾವನೆ (ಭಾವುಕತೆ) ರಸೋಲ್ಲಾಸವಾಗಿ ಮುನ್ನಡೆಗೆ ಸ್ಫೂರ್ತಿಯನ್ನೀಯು ತ್ತದೆ. ಕಾವ್ಯ ಅಥವಾ ಸಾಹಿತ್ಯ ವಿಚಾರ ಪ್ರಧಾನವಾದರೆ, ನೀರಸವೆನಿಸ ಬಹುದು, ಬರಿ ಭಾವನಾಪ್ರಧಾನವಾದರೆ ಅಷ್ಟೊಂದು ಪ್ರಯೋಜನಕಾರಿಯಾಗ

ಲಾರದು. ಯಾವುದೆಷ್ಟು ಅಗತ್ಯವೊ ಅಷ್ಟನ್ನು ಮೈಗೂಡಿಸಿಕೊಂಡರೆ, ಅದು ಉತ್ತಮ ಕಾವ್ಯ, ಹಾಗೆಯೆ ಮನುಷ್ಯಜೀವನ. ಸಮತೂಕವನ್ನು ಕಾಯ್ದುಕೊಂಡು ಹೋದದ್ದು ಮನುಷ್ಯ ಜೀವನಕ್ಕೆ ಹೆಚ್ಚು ಪೋಷಕ !

ಈ ವಿಷಯದಲ್ಲಿ ಬಸವಣ್ಣನನ್ನು ಹೆಸರಿಸಬಹುದು. ಬಸವಣ್ಣನ ವಿಚಾರ ಧಾರೆಯಲ್ಲಿ ವೈಚಾರಿಕತೆಗೂ ಬೆಲೆಯುಂಟು, ಭಾವುಕತೆಗೂ ನೆಲೆಯುಂಟು. ಅಂತಃಕರಣ (ಹೃದಯವಂತಿಕೆಯಿಂದ)ದಿಂದ ಉಕ್ಕಿಬಂದ ಭಾವನೆಯು ಬಸವಣ್ಣನನ್ನು ವೈಚಾರಿಕತೆಯತ್ತ ಕರೆದೊಯ್ದಿತು. ಅವನ ಸದ್ಭಾವ– ಎಲ್ಲರೂ ದೇವರ ಮಕ್ಕಳೆಂದು ಸರಿಸಮಾನರೆಂದು ಸಾರಿತು, ಅದನ್ನು ಆಚರಣೆಯಲ್ಲಿ ತರುವಲ್ಲಿ ವೈಚಾರಿಕತೆಯ ಪಾತ್ರವೂ ಇತ್ತು. ಈ ಸೃಷ್ಟಿಯ ನಿರ್ಮಾಣ ಹಾಗು ಜೀವವಿಕಾಸ ಕ್ರಮವು ವೈಜ್ಞಾನಿಕ ಸಾಧನೆ ಸಿದ್ಧಿಯೆನ್ನಬಹುದು. ಆದರೆ, ಅದರ ನಿರ್ಮಾಣದ ಹಿಂದಿರುವ ಕಾರಣಕರ್ತ ಶಕ್ತಿಯನ್ನು ಅಲ್ಲಗಳೆಯಬಹುದೆ ? ಕೃತಿಯ ಹಿಂದೆ ಕಾರ್ಯ, ಕಾರ್ಯದ ಹಿಂದೆ ಕಾರಣಕರ್ತ ಶಕ್ತಿಯೊಂದು ಇರಲೇಬೇಕು. ಈ ಕ್ರಮಬದ್ಧತೆಯೂ ವೈಜ್ಞಾನಿಕವೆಂದು ವಾದಿಸಬಹುದಾದರೂ, ನಮ್ಮ ಕಣ್ಣಿಗೆ ಕಾಣದಿದ್ದ ಪಕ್ಷದಲ್ಲಿ, ಅದರ ಹಿಂದಿರುವ ಕಾರಣಕರ್ತ ಶಕ್ತಿಯ ಅಸ್ತಿತ್ವವನ್ನು ಸುಳ್ಳಾಗಿಸಬಹುದೆ ? ಮನುಷ್ಯ ಜೀವನದ ಸಕಲ ಚೇಷ್ಟೆಗೆ ಕಾರಣೀಭೂತವಾದ ಜೀವ ಗೋಚರಿಸುವುದಿಲ್ಲ ವೆಂದು ಅದು ಇಲ್ಲವೆಂದು ಹೇಳಬಹುದೆ ? ಆ ಕಾರಣಕರ್ತ ವಸ್ತುವನ್ನು ಅಥವಾ ಶಕ್ತಿಯನ್ನು ದೇವರೆಂದು ಕರೆಯಲಾಗಿದೆ. ಸಕಲ ವಿಸ್ತಾರ ಸೃಷ್ಟಿಯ ಚೇಷ್ಟೆಯ ಹಿಂದೆ ಯಾವುದೋ ಒಂದು ಕಾರಣಕರ್ತ ವಸ್ತು ಇರಬೇಕೆಂದು ಮಹಾವಿಜ್ಞಾನಿ ಐನ್‌ಸ್ಟಿನ್ ಹೇಳಿರುವುದನ್ನಿಲ್ಲಿ ಸ್ಮರಿಸಬಹುದು. ಮುಗಿಲ ಮರೆಯಲಡಗಿದ ಮಿಂಚು ಕಾಣದೆಂದು ಅದು ಇಲ್ಲವೆಂದು ಹೇಗೆ ಹೇಳಬಹುದು ?

**"ಯುಗ ಜುಗ ಮಿಗಿಲೆನಿಸಿದ ಹದಿನಾಲ್ಕು ಭುವನ ನೆಲೆಗೊಳ್ಳದಂದು**
**ತೋರುವ ಬೀರುವ ಭಾವದ ಹರಿ !**
**ಈ ಭಾವದಲ್ಲಿ ಭರಿತ ಅಗಮ್ಯ ಗುಹೇಶ್ವರ ನಿರಾಳವು" (ಅ. ಪ್ರ. ೭)**

ಆ ಮಹಾಕಾರಣಕರ್ತನನ್ನು ಕುರಿತು ಅಲ್ಲಮಪ್ರಭು ಹೀಗೆ ಹೇಳಿದ್ದಾರೆ.

**"ದೇಹ ನಾನಲ್ಲ ಜೀವ ನಾನಲ್ಲವೆಂಬುದದು ಶಿವನೆನಿಸಿತ್ತು**
**ಶಿವ ಜೀವನಿಗೆ ಭೇದವೆಂಬುದು ಇಲ್ಲ ಕಾಣಾ !**
**ಉದಕವಿದ್ದೆಡೆಯಲ್ಲಿ, ಗಗನ ಪರಿಪೂರ್ಣದಲ್ಲಿ**
**ರವಿ ತಾರೆ ಮೇಘವಾದಂತೆ**
**ಪರಿಪೂರ್ಣ ವಸ್ತುವೆ ಚಿದಾಕಾಶದಲ್ಲಿ ಶಿವ ಜೀವವಾಯಾ**
**ಪ್ರಕೃತಿ ಎನಿಸಿತ್ತಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ"**

**(ಸಿದ್ಧರಾಮ ವ. ೧೭)**

ಸಿದ್ಧರಾಮೇಶ್ವರನ ವಿಚಾರ ಎಷ್ಟು ವೈಜ್ಞಾನಿಕವಾಗಿದೆ !

"ಸಗುಣ ನಿರ್ಗುಣ ದೇವರೆಂದೆನ್ನ
ಸಗುಣ ನಿರ್ಗುಣಗಳಿಗೆ ಮಿಗೆಮಿಗೆಯಾಗಿ ತೋರುವ
ಪರಮಾವ್ಯಯು ನೀನಾದ ಕಾರಣ
ನಿರವಯು ಲಿಂಗವೆಂದೆ, ನಿಃಕಲ ಪರಬ್ರಹ್ಮವೆಂದೆ
ಏಕಮೇವನದ್ವಿತೀಯ ಪರಾತ್ಪರವೆಂದೆನು ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ" (ತೋ. ಸಿ. ೨೩)

ತೋಂಟದ ಸಿದ್ಧಲಿಂಗ ಯತಿಗಳ ವಿಚಾರ ಗಹನವಾಗಿದೆ ಎಂದು ಅದರ ಸತ್ಯ ತಥ್ಯವನ್ನು ಹೇಗೆ ನಿರಾಕರಿಸಲು ಸಾಧ್ಯ ?

"ಕೀಟಕ ಸೂತ್ರವ ನೂಲ ಗೂಡ ಮಾಡಿ ಸುತ್ತಿರ್ಪಂತೆ
ಸೂತ್ರಕ್ಕೆ ನೂಲನೆಲ್ಲಿಂದ ತಂದಿತ್ತಯ್ಯಾ ?
ರಾಟೆಯಿಲ್ಲ ಅದಕ್ಕೆ, ಹಂಜಿ ಮುನ್ನವೆ ಇಲ್ಲ, ನೂತವರಾರೋ ?
ತನ್ನೊಡಲ ನೂಲ ತೆಗೆದು ಪಸರಿಸಿ, ಅದರೊಳು
ಪ್ರೀತಿಯಿಂದೊಲಿದಾಡಿ
ತುದಿಯಲ್ಲಿ ತನ್ನೊಳಗದ ಮಡಗಿಕೊಂಡಿಪ್ಪಂತೆ
ತನ್ನಿಂದಾದ ಜಗವ ತನ್ನೊಳಗೈದಿಸಿಕೊಳಬಲ್ಲ
ನಮ್ಮ ಕೂಡಲ ಸಂಗಮದೇವರು" (ಬ. ವ. ೯೬೩)

ಸೃಷ್ಟಿಯ ಹುಟ್ಟು, ಮಧ್ಯ, ಕೊನೆ ಇವುಗಳ ಬಗೆಗೆ ಹೇಳಿದ ಬಸವಣ್ಣನ ಮಾತು ಎಷ್ಟು ಸುಲಭ ವೇದ್ಯವೊ, ಅಷ್ಟೇ ಮಾರ್ಮಿಕವೂ ವೈಜ್ಞಾನಿಕವೂ ಆಗಿದೆ !

ಈ ಎಲ್ಲ ಅನುಭಾವಿಗಳ ಅನುಭವ ಗಮನಾರ್ಹವಾಗಿದೆ. ಸತ್ಯವನ್ನು ಶೋಧಿಸುವಲ್ಲಿ ಅವರು ಗೈದ ಕ್ರಿಯಾಮಥನ ಅದರಿಂದ ಪಡೆದ ಅನುಭವ, ಆ ಅನುಭವವನ್ನು ದುಡಿಸಿಕೊಂಡು ಸತ್ಯದ ಹತ್ತಿರ ಹತ್ತಿರ ಕ್ರಮಿಸಿದ ಸಾಧನೆ, ಆ ಸತ್ಯವೇ ತಾವಾಗಿ ಪರಿಣಮಿಸಿದ ಸಿದ್ಧಿ ಅಗಾಧವಾಗಿದೆ ! ಆ ಸತ್ಯವನ್ನೇ ದೇವರೆಂದು ಕರೆಯುವುದು ಅದರ ಬಗೆಗೆ ನಿಷ್ಕರ್ಷೆ ಮಾಡುವುದು ಅಧ್ಯಾತ್ಮವೆಂದು ಹೇಳಲಾಗುವುದು. ಆದರೆ ವೈಚಾರಿಕತೆಯ ಭ್ರಮೆಯಲ್ಲಿ ದೇವರನ್ನಾಗಲಿ, ಅಧ್ಯಾತ್ಮವನ್ನಾಗಲಿ ಸುಲಭವಾಗಿ ಅಲ್ಲಗಳೆಯುವುದು ವಿಚಾರವಂತಿಕೆಯ ಲಕ್ಷಣವಲ್ಲ.

ಅವರ ಆತ್ಮ ಇವರ ಆತ್ಮ– ಒಂದೇ ಎಂಬುದನ್ನು ಅರಿಯುವುದೇ ಅಧ್ಯಾತ್ಮ ! ಅವರಿಗೂ ಲೇಸಾಗಲಿ, ಇವರಿಗೂ ಲೇಸಾಗಲಿ ಎನ್ನುವ ವಿಚಾರ ಆಚಾರವಾಗುವುದೆ ಅಧ್ಯಾತ್ಮ. ಈ ಅಧ್ಯಾತ್ಮ ಕೆಲಸಕ್ಕೆ ಬಾರದ ಭಾವಾವೇಶವಲ್ಲ. ಕೈಲಾಗದವರು ಕೈಚೆಲ್ಲಿ ನಿಂತು ಹೇಳುವ ಒಣ ಕಾಲ್ಪನಿಕ ದೈವವಾದವಲ್ಲ. ಆರೋಗ್ಯಕರ ಮನಸ್ಸಿನಲ್ಲಿ

ನೆಟ್ಟು ಬೆಳೆಸುವ ಹೃದಯವಂತಿಕೆಯು ಹೆಮ್ಮರವದು. ನೊಂದ ಜೀವಕ್ಕೆ ನೆರಳು-ನೆಮ್ಮದಿ ಬೇಕೆಂದರೆ, ದುಡಿದೂ ವಂಚಿತವಾದ ಜೀವಕ್ಕೆ ಫಲ ದಕ್ಕಬೇಕೆಂದರೆ, ಈ ಅಧ್ಯಾತ್ಮವನ್ನು ಬೆಳೆಸುವ ಹುಚ್ಚು ಬೇಕು. ಜೀವರಾಶಿಗೆಲ್ಲ ಒಳ್ಳೆಯದನ್ನು ಮಾಡುವ ಗೋಸುಗ ಜೀವನವನ್ನು ತೇಯುವವರೆಲ್ಲ ಹುಚ್ಚರೆನಿಸುತ್ತಾರೆ. ರಾಮ, ಕೃಷ್ಣ. ಕ್ರಿಸ್ತ, ಬುದ್ಧ, ಪೈಗಂಬರ, ಬಸವ, ರಾಮಕೃಷ್ಣ ಪರಮಹಂಸ, ಗಾಂಧೀಜಿ ಮುಂತಾದವರು ಇಂಥ ಹುಚ್ಚರೇ ಸರಿ ! ಜಗತ್ತಿಗೆ ಒಳ್ಳೆಯತನವನ್ನು ಸಾಧಿಸಿದ ಇವರ ರೀತಿಯೆಲ್ಲ— ಅಂದಂದಿನ ಕಾಲಕ್ಕೆ ಹುಚ್ಚುತನವಾಗಿ ಕಂಡಿದ್ದರೆ ಆಶ್ಚರ್ಯವಲ್ಲ. ಇವರು ಕೈಕೊಂಡ ಲೋಕಕಲ್ಯಾಣ ಕಾರ್ಯಗಳಲ್ಲಿ ವೈಚಾರಿಕ ದೃಷ್ಟಿಯೂ ವೈಜ್ಞಾನಿಕ ಮನೋಧರ್ಮವೂ ಇದ್ದುದನ್ನು ಅಲ್ಲಗಳೆಯಲಾಗದು. ಮಾನವ ಕುಲಕ್ಕೆ ಒಳ್ಳೆಯದನ್ನು ಮಾಡುವುದೇ ವಿಜ್ಞಾನದ ಉದ್ದೇಶವಲ್ಲವೆ ? ಮನುಷ್ಯ ಅದನ್ನು ವ್ಯತಿರಿಕ್ತವಾಗಿ ಉಪಯೋಗಿಸಿಕೊಂಡರೆ ವಿಜ್ಞಾನದ ತಪ್ಪೇನು ? ಕುರುಡರಿಗೆ ಕಾಣದಿದ್ದರೆ ಬೆಳಕೆಂಬುದು ಇಲ್ಲವೆಂದು ಹೇಳಬಹುದೆ ?

ದೇವರು ಧರ್ಮಗಳ ಹೆಸರಿನಲ್ಲಿ ನಡೆಯಬಾರದ ಕೆಲಸ ನಡೆದದ್ದುಂಟು. ಹಾಗಾದ ಪ್ರಸಂಗದಲ್ಲಿ, ದೇವರು ಧರ್ಮಗಳ ಬಗೆಗೆ ಜಿಗುಪ್ಸೆ ಹುಟ್ಟುವುದು ಸ್ವಾಭಾವಿಕ. ದೇವರೊಪ್ಪದುದು, ಧರ್ಮದ ಆಶಯಕ್ಕೆ ಹೊರತಾದುದು ದೈವ ಭಕ್ತಿಯೂ ಅಲ್ಲ, ಧರ್ಮವೂ ಅಲ್ಲ. ದೇವರೆನ್ನುವುದೊಂದು ಸದ್ಭಾವದ ತತ್ವ, ಧರ್ಮವೆನ್ನುವುದೊಂದು ಒಳ್ಳೆಯತನದ ಉದ್ಗಮ ! ಎಲ್ಲಿ ಸದ್ಭಾವ ಇಲ್ಲವೊ, ಅಲ್ಲಿ ದೇವರಿಲ್ಲ. ಎಲ್ಲಿ ಒಳ್ಳೆಯತನವಿಲ್ಲವೊ, ಅಲ್ಲಿ ಧರ್ಮವಿಲ್ಲ ! ವಿಜ್ಞಾನವಿಂದು ಮಾನವನ ರಾಕ್ಷಸೀ ಬುದ್ಧಿಯಲ್ಲಿ ಸಿಕ್ಕು ವಿಧ್ವಂಸಕ್ಕೀಡಿದ್ದರೆ ಆ ವಿಜ್ಞಾನವನ್ನೆ ಬೇಡವೆನ್ನಬಹುದೆ ? ಅದು ವಿಜ್ಞಾನವನ್ನು ಕಂಡು ಹಿಡಿದವನ ದೌರ್ಬಲ್ಯವೆನ್ನಬಹುದೆ? ವಿಜ್ಞಾನವನ್ನು ಕಂಡು ಹಿಡಿದವನ ತಪ್ಪಲ್ಲ, ಆದರೆ ಅದನ್ನು ದುರಪಯೋಗಪಡಿಸಿಕೊಂಡವನ ತಪ್ಪು. ಅದೇ ರೀತಿ ಧರ್ಮವಿಂದು ಮಾನವನ ಅಳಿಮನದ ಕೈಯಲ್ಲಿ ಸಿಕ್ಕು, ಅನಾಚಾರಕ್ಕೀಡಿಯುತ್ತಿದ್ದರೆ, ಆ ಧರ್ಮವನ್ನು ಬೇಡವೆನ್ನಬಹುದೆ ? ಧರ್ಮ ದುರ್ಬಲ ಅಥವಾ ಅಸಹಾಯಕ ಸ್ಥಿತಿಯಿಂದ ಹುಟ್ಟಿದ್ದಲ್ಲ, ಸಮರ್ಥ ಸಾತ್ವಿಕ ಆತ್ಮಶಕ್ತಿಯಿಂದ ಹುಟ್ಟಿದ್ದು, ಕೇಡಾಗುವುದು ಧರ್ಮದಿಂದಲ್ಲ, ಅದರ ಕಾರಣಕರ್ತನಿಂದಲ್ಲ, ಧರ್ಮದ ಹೆಸರನ್ನು ದುರುಪಯೋಗಪಡಿಸಿಕೊಂಡವನಿಂದ ದೀವಿಗೆ ಹೊತ್ತಿಸಲೆಂದಿರುವ ದೀಪದ ಕಡ್ಡಿಯಿಂದ ಮನೆ ಮಾರನ್ನು ಸುಡಲು ಬಳಸಿಕೊಂಡರೆ, ಅದು ಯಾರ ತಪ್ಪು ?

ವೈಚಾರಿಕ ದೃಷ್ಟಿಗೆ ಪ್ರಾಶಸ್ತ್ಯ ಕೊಡಬೇಕೆ ಹೊರತಾಗಿ, ವೈಚಾರಿಕತೆಯ ಹೆಸರಿನಲ್ಲಿ ಎಲ್ಲವನ್ನು ಹೀನಾಯವಾಗಿ ಕಂಡು, ಆಗಬಹುದಾದ ಪ್ರಯೋಜನಕ್ಕೆ ಎರವಾಗಬಾರದು. ಅಧ್ಯಾತ್ಮವೆಂಬುದು ವೈಜ್ಞಾನಿಕ ಅಥವಾ ವೈಚಾರಿಕ ದೃಷ್ಟಿಗೆ

ಸುಸಂಗತವಾಗಿರಬೇಕೆಂಬುದನ್ನು ಯಾರೂ ಅಲ್ಲಗಳೆಯುವುದಿಲ್ಲ, ಆದರೆ ವೈಜ್ಞಾನಿಕ ವಲ್ಲದುದೆಲ್ಲವೂ ತ್ಯಾಜ್ಯವೆಂದು ಹೇಳುವದು ಅವಿಚಾರವಾದೀತು. ವೈಜ್ಞಾನಿಕ ಅಥವಾ ಅವೈಜ್ಞಾನಿಕ ಎಂಬುದನ್ನು ಕೂಲಂಕಷವಾದ ಪರಾಮರ್ಶೆಯಿಂದ ನಿರ್ಣಯಿಸ ಬೇಕಲ್ಲದೆ. ಮನಸ್ಸಿನ ದುಡುಕುತನದಿಂದ ಮತ್ತು ಒಣ ಆವೇಶದಿಂದ ಅಲ್ಲ.

**“ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು ?**
**ಜೀವ ಜೀವಾತ್ಮ ಸರಿಯೆಂದು ಕಂಡರೆ**
**ಸಮವೇದಿಸದಿಪ್ಪನೆ ಶಿವನು ?**
**ತನ್ನ ಮನದಲ್ಲಿ ‘ಯತ್ರ ಜೀವಃ ತತ್ರ ಶಿವ’ನೆಂದು**
**ಸರ್ವ ಜೀವ ದಯಾಪಾರಿಯಾದರೆ ಕೂಡಲ ಸಂಗಮದೇವರು**
**ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ ?”** (ಬ. ವ. ೮೦೪)

ಶಬ್ದಶಃ ಈ ವಚನಾರ್ಥ– ಪ್ರಸ್ತುತ ಲೇಖನದ ವಿಷಯಕ್ಕೆ ಅನ್ವಯಿಸುವುದಲ್ಲ ವಾದರೂ, ಅದರ ಮಥಿತಾರ್ಥ ಹಾಗು ಆಶಯ ಮಾತ್ರ ಸುಸಂಗತವಾಗುವುದುಂಟು. ಜಗತ್ತಿನಲ್ಲಿ ಯಾವುದೂ ಪೂರ್ಣ ತ್ಯಾಜ್ಯವಲ್ಲ. ಪೂರ್ಣ ಸ್ವೀಕಾರಯೋಗ್ಯವಲ್ಲ. ಅದು ಉಪಯುಕ್ತ, ಇದು ನಿರುಪಯುಕ್ತ– ಎಂಬ ವಾದವೂ ಸಲ್ಲದು. ಜೀವ ಜೀವಾತ್ಮರಲ್ಲಿ ಭೇದ ಕಲ್ಪಿಸುವುದು ಹೇಗೆ ತಪ್ಪೋ, ಹಾಗೆಯೆ ವಸ್ತು ಅಥವಾ ವಿಚಾರದಲ್ಲಿ ವೃಥಾ ಪೂರ್ವಗ್ರಹ ಪೀಡಿತರಾಗಿ ಬರಿದೆ ಜರಿಯುವುದಾಗಲಿ, ಹೊಗಳುವುದಾಗಲಿ ತಪ್ಪು ! ಹದವರಿತ ಪಾಕ (ಅಡಿಗೆ) ವಾಗುವುದಕ್ಕೆ ಹುಳಿ, ಖಾರ, ಸಿಹಿ. ಒಗರು ಎಲ್ಲವೂ ಬೇಕು. ಒಂದನ್ನು ಬಿಟ್ಟರೆ ರುಚಿಗೆ ಭಂಗ ಬರುವುದು. ಎಷ್ಟು ಅಗತ್ಯವೊ ಅಷ್ಟನ್ನು ಒಂದೊಂದನ್ನು ಬೆರೆಸುವುದು ಉಚಿತ. ನಮ್ಮ ಜೀವನ ಕ್ರಮಕ್ಕೆ ಎಲ್ಲಿ ವೈಜ್ಞಾನಿಕ ನಿಲವು ಅಗತ್ಯವೊ ಅಲ್ಲಿ ಅದರ ಪ್ರಯೋಜನ, ಎಲ್ಲಿ ಆಧ್ಯಾತ್ಮಿಕ ನಿಲವು ಅಗತ್ಯವೊ ಅಲ್ಲಿ ಅದರ ಪ್ರಯೋಜನ ! ಅದು ಬಿಟ್ಟು ವೈಜ್ಞಾನಿಕ ವಿಚಾರವಾದಿಗಳು ಅಧ್ಯಾತ್ಮವನ್ನು ನಿಂದಿಸುವುದು, ಅಧ್ಯಾತ್ಮ ಮನೋಧರ್ಮದವರು ವಿಜ್ಞಾನವನ್ನು ಜರಿಯುವುದು ಎರಡೂ ತಪ್ಪು !

**“ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ ನಿಮ್ಮ ಧರ್ಮ !**
**ಬೊಬ್ಬಿಡದಿರಿಂ ಭೋ ನಿಮ್ಮ ಧರ್ಮ**
**ಆರಡದಿರಿಂ ಭೋ ನಿಮ್ಮ ಧರ್ಮ !**
**ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ !**
**ಕೂಡಲ ಸಂಗಮ ದೇವ ಏಕೋಭಾವ!”** (ಬ. ವ. ೮೨೯)

ಬಸವಣ್ಣನ ಜೀವನ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವ ವಚನವಿದು. ಕಳ್ಳರು ಅವರ ಮನೆಯಲ್ಲಿಯ ಆಕಳನ್ನು ಕದ್ದೊಯ್ಯುವಾಗ ಸೇವಕರಿಗೆ ಬಸವಣ್ಣ ಕಟ್ಟು ನಿಟ್ಟಾಗಿ ಹೇಳಿದ ಆಜ್ಞೆಯಿದು, ಹಾಲು ತುಪ್ಪನ್ನು ನಾವುಂಡರೂ

ಶಿವನುಂಡಂತೆ, ಅನ್ಯರುಂಡರೂ ಶಿವನುಂಡಂತೆ. ನಮ್ಮಲ್ಲಿರುವ ಶಿವ ಅವರಲ್ಲಿಯೂ ಇದ್ದಾನೆ. ದೇವರು ದಯಾಮಯಿ, ಏಕೀಭಾವ ಜೀವಿ ! ಶಿವನಂತೆ ನಡೆದರೆ ಮಾತ್ರ ನಾವು ಶಿವಭಕ್ತರು.

ಇಲ್ಲಿ ದಯಾ ಧರ್ಮದೃಷ್ಟಿಯೂ ಇದೆ. ಸಮಾನತೆಯ ಸಮತೋಲನ ಕಾಯ್ದುಕೊಳ್ಳಬೇಕೆಂಬ ವಿಚಾರವೂ ಇದೆ. ಹಾಗೆ ಸಮತೋಲನ ಕಾಯ್ದುಕೊಳ್ಳದಿದ್ದರೆ ಸಮಾಜದಲ್ಲಿ ಏರುಪೇರು ಉಂಟಾಗಿ, ಕಳವು, ಕೋಲಾಹಲ ಸಂಭವಿಸುತ್ತವೆ. ಇದು ಆಗಬಾರದೆಂಬ ವಿಚಾರ ಬಸವಣ್ಣನದು! ಹಾಗು ಅವನ ಮನೋವೈಶಾಲ್ಯಕ್ಕೆ ಇದು ಸಾಕ್ಷಿಯಾಗಿದೆ. ದಾರಿ ಏರುಪೇರಾಗಿದ್ದರೆ ಎತ್ತಿನ ಬಂಡಿ ಒಗ್ಗಾಲಿಯಾಗುತ್ತದೆ. ನಾವು ನಡೆವ ಜೀವನಮಾರ್ಗ ಏರುಪೇರಾಗಿದ್ದರೆ, ಒಟ್ಟಂದದ ಸಾಮಾಜಿಕ ಬಂಡಿ ಕುಸಿದು ಬೀಳುತ್ತದೆ. ಹೀಗೆ ಇಲ್ಲಿ ವೈಚಾರಿಕ ಮನೋಧರ್ಮವೂ ಮಾನವಧರ್ಮವೂ ಬೇರೆಂಬುದನ್ನು ನಿರ್ದೇಶಿಸುವುದುಂಟು !! ಆದರೆ, ಬಸವಣ್ಣನಲ್ಲಿ ಕಳ್ಳತನಕ್ಕೆ ಆಸ್ಪದ ಮಾಡಿ ಕೊಡುವ ವಿಚಾರವಂತು ಇಲ್ಲವೇ ಇಲ್ಲ. ಅಧ್ಯಾತ್ಮ ವಿಜ್ಞಾನ ದೂರ ದೂರವಿಲ್ಲ. ಎರಡೂ ಜೀವಕುಲ ಕಲ್ಯಾಣವನ್ನು ಬಯಸುವಂಥವು !

ದೇವರ ಹೆಸರಿನಿಂದ ಅನಾಚಾರವಾಗಿ ನಡೆಯುವುದು ಧರ್ಮವೂ ಅಲ್ಲ, ಅಲ್ಲಿ ದೇವರೂ ಇಲ್ಲ. ದೇವರ ಹೆಸರಿಲ್ಲದೆ ಸದಾಚಾರವಾಗಿ ನಡೆಯುವುದು ಧರ್ಮವೂ ಅಹುದು, ಅಲ್ಲಿ ದೇವರೂ ಇದ್ದಾನೆ! ದೇವರನ್ನು ತಿಳಿದಿದ್ದೇವೆ ಎಂದು ಕೆಲವರು ಭಾವಿಸುತ್ತಾರೆ ಅಥವಾ ಹೇಳುತ್ತಾರೆ. ಆದರೆ, ಅವರು ತಿಳಿದಿರುವುದಿಲ್ಲ. ದೇವರನ್ನು ತಿಳಿದಿಲ್ಲವೆಂದು ಭಾವಿಸುತ್ತಾರೆ. ಅಂಥವರು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆಯಿಂದ ಪ್ರಯತ್ನಿಸುತ್ತಾರೆ. ತಿಳಿದು ನುಡಿಯುವುದು, ತಿಳಿದು ನಡೆಯುವುದು ವೈಜ್ಞಾನಿಕ ವಿಚಾರ. ಅಲ್ಲಿ ಸತ್ಯವನ್ನು ಕಂಡರಿಸುವ ಜಿಜ್ಞಾಸೆ ಇರುತ್ತದೆ. ತಿಳಿಯದೆ ನುಡಿಯುವುದಾಗಲಿ ತಿಳಿಯದೆ ನಡೆಯುವುದಾಗಲಿ, ವೈಜ್ಞಾನಿಕ ವಿಚಾರವಲ್ಲ, ಅಲ್ಲಿ ಧರ್ಮದೃಷ್ಟಿಯೂ ಇಲ್ಲ.

**"ನಡೆಯಲರಿಯದೆ ನುಡಿಯಲರಿಯದೆ**
**ಲಿಂಗವ ಪೂಜಿಸಿ ಫಲವೇನು ?"** **(ಬ. ವ. ೪೦೮)**

ಅರಿತು ನುಡಿಯುವಲ್ಲಿ ಅರಿತು ನಡೆಯುವಲ್ಲಿ ದೇವರಿದ್ದಾನೆ ಎಂಬ ಬಸವ ವಾಣಿ ಧರ್ಮವೂ ಅಹುದು, ವಿಜ್ಞಾನವೂ (ಅಥವಾ ವೈಚಾರಿಕ ಪ್ರಜ್ಞೆಯೂ) ಅಹುದು ! ಆದರೆ, ಅರಿತು ನುಡಿಯದೆ ನಡೆಯದೆ, ಬರಿ ಲಿಂಗ ಪೂಜೆ ಮಾಡಿದಲ್ಲಿ ಅಲ್ಲಿ ದೇವರಿಲ್ಲ, ಧರ್ಮವಿಲ್ಲ, ವೈಚಾರಿಕ ಮನೋಧರ್ಮವೂ ಇಲ್ಲ !!

# ೧೮.

# ಆಧುನಿಕ ವಚನಗಳಲ್ಲಿ ಯುಗ ಧ್ವನಿ

---

ಸಾಹಿತ್ಯ ಯಾವಾಗಲೂ ಜನಜೀವನಕ್ಕೆ ಸ್ಪಂದಿಸಿ ಕಾಲಧ್ವನಿಯಾಗಿ ಮೂಡಿ ಬರುವಂಥದು. ಒಂದೊಂದು ಕಾಲದ ರೀತಿ ರಿವಾಜು, ಸಂಪ್ರದಾಯ ಸಂಸ್ಕೃತಿ, ಆಚಾರ ವಿಚಾರ ಬೇರೆ ಬೇರೆಯಾಗಿರುತ್ತವೆ. ಕಾಲಕ್ಕೂ ಜನಜೀವನಕ್ಕೂ ಸಂಬಂಧವಿರುವಂತೆ, ಅಂದಂದಿನ ಕಾಲದ ಜನಜೀವನಕ್ಕೂ ಪರಿಸರಕ್ಕೂ ಸಂಬಂಧ ವಿರುತ್ತದೆ. ಬ್ರಿಟಿಷರಾಳಿಕೆ ಮುಗಿದು ಹೋಗಿದೆ. ಅವರ ವೇಷಭೂಷಣ, ಆಶೆ ಭಾಷೆ ಭಾರತೀಯರ ಇರುವಿಕೆಯಲ್ಲಿ ಇನ್ನೂ ಅಷ್ಟಿಷ್ಟು ಹಸಿರಾಗಿಯೆ ಉಳಿದು ಕೊಂಡಿವೆ. ಆದರಿಂದಾಗಿ ಭೂತಕಾಲದ ಪಡಿಯಚ್ಚು ವರ್ತಮಾನದ ಮೇಲೆ, ವರ್ತಮಾನದ ನೆರಳು ಭವಿಷತ್ತಿನ ಮೇಲೆ ಮೂಡುವುದು ಸ್ವಾಭಾವಿಕವಾದುದು. ಹೀಗಾಗಿ, ಭಾರತೀಯರ ಜೀವನ ವಿಧಾನಗಳಲ್ಲಿ ಬಹಳಷ್ಟು ಬದಲಾವಣೆ ಯಾದದ್ದು ಕಂಡು ಬರುತ್ತಿವೆ, ಅವರೀಗ ಶುದ್ಧ ಭಾರತೀಯರಾಗಿಯೂ ಉಳಿದಿಲ್ಲ, ಶುದ್ಧ ಪಾಶ್ಚಿಮಾತ್ಯರಾಗಿಯೂ ಉಳಿದಿಲ್ಲ. ಎಲ್ಲವೂ ವರ್ಣರಂಜಿತ, ಸಂಕೀರ್ಣಭರಿತ! ಪಾಶ್ಚಿಮಾತ್ಯರು ಭಾರತೀಯ ಧರ್ಮ ಸಂಸ್ಕೃತಿಯತ್ತ ವಾಲುತ್ತಿದ್ದರೆ, ಭಾರತೀಯರು ಪಶ್ಚಿಮ–ಸಂಸ್ಕೃತಿಯತ್ತ (ಹೊರಗಣ ರೀತಿ ರೀವಾಜುಗಳಲ್ಲಿ ಮಾತ್ರ)ವಾಲುತ್ತಿದ್ದಾರೆ. ಯಾರೂ ನಮ್ಮ ಧರ್ಮ ದೇವರನ್ನು ಬಿಟ್ಟಿಲ್ಲ, ಆದರೆ ಭಕ್ತಿಯ ಜಾಗದಲ್ಲಿ ಕುಯುಕ್ತಿ, ಡಂಭ, ಜಂಭ ವಿಜೃಂಭಿಸುತ್ತಿವೆ ! ಹೀಗಾಗಿ, ಸರ್ವಾರ್ಪಣ ಭಕ್ತಿ ಭಾವ ಅನನ್ಯ ಶರಣಾಗತಿ, (ಮಗು ತಾಯಿಗೆ ಒಪ್ಪಿಸಿಕೊಳ್ಳುವಂಥದು)—ಅಂತರಂಗ ಬಹಿರಂಗ ಶುದ್ಧಿ, ನಿಷ್ಕಪಟ ನಿರಾಳ ಗುಣ ನಡೆಯಲ್ಲಿ ನುಡಿಯಲ್ಲಿ ಏಕತಾನ –ಮೊದಲಾದ ಭಾರತೀಯ ಸಂಸ್ಕೃತಿ ಇಂದಿನ ಬಹಳಷ್ಟು ಜನರಲ್ಲಿ ಬಹುಪಾಲು ಲೋಪ ವಾಗುತ್ತಲಿದೆ. ಶಿಸ್ತು, ಕರ್ತವ್ಯ ದಕ್ಷತೆ, ಸಮಯನಿಷ್ಠೆ, ವೈಚಾರಿಕ ದೃಷ್ಟಿ, ವೈಜ್ಞಾನಿಕ ಮನೋಧರ್ಮ ಮುಂತಾದ ಪಾಶ್ಚಿಮಾತ್ಯ ಸಂಸ್ಕೃತಿಯೂ ಕೃಶವಾಗುತ್ತಲಿದೆ. ಹೊರಗಿನಿಂದ ಬೇಡವಾದುದು ಬಂದಿದೆ, ಬೇಕಾದುದು ಬಂದಿಲ್ಲ. ಈ ರೀತಿ ಭಾರತೀಯರು ಎರಡರಲ್ಲಿಯೂ ಚೊಕ್ಕ ಚಿನ್ನವಾಗಿಲ್ಲ, ಗಿನಿಗೋಲ್ಡ್. ಹೀಗಿದೆ ಆಧುನಿಕ ಜನಜೀವನ.

ಈ ಜನಜೀವನಕ್ಕೆ ಸ್ಪಂದಿಸಿ ಬಂದುದು ಆಧುನಿಕ ಸಾಹಿತ್ಯ. ಸಾಹಿತ್ಯದಲ್ಲಿ ಒಂದು ಪ್ರಕಾರವಾದುದು ವಚನ ಸಾಹಿತ್ಯ. ಇದ್ದುದನ್ನು ರಸವತ್ತಾಗಿ ಕಲಾತ್ಮಕವಾಗಿ

ಸೆರೆಹಿಡಿಯುತ್ತದೆ ಸಾಹಿತ್ಯ. ಇದ್ದುದನ್ನು ರಸವತ್ತಾಗಿ ಚಿತ್ರಿಸಿದರೂ ಉದಾತ್ತತೆಯ (ಅಧ್ಯಾತ್ಮದ)ಶಿಖರಕ್ಕೇರುತ್ತದೆ ವಚನ! ಕಾವ್ಯ ಅನುಭವವನ್ನಾಗಿ ರಸಾನುಭವ ವನ್ನಾಗಿ ಪವಾಡಗೊಳಿಸಿದರೆ, ವಚನ ಅನುಭವವನ್ನು ಅನುಭಾವವನ್ನಾಗಿ ಪ್ರಸಾದ ಗೊಳಿಸುತ್ತದೆ. ವಚನೇತರ ಸಾಹಿತ್ಯದ ಗಮನ ಇರವಿನತ್ತ. ವಚನದ ಗಮನ ಅರಿವಿನತ್ತ !

ಇಂದಿನ ಜನಜೀವನ ಕುರಿತ ಯುಗಧ್ವನಿಯು ಆಧುನಿಕ ವಚನಗಳಲ್ಲಿ ಎಷ್ಟರ ಮಟ್ಟಿಗೆ ಮೂಡಿಬಂದಿದೆ ಎಂಬುದನ್ನು ಪರಿಶೀಲಿಸುವುದು, ವಿಶ್ಲೇಷಿಸಿ ವಿಮರ್ಶಿಸು ವುದು ಈ ಲೇಖನದ ಉದ್ದೇಶವಾಗಿದೆ. ಆಧುನಿಕ ವಚನಕಾರರಲ್ಲಿ ಸಣ್ಣವರೂ ಇದ್ದಾರೆ, ದೊಡ್ಡವರೂ ಇದ್ದಾರೆ. ಆದರೆ, ವಚನಕಾರ್ತಿಯರು ತೀರ ವಿರಳವಾಗಿ ದ್ದಾರೆ. ಅಂತೂ ವಚನಕಾರರ ಸಂಖ್ಯೆಯೇನು ಕಡಿಮೆಯಿಲ್ಲ. ಆದರೆ, ಎಲ್ಲರ ವಚನಗಳನ್ನು ಸಮಾವೇಶಗೊಳಿಸುವುದು ಸಾಧ್ಯವಾಗಿಲ್ಲ, ನನಗೆ ಲಭ್ಯವೂ ಆಗಿಲ್ಲ. ಇಲ್ಲಿ ಸಮಾವೇಶವಾಗದವರ ಕ್ಷಮೆ ಕೇಳಬಯಸುತ್ತೇನೆ.

**ಪಾಶ್ಚಿಮಾತ್ಯ ಸಂಸ್ಕೃತಿ ಪ್ರಭಾವ ಕುರಿತು ಈ ವಚನ :**

**"ತನ್ನನ್ನು ಅಪ್ಪನೆಂದರೆ ತಂದೆಗೆ ದುಃಖ**
**ಡ್ಯಾಡಿ ಎಂದರೆ ಸುಮ್ಮಾನ !**
**ತನ್ನನ್ನು ಅವ್ವನೆಂದರೆ ತಾಯಿಗೆ ದುಃಖ**
**ಮಮ್ಮಿ ಎಂದರೆ ಸುಮ್ಮಾನ !"**

(ಎಸ್. ವಿ. ಪರಮೇಶ್ವರ ಭಟ್ಟ –ಬಸವಪಥ, ಸಂಪುಟ ೧೬, ಸಂಚಿಕೆ ೧೨, ಪುಟ ೨೨)

ಇಂದಿನವರ ಮನೋಧರ್ಮ ಕುರಿತು ಎಸ್. ವಿ. ಪರಮೇಶ್ವರಭಟ್ಟ ಅವರು ದಿನನಿತ್ಯದ ದೃಷ್ಟಾಂತದ ಮೂಲಕ ಮಾರ್ಮಿಕವಾಗಿ ಹೇಳಿದ್ದಾರೆ. ಅಪ್ಪ–ಅವ್ವ ಪದಗಳಲ್ಲಿ ಆತ್ಮೀಯತೆ–ಗೌರವ ದೃಷ್ಟಿ ಕಂಡು ಬಂದರೆ, ಡ್ಯಾಡಿ, ಮಮ್ಮಿ , ಪದಗಳಲ್ಲ ಪರಕೀಯತೆ, ಪರಭಾಷೆ ಸಂಸ್ಕೃತಿಯ ಹುಚ್ಚು ಮೋಹ ಕಂಡು ಬರುತ್ತಿದೆ. ನಾವು ಸುಧಾರಿಸಿದವರು ಎಂದು ಹೇಳಿಕೊಳ್ಳುವ ಭ್ರಮೆಯೂ ಇಂಥ ಪದಪ್ರಯೋಗದಲ್ಲಿದೆ.

**"ರಾವಣನ ವೇಷದ ನಟ, ತನ್ನ ನಿಜದ ತಲೆಯನಾಡಿಸಿದಲ್ಲದೆ**
**ಉಳಿದ ಒಂಭತ್ತು ರಟ್ಟಿನ ತಲೆ ಆಡವಯ್ಯ.**
**ಕೆಲವು ಸಮಿತಿಯೊಳು ಕೆಲವು ಅಧ್ಯಕ್ಷರು –ಆ ರಾವಣನು**
**ನಟಿಸುವ ಪಾತ್ರದ ತಲೆಯಂತೆ !**
**ಉಳಿದ ಸದಸ್ಯರು ಆ ಪಾತ್ರದ ರಟ್ಟಿನ ತಲೆಯಂತೆ**
**ಈ ಅಂತೆಗೇನೆಂಬೆ ಸದಾಶಿವ ಗುರು !"**

(ಎಸ್. ವಿ. ಪರಮೇಶ್ವರ ಭಟ್ಟ –ಬಸವಪಥ, ಸಂಪುಟ ೧೬, ಸಂಚಿಕೆ ೧೨, ಪುಟ ೨೧)

ಇಲ್ಲಿಯು ರೂಪಕ ಚಿತ್ರ ಶೈಲಿ ಮಾರ್ಮಿಕವಾಗಿದೆ. ಈ ವಿಡಂಬನೆ ಇಂದಿನ ಸಾಮಾಜಿಕ ರಾಜಕೀಯ ರಂಗಗಳಲ್ಲಿಯು ಅಪಹಾಸ್ಯಕಾರಕ ಘಟನೆಗಳನ್ನು ಚಿತ್ರಿಸುವ ಮೂಲಕ ಹಾಸ್ಯರಸೋತ್ಪತ್ತಿಗೆ ಕಾರಣವಾಗುತ್ತಿದೆ.

**ಶ್ರೀ ನಾ. ಚೆ. ಯವರ ಒಂದು ವಚನ :**

**"ದುಡಿಮೆ ಬೇಡ ದುಡ್ಡು ಬೇಕು, ಶ್ರಮ ಬೇಡ ಸುಖ ಬೇಕು,**
**ನಡೆ ಬೇಡ ನುಡಿ ಬೇಕು, ಭಕ್ತಿ ಬೇಡ ಮುಕ್ತಿ ಬೇಕು,**
**ಎನ್ನುವ ಈಗಿನ ಪೀಳಿಗೆಗೆ -ಶ್ರೀನಾರದ ಕ್ಷೇತ್ರಾಧಿಪಾ**
**ನೀ ಎಂಥ ಫಲ ನೀಡುವೆ !"**

(ಬಸವಪಥ, ಸಂಪುಟ ೧೦, ಸಂಚಿಕೆ ೧೧)

ದುಡಿಮೆ, ಶ್ರಮ, ನಡೆ, ಭಕ್ತಿ –ಇವು ಅಭ್ಯುದಯದತ್ತ ಕರೆದೊಯ್ಯುವ ಮೆಟ್ಟಿಲು. ಈ ಮೆಟ್ಟಿಲು ಏರಿ ಆಯಾಸ ಹೊಂದುವುದು ಇಂದಿನವರಿಗೆ ಬೇಡ. ಅನಾಯಾಸ ಸುಖವಾಸಿಗಳಿವರು. ಇಂಥ ಹೊಣೆಗೇಡಿ ಸೋಮಾರಿತನದಿಂದಾಗಿಯೆ ನಮ್ಮ ಜನಜೀವನದ ಗತಿ ಅಭದ್ರವಾಗಿದೆ. ಮನಸಿನ ದಾರಿದ್ರ್ಯ ದೂರವಾಗದೆ ದುಡ್ಡಿನ ದಾರಿದ್ರ್ಯ ದೂರವಾಗದು. ಇಲ್ಲಿ ಸರಳ ನುಡಿಯಲ್ಲಿಯೆ ಈ ವಚನದ ಇಂಗಿತಾರ್ಥ ಅಡಕವಾಗಿದೆ.

**"ಅಸ್ಪೃಶ್ಯ ನಿವಾರಣೆಯೆಂದು ಹೇಳುವಿರಿ;**
**ಹರಿಜನಕೆ ಪ್ರತ್ಯೇಕ ಕೇರಿಯ ರಚಿಸುವಿರಿ;**
**ಸಂಸ್ಕಾರ ನೀಡದೆ ಸಂಬಂಧ ಬೆಳೆಸದೆ**
**ಹರಿಜನನೋದ್ಧಾರವೆಂತು ಸಾಧ್ಯ ಹೇಳಾ"**

(ನಾ. ಚೆ. 'ಬಸವಪಥ' ಸಂಪುಟ ೧೦, ಸಂಚಿಕೆ ೧೧)

ಇಲ್ಲಿ ಪದ್ಯದ ಲಯಕ್ಕಿಂತ ಗದ್ಯದ ಛಾಯೆ ಹೆಚ್ಚು ಆದರೂ ಆಧುನಿಕ ಯುಗ ಧ್ವನಿಯ ಅಭಿವ್ಯಕ್ತಿಯಿಂದ ಈ ವಚನ ಯಶಸ್ವಿಯಾಗಿದೆ. ಇಂದಿನ ರಾಜಕೀಯ, ಸಾಮಾಜಿಕ ರಂಗಗಳಲ್ಲಿ ಸಮಾನತೆ ಬರಿ ಉದ್ಘೋಷವಾಗಿದೆ. ಮಾನವೀಯ ದೃಷ್ಟಿಗಿಂತ ಮಾತಿನ ಮರುಳು ಮಾಯೆ ಅಧಿಕವಾಗಿದೆ.

**ಮಹಾದೇವ ಬಣಕಾರ :**

**"ಸತ್ತವರ ಮಸ್ತಕದ ಮೇಲೆ ತನ್ನ ಪಾದವನಿರಿಸಿ,**
**ಹೆಣನ ಸ್ವರ್ಗಕ್ಕೆ ಕಳುಹಿಸುವ ಜಂಗಮನ ಜಾರತನ ನೋಡಿರೇ !**
**ಇದ್ದವರ ವಂಚಿಸಿ, ಸತ್ತವರ ಸುಖಿಸುವ**
**ಅವನ ಮಂತ್ರ ಪಠಣವ ಕೇಳಿರೇ !**
**ಸತ್ತ ದೇಹವದೆತ್ತಣ ಬಲ್ಲುದಯ್ಯ ಮಂತ್ರದ ಕುತಂತ್ರವ"**

(ವ. ೮೩)

ಜಂಗಮಪದ ಶಿಷ್ಟವಾದುದು, ವಿಶಿಷ್ಟವಾದುದು. ಸಕಲ ಜೀವಾತ್ಮರ ಲೇಸ ಬಯಸುವ ವಿಶಾಲ ಮನಸ್ಸುಳ್ಳವನೇ ಜಂಗಮ. ಅನುಭಾವದಲ್ಲಿ ನಿಷ್ಪತ್ತಿ ಸಾಧಿಸಿದವನೆ ಜಂಗಮ. 'ಜಂಗಮ' ವೆಂದು ಜನರನ್ನು ವಂಚಿಸುವ ಜಾತಿವಾಚಕ ವ್ಯಕ್ತಿಯಾಗಿದ್ದಾನೆ. ಜ್ಞಾನದ ಬಲದಿಂದ ಜನರ ಅಜ್ಞಾನ ಕಳೆಯುವ ಅನುಭಾವಿ ಜಂಗಮ ಸ್ವಾರ್ಥಕ್ಕಿಳಿದು ಲಘುವಾಗಿರುವುದು ಜಿಗುಪ್ಸೆಗೆ ಕಾರಣವಾಗಿದೆ. ಇಲ್ಲಿಯ ವಿಡಂಬನೆ ಸಾರ್ಥಕವಾಗಿದೆ.

**"ಕಾಯ ವಿಕಾರಕ್ಕೆ ಕಾವಿಯ ಮರೆ ಮಾಡಿದರು,**
**ಮನದ ಮಲಿನವ ಮರೆಮಾಡಿ ವಚನ ಪಠಿಸುವರು,**
**ಮೋಹ ಮುಸುಕಿದ ಕಾರಣ ಕಾವಿ ಬಯಲಾಯಿತ್ತು**
**ಆಚಾರವಿಲ್ಲದ ಕಾರಣ ವಚನ ಹುಸಿಯಾಯಿತ್ತು !"**

(ಬಣಕಾರ ವ. ೯೨)

ಕಾವಿಧಾರಣ ವಿರಕ್ತಿಯ ಲಾಂಛನವಲ್ಲದೆ, ವಿರಕ್ತ ಸ್ಥಾನವಲ್ಲ. ವಚನವೇ ತಾನಾಗಿ(ಸಚ್ಚರಿತನಾಗಿ)ಪರಿಣಮಿಸದೆ, ಬರಿ ವಚನ ಪಠಣದಿಂದೇನು ಪ್ರಯೋಜನ ? ಕಾವಿ ಧರಿಸಿ ಕಾಯವಿಕಾರಕ್ಕೆ ಒಳಗಾದರೆ, ಕಾವಿಯ ಪೂಜ್ಯತ್ವ ಪೂಜಿಯಾಗುವುದುಂಟು. ಮೇಲೆ ಕಾವಿ, ಒಳಗೆ ಮೋಹ. ಹಸನಿಲ್ಲದ ಆಚಾರದಿಂದ ವಚನ ಹುಸಿಯಾಗದಿದ್ದೀತೆ ? ಬಣಕಾರ ಅವರ ವಚನ ಭಾಷೆ ಸುಲಲಿತ ನಿರರ್ಗಳ. ಪರಿಣಾಮದಲ್ಲಿ ಕೃತಾರ್ಥ !

**"ಸ್ವತಂತ್ರಧೀರ ಸಿದ್ಧೇಶ್ವರಾ,**
**ಹೋಮರನಂಥ ವಿಶ್ವಕವಿಗಳು ಭಿಕ್ಷೆ ಬೇಡಬೇಕು.**
**ಹೆಂಡ ಮಾರುವವರು ಲಕ್ಷಾಧೀಶರಾಗಬೇಕು.**
**ಇದೇ ನಿನ್ನ ಸಾಮಾಜಿಕ ನ್ಯಾಯವೇನಯ್ಯಾ ?**
**ದುಡಿದವರಿಗೆ ದುಗ್ಗಾಣಿ, ದುಡಿಸಿಕೊಳ್ವರಿಗೆ ಅಷ್ಟೈಶ್ವರ್ಯ !**
**ಇದುವೆ ನಿನ್ನ ಆರ್ಥಿಕ ವ್ಯವಸ್ಥೆಯೇನಯ್ಯಾ ?"**

(ಸಿದ್ಧಯ್ಯ ಪುರಾಣಿಕ –'ವಚನೋದ್ಯಾನ' ವಚನ ೩೨೭)

ಹೋಮರನಂಥ ಮಹಾಕವಿಗಳು ಮಾನವಕುಲಕ್ಕೆ ಬದುಕುವ ಕಲೆಯನ್ನು ಕಲಿಸಿದಂಥ ಮಹಾನುಭಾವರು. ಆದರೆ, ಅಂಥವರಿಗೆ ಸಮಾಜ ಕಲಿಸಿದ ಅವಸ್ಥೆ ಭಿಕ್ಷಾವಸ್ಥೆ ! ಹೆಂಡ ಮಾರುವವರು ಲಕ್ಷಾಧೀಶರಾದದ್ದು ನೂರಕ್ಕೆ ನೂರು ಸತ್ಯ. ಇವರು ಜನತೆಯ ಶಾರೀರಿಕ – ಮಾನಸಿಕ ಆರೋಗ್ಯವನ್ನು ಹಾಳುಗೆಡಿಸಿದವರು. ಶ್ರಮಜೀವಿಗಳಿಂದು ಕಷ್ಟಪಟ್ಟು ದುಡಿದು, ದೇಶದ ಹಾಗೂ ಶ್ರೀಮಂತರ ಐಶ್ವರ್ಯವನ್ನು ಬೆಳೆಸುವವರು. ಅಂಥವರಿಂದು ಅರೆ ಹೊಟ್ಟೆಯಿಂದ ಬರಿ ಮೈಯಿಂದ

ಕೊರಗುತ್ತಿರುವುದು ಮಾನವ ಕುಲಕ್ಕೆ ಕಲಂಕ ತರುವಂಥದು. ಯಾರಿಂದಲೂ ಈ ಏರು–ಪೇರು ಸರಿಗೊಳ್ಳದ ಕಾರಣ, ಪುರಾಣಿಕರವರು 'ಇದುವೇ ನಿನ್ನ ನ್ಯಾಯ ನೀತಿ ಯೇನಯ್ಯಾ' ಎಂದು ದೇವರನ್ನೇ ಪ್ರಶ್ನಿಸಿರುವಲ್ಲಿ– ಇಂದಿನ ಸರಕಾರದ ಕರ್ತವ್ಯ ದಕ್ಷತೆಯಲ್ಲಿಯ ಲೋಪದಿಂದಾಗಿ, ಅವರಿಗಾದ ವ್ಯಥೆಯ ಕಥೆಯಿದೆ !

**"ಗತಕಾಲವೆ, ನಿನ್ನನ್ನು ಪ್ರೀತಿಸಬಲ್ಲೆ, ಪೂಜಿಸಲಾರೆ ನಾನು,**
**ವರ್ತಮಾನವೆ, ನಿನ್ನನ್ನು ಆದರಿಸಬಲ್ಲೆ, ಅರ್ಚಿಸಲಾರೆ ನಾನು**
**ಭವಿಷ್ಯತ್ತೆ, ನಿನ್ನನ್ನು ಸ್ವಾಗತಿಸಿಬಲ್ಲೆ, ಸಮಾರಾಧಿಸಲಾರೆ ನಾನು**
**ಕಾಲವೆ, ನಿನ್ನ ಕೇಳಬೇಕು, ಆಳಿಕೆ ಬೇಡ ನನಗೆ !**
**ನಿನ್ನ ಪ್ರವಾಹ ಕೊಂಡೊಯ್ದತ್ತ ತೇಲಲು ಸತ್ತ ಮೀನೇನಲ್ಲ ನಾನು**
**ಪುರಂದರೋಪದೇಶ ಪ್ರಭಾವದಿಂದ ಈಸುವೆ, ಇದ್ದು ಜೈಸುವೆ !"**

(ಸಿದ್ಧಯ್ಯ ಪುರಾಣಿಕ –'ವಚನೋದ್ಯಾನ' ವಚನ ೪೮೧)

ಕಾಲದಗುಂಟ ನಮ್ಮ ಪ್ರಪಂಚ ನಡೆಯುತ್ತದೆ. ಕಾಲದ ಪ್ರಭಾವದಿಂದ ಮನುಷ್ಯ (ಜೀವಕುಲವೂ) ತಪ್ಪಿಸಿಕೊಳ್ಳಲಾರ. ಭೂತಕಾಲದ ಸಿಹಿಕಹಿ ಹಾಗು ಭವಿಷ್ಯತ್ತಿನ ಕನಸು ಮನುಷ್ಯನನ್ನು ಭ್ರಮೆಗೊಳಿಸುತ್ತವೆ. ಆದರೆ ನಾವು ಬದುಕುತ್ತಿ ರುವ ವರ್ತಮಾನವೇ ನಮಗೆ ಮುಖ್ಯ. ಹಿಂದಿನ ವೈಭವವನ್ನು ನೆನೆಸಿಕೊಳ್ಳುವುದಕ್ಕಿಂತ ಅದರಿಂದ ನಾವಿಂದು ಪಾಠ ಕಲಿಯುವುದು ಲೇಸು. ಯಾವ ಕಾಲ ಹೇಗೆಯೆ ಇರಲಿ, ಅದನ್ನು ಮನ್ನಿಸಬೇಕು; ಸಿಹಿಕಹಿಗಳನ್ನು ಅಪ್ಯಾಯನ ಮಾಡಿಕೊಳ್ಳಬೇಕು. ಆದರೆ ಯಾವ ಕಾಲದ ಆಳಾಗಿ ನಮ್ಮ ವ್ಯಕ್ತಿತ್ವವನ್ನು ಹಾಗು ನಮ್ಮ ನೀತಿ ಸಂಸ್ಕೃತಿ ಕಳೆದುಕೊಳ್ಳಬಾರದು.

ಕಾಲದ ಪ್ರವಾಹದ ಗುಂಟ ತೇಲಿ ಹೋಗಲು ನಾನು ಸತ್ತ ಮೀನವೇನು? ಅಲ್ಲವೆಂದು, ಪುರಾಣಿಕ ಅವರು ತಮ್ಮ ಧ್ಯೇಯೋದಾತ್ತವನ್ನು ಕಾಯ್ದುಕೊಳ್ಳುವುದಾಗಿ ಸಾರಿದ್ದಾರೆ. ಅವರ ಆಶಯದಂತೆ ಈಸಬೇಕು, ಇದ್ದು ಜೈಸಬೇಕು – ಎಂಬ ಪಲ್ಲವಿ ಮಾನವ ಜೀವನ ಸೂತ್ರವಾಗಬೇಕು. ಈ ವಚನದ ಭಾವ ಆಳವಾದುದಲ್ಲದೆ, ಬದುಕಿಗೆ ದಾರಿಯಾಗಿದೆ !

**"ಗಾಣೆಯ ಸುತ್ತಲೂ ತಿರುಗುವ ಕೋಣಗಳೇನು**
**ಬಲ್ಲವಯ್ಯ ಸಾಹಿತ್ಯ ಸಂಸ್ಕೃತಿಯ ?**
**ಹಸುಳೆಯ ಹಾಲಿನಲಿ ವಿಷವ ಬೆರೆಸುವ**
**ವಣಿಜರೇನು ಬಲ್ಲರಯ್ಯ ದಯಾಧರ್ಮವ**
**ಕಾಸಿನ ಚಕ್ರದಲಿ ಮುಳುಗೇಳುತಿಹ ಹಣ-ಹದ್ದುಗಳೇನು**
**ಬಲ್ಲವಯ್ಯ ಮಾನವತೆಯ ಶ್ರೀಗುರು ಸಿದ್ಧಲಿಂಗೇಶ್ವರಾ ?"**

(ಅನ್ನದಾನಯ್ಯ ಪುರಾಣಿಕ 'ಬಸವಪಥ')

ಇರುವಿಕೆಯಲ್ಲಿ, ವ್ಯವಹಾರದಲ್ಲಿ, ಸಾಮಾಜಿಕ, ರಾಜಕೀಯ ರಂಗಗಳಲ್ಲಿ– ರೀತಿ–ನೀತಿ. ಸಂಸ್ಕೃತಿ, ಪ್ರಾಮಾಣಿಕತೆಯಿಂದ ನಡೆದುಕೊಳ್ಳುವ ಕಾಲ ಒಂದಿತ್ತು. ಆದರೆ, ಆ ಕಾಲವೀಗ ಬದಲಾಗಿದೆ. ಕಾಲ ಜನರನ್ನು ಕೆಡಿಸಿರುವುದೊ, ಅಥವಾ ಜನರ ಕಾಲದ ಹೆಸರನ್ನು ಕೆಡಿಸಿರುವರೊ ? ಪ್ರಶ್ನಿಸಬಹುದಾದರೂ ಜನರಲ್ಲಿ ಇಂದು ಸ್ವಾರ್ಥ, ಲೋಭ. ತಮ್ಮ ದುರಾಶೆ ಫಲಕಾರಿಯಾಗುವತ್ತ ವಾಲುವಿಕೆ ಬೆಳೆದುದೇನು ಹುಸಿಯಲ್ಲ. ಪುರಾತನ ಕಾಲದಲ್ಲಿ ಇಂಥದೇನು ಇರಲಿಲ್ಲವೆಂದಲ್ಲ. ಒಟ್ಟಂದವ ಒಳಿತನ್ನು ತುಳಿದು ಹಾಕಿ ಸ್ವಾರ್ಥ ಭ್ರಷ್ಟತನವೆ ನಿರಂಕುಶವಾಗಿ ಮೆರೆಯುವಷ್ಟು ಮೀರಿ ನಿಂತಿರಲಿಲ್ಲ ! ಹೀಗಾಗಿ ಇಂದು ಪ್ರೀತಿ, ಮಮತೆ, ವಿಶ್ವಾಸ –ಮೊದಲಾದ ಮಾನವೀಯ ಮೌಲ್ಯಗಳು ಶಬ್ದಕೋಶದ ಪದಗಳಾಗಿಬಿಟ್ಟಿವೆ. ಆದರೆ ಮಾನವ ಜೀವನದ ಸಂಪುಟದಲ್ಲಿ ಮುದ್ರಿತವಾಗಿಲ್ಲ ಅಥವಾ ಉಲ್ಲೇಖವಾಗಿಲ್ಲ. ಈ ವಚನ ಈ ಕಾಲದ ಯುಗಧ್ವನಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದೆ.

**“ವೇಶಿಯು ಮಾಂಗಲ್ಯ ಧರಿಸಿ ಗರತಿಯಾದಂತೆ**
**ಕಾಮಿ ಕಾವಿಯ ಧರಿಸಿ ಸ್ವಾಮಿಯಾದಂತೆ**
**ಭವಿಗಳು ಭಕ್ತರ ವೇಷ ಧರಿಸಿ ಮೆರೆಯುವುದು**
**ಮೊಹರಮ್ಮನ ಹುಲಿಗಳಂತಯ್ಯ !”**

— ಕುಮಾರಕಕ್ಕಯ್ಯ

ಗರತಿಗೆ ಮಾಂಗಲ್ಯ, ಸ್ವಾಮಿಗೆ ಕಾವಿ, ಭಕ್ತರಿಗೆ ವಿಭೂತಿ ರುದ್ರಾಕ್ಷಿ –ಇವು ಹೊರ ಲಾಂಛನಗಳು ಹೊರತಾಗಿ, ಇವುಗಳ ಧಾರಣದಿಂದ ವೇಶಿ ಗರತಿಯಾಗುವುದಿಲ್ಲ, ಕಾಮುಕ ಸ್ವಾಮಿಯಾಗುವುದಿಲ್ಲ, ಭವಿ (ನೀತಿಬಾಹಿರ) ಭಕ್ತನಾಗುವುದಿಲ್ಲ. ಲಾಂಛನವಿರಲಿ ಬಿಡಲಿ, ಸದ್ಗುಣ ಶೀಲವೆ ಆಯಾ ವ್ಯಕ್ತಿಗಳ ವಿಶಿಷ್ಟ ವ್ಯಕ್ತಿತ್ವದ ಗೌರವವನ್ನು ಹೆಚ್ಚಿಸುವ ಪ್ರಮಾಣವಾಗಿದೆ. ಕುಮಾರ ಕಕ್ಕಯ್ಯನವರ ವಚನ ಭಾಷೆ – ಸರಳ, ವಿಡಂಬನೆ – ಹರಿತ, ಪರಿಣಾಮ – ಗಾಢ !

ಇವರು ಈಗಾಗಲೆ ವಚನ ಸಂಕಲನವನ್ನೂ ಪ್ರಕಟಿಸಿ, ಆಧುನಿಕ ವಚನಕಾರರಲ್ಲಿ ಒಬ್ಬರಾಗಿದ್ದಾರೆ. ಸಾಮಾಜಿಕ, ರಾಜಕೀಯ, ಧಾರ್ಮಿಕ ರಂಗಗಳ ತಪ್ಪು ಹೆಜ್ಜೆಗಳನ್ನೂ ಎತ್ತಿತೋರಿಸುವ ಕಟ್ಟು ವಿಮರ್ಶಕರಿವರು.

**“ಚುನಾವಣೆಯ ಮದುವೆಯಲಿ ಮತದಾರ ಮದುಮಗನಾದರೆ,**
**ಉಮೇದುವಾರನೆ ಮದುಮಗಳು,**
**ಶಾಸಕ ಸಚಿವರು ಅತ್ತೆ–ಮಾವರಾದರೆ,**
**ರಾಜಕಾರಣಿಗಳು ಅಡ್ಡ ನಿಬ್ಬಣಿಗರು**
**ಮತದಾನವೆಂಬ ತಾಳಿ ಕಟ್ಟುವವರೆಗೆ**
**ಹಳೆನಾಯಿಗಳಿಗೂ ಬೇಡವೆಂದ ಕುಮಾರಕಕ್ಕಯ್ಯ !”**

ಪ್ರತಿಮೆಯ ಮುಖದಲ್ಲಿ ಅಭಿವ್ಯಕ್ತವಾದ ಈ ವಚನ ಪರಿಣಾಮದಲ್ಲಿ ಶಕ್ತಿಶಾಲಿಯಾಗಿದೆ. ವಿಡಂಬನೆಯೆ ಇದರ ಜೀವ ಜೀವಾಳ ! ಇಂದಿನ ರಾಜಕೀಯ ಹಳೆಯ ಚಾಯಿಗೂ ಕನಿಷ್ಠವೆನ್ನುವುದು ಬಿರುನುಡಿಯಾದರೂ, ಸರಿ ನುಡಿಯಾಗಿದೆ.

**"ಯೌವನವು ಇದ್ದಾಗ ಯೋಚಿಸದ ಯುವತಿ-ಯುವಕ**
**ಅಧಿಕಾರವಿದ್ದಾಗ ಉಪಕಾರ ಮಾಡದಿಹ ಅಧಿಕಾರಿ**
**ಸಂಪತ್ತು ಇದ್ದಾಗ ಸತ್ಕಾರ್ಯಕ್ಕೆ ನೀಡದ ಧನಿಕ**
**ಪ್ರಜೆಗಳಾಶೋತ್ತರ ಪ್ರತಿನಿಧಿಸದಿಹ ಶಾಸಕ**
**ಪ್ರಜಾಕಲ್ಯಾಣ ಶಾಸನವ ಕ್ರಿಯೆಗೆ ತಾರದ ಸಚಿವ,**
**ಹಕ್ಕು ಬಾಧ್ಯತೆಯ ಬಳಸಲಾರದ ನಾಗರಿಕ**
**ಸಮಾಜ-ಸರಕಾರದ ಕಾಮಕ್ರೋಧಾದಿ ಷಡ್ವೈರಿಗಳು"**

ಇದು ಶ್ರೀ ಬಿ. ಶೇಖರಪ್ಪ ಹೂಲಿಗೇರಿ ಇವರು ರಚಿಸಿದ 'ಅನುಗ್ರಹ' ವಚನ ಸಂಕಲನದಲ್ಲಿಯ ವಚನ.

ಒಂದು ರಾಷ್ಟ್ರದ ಪ್ರಪಂಚ ಸುಗಮವಾಗಿ ಸುಭದ್ರವಾಗಿ ನಡೆಯುವಲ್ಲಿ— ಎಲ್ಲ ಕಾರ್ಯಕ್ಷೇತ್ರಗಳೂ ಅಗತ್ಯ. ಅವುಗಳನ್ನು ನಿರ್ವಹಿಸಬಲ್ಲ ಪ್ರಾಮಾಣಿಕ ವ್ಯಕ್ತಿಗಳೂ ಅಗತ್ಯ. ಎಲ್ಲರೂ ಮೊದಲು ಸಾಮಾನ್ಯ ಪ್ರಜೆಗಳೆ. ಒಂದೊಂದು ಕ್ಷೇತ್ರದ ಹೊಣೆ ಹೊತ್ತ ಮೇಲೆ, ಒಬ್ಬ ಶಾಸಕನಾಗಬಹುದು. ಸಚಿವನಾಗಬಹುದು, ಅಧಿಕಾರಿಯಾಗ ಬಹುದು. ಈ ಯಾವ ಕ್ಷೇತ್ರವೂ ಮಿಗಿಲಲ್ಲ. ಗೌಣವಲ್ಲ. ಹೊಣೆ ಹೊತ್ತವರಾರೂ ಶ್ರೇಷ್ಠವಲ್ಲ ಕನಿಷ್ಠವಲ್ಲ. ತಮ್ಮ ತಮ್ಮ ಪಾತ್ರವರಿತು ನಡೆದರೆ ಮಾತ್ರ ರಾಷ್ಟ್ರದ ಏಳಿಗೆ, ನಡೆಯದಿದ್ದರೆ ಅಧೋಗತಿ. ಆ ಪಟ್ಟಕ್ಕೇರಿಸುವ ಪ್ರಜೆಗಳಲ್ಲಿ ಒಂದು ನೈಪುಣ್ಯ ಅಗತ್ಯ. ಇವರಲ್ಲಿ ಯಾರಾದರೂ ಒಬ್ಬರು ಅಥವಾ ಸಕಲರು ಹೊಣೆಗೇಡಿತನದಿಂದ ವರ್ತಿಸಿದರೆ, ರಾಷ್ಟ್ರಕ್ಕೆ ಇವರು ಷಡ್ವೈರಿಗಳು— ಎಂದು ಹೂಲಿಗೇರಿ ಅವರು ಹೇಳಿದ್ದು ಮಾರ್ಮಿಕವಾಗಿದೆ. ಸರಳ ಭಾಷೆ, ನಿರರ್ಗಳ ನಿರೂಪಣೆಗಳಿಂದ ಇವರ ವಚನಗಳು ಮಾರ್ಮಿಕವಾಗಿವೆ.

**"ಹೌದಪ್ಪನ ಚಾವಡಿಯಲ್ಲಿ ಹೌದಪ್ಪಗಳು,**
**ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪಗಳು ಅಧಿಕವಯ್ಯ !**
**ಬಲ್ಲಪ್ಪಗಳ ಅಲ್ಲದಾಟದ ಚಲ್ಲಾಟದಲ್ಲಿ ಹಲ್ಲು ಕಿರಿದು**
**ಜೊಲ್ಲು ಸುರಿಸುತ್ತ ಬದುಕುವ ಸಮಯ ಸಾಧಕರ ಹಿಡಿತಂದು**
**ಗಲ್ಲಕ್ಕೆ ಗುಲ್ಲು ಒತ್ತಬೇಕೆಂದನಂಬಿಗರ ಕುಮಾರ ಚೌಡಯ್ಯ !"**

('ಬಸವ ಬೆಳಗು' ಸಂಪುಟ ೯, ಸಂ. ೧ – ಎಂ. ಬಿ. ಹಾ.)

ಶ್ರೀ ಎಂ. ಬಿ. ಹಾದಿಮನಿಯವರು ಆಧುನಿಕ ವಚನಕಾರರಲ್ಲಿ ಒಬ್ಬರು. ಎಲ್ಲಿ ಲಾಭವೊ ಅಲ್ಲಿ ಮುಖ ತಿರುಗಿಸುವುದು, ಪಕ್ಷಾಂತರ, ಮತಾಂತರ ನಿಲುವು ಒಲವುಗಳ

ಪಲ್ಲಟ –ಇವು ಇಂದಿನ ಸಾಮಾನ್ಯ ಧೋರಣೆಯಾಗಿವೆ. 'ಆಚೆ ಮನಿ ಪವ್, ಈಚೆ ಮನಿ ಪವ್' –ಹೀಗೆ ಅರಿವಿಲ್ಲದ ಮಕ್ಕಳ ಆಟವನ್ನು ಅರಿತವರೂ ಆಡುತ್ತಿರುವುದು ತಮಾಷೆಯಾಗಿದೆ. ಇಲ್ಲಿಯ 'ಬಲ್ಲಪ್ಪಗಳು' 'ಅಲ್ಲಪ್ಪಗಳು' 'ಅಲ್ಲದಾಟ' ಮೊದಲಾದ ದೇಸಿ ಶಬ್ದಗಳ ಸೊಗಡನ್ನು, ಆ ಮೂಲಕ ಹೊರಹೊಮ್ಮುವ ಅರ್ಥವಂತಿಕೆಯನ್ನು ಗಮನಿಸಬೇಕು.

ಆಧುನಿಕ ವಚನಕಾರರಲ್ಲಿ ಶ್ರೀ ಎಸ್. ವಿ. ರಂಗಣ್ಣ ಅವರು ಖ್ಯಾತಿ ಪಡೆದ ವಚನಕಾರರು 'ರಂಗ ಭಿನ್ನಪ' ಅವರ ಸಂಕಲನ.

**"ಬ್ರಾಹ್ಮಣ ಮಾಡುವುದೆಲ್ಲ ಆಚಾರವಲ್ಲ,**
**ಜಂಗಮ ಹಾಡುವುದೆಲ್ಲ ಶೀಲವಲ್ಲ,**
**ಕವಿ ತೋರುವುದೆಲ್ಲ ಸಮರ್ಥಕವಲ್ಲ,**
**ಸಚಿವ ಸಾರುವುದೆಲ್ಲ ಒಪ್ಪತಕ್ಕದ್ದಲ್ಲ,**
**ಎಚ್ಚರಿಕೆ ಪರಿಶೀಲನೆ ಎರಡೂ ಅಗತ್ಯ ರಂಗಯ್ಯ?"**

(ರಂಗಬಿನ್ನಪ್ಪ ವ. ೭೨೫)

ಬ್ರಾಹ್ಮಣ, (ಬ್ರಹ್ಮಜ್ಞಾನ ಪಡೆದವ) ಜಂಗಮ (ಮಹಾಜ್ಞಾನಿ), ಕವಿ, ಸಚಿವ–ಇವರಿಂದ ಆಚಾರವನ್ನು, ಶೀಲವನ್ನು ಮಾರ್ಗದರ್ಶನವನ್ನು, ಕ್ಷೇಮವನ್ನು ಅಪೇಕ್ಷಿಸುವುದು ತಪ್ಪೇನಲ್ಲ. ಇಂಥವರ ನಡೆನುಡಿಯನ್ನು ಕಣ್ಣು ನಂಬುವುದು ಸಲ್ಲದು. ಏಕೆಂದರೆ, ಶಿಲೆಯೆಲ್ಲ ಶಿಲ್ಪವಾಗುವುದಿಲ್ಲ, ಕಲ್ಲೆಲ್ಲ ಮೂರ್ತಿಯಾಗುವುದಿಲ್ಲ. ಜಾತಿ ಕಲ್ಲನ್ನು ಕಂಡುಹಿಡಿಯಬಲ್ಲ ಶಿಲ್ಪಿಗಿರುವಂಥ ನೈಪುಣ್ಯ ಅಥವಾ ವಿಮರ್ಶಾ ಬುದ್ಧಿ ಮನುಷ್ಯನಿಗೆ ಬೇಕು. ಮನುಷ್ಯ ಬುದ್ಧಿಜೀವಿಯಾಗಿದ್ದು, ಯಾರು ಗುಣವಂತರು, ಗುಣಹೀನರು, ಯಾರು ಆಚಾರವಂತರು, ಆಚಾರಹೀನರು, ಯಾರ ಮಾತು ಸ್ವೀಕಾರಯೋಗ್ಯ, ಯಾರದು ಸ್ವೀಕಾರಯೋಗ್ಯವಲ್ಲ –ಇದರ ಪರಾಮರ್ಶೆ ಮಾಡಿ ತೀರ್ಮಾನಿಸಿದರೆ ಮಾತ್ರ, ಮನುಷ್ಯ ಬುದ್ಧಿಜೀವಿಯಾಗಿ ಹುಟ್ಟಿದ್ದು ಸಾರ್ಥಕ. ಬುದ್ಧಿಯ ಮಾರಿಕೊಂಡು ಬುದ್ಧಿಗೇಡಿಯಾಗಿ ವರ್ತಿಸಿದರೆ, ಅವನಿಗೂ ಕೇಡು ಹಾಗು ಸಮಾಜ ದೇಶ ಮೊದಲಾದ ಕ್ಷೇತ್ರಗಳಿಗೂ ಕೇಡು. ವಚನಕಾರರು ಜನತೆಯಲ್ಲಿ ಆತ್ಮವಿಮರ್ಶೆಯ ಅಗತ್ಯವನ್ನಿಲ್ಲಿ ತಿಳಿಸಿದ್ದಾರೆ.

**"ರಾಜಕಾರಣದಲ್ಲಿ ಒಂದುಂಟು ಒಂದಿಲ್ಲ**
**ಮಾತು ಉಂಟು ಜ್ಯೋತಿ ಇಲ್ಲ**
**ಎದೆಯುಂಟು ಹೃದಯವಿಲ್ಲ**
**ದಾನವುಂಟು ಧರ್ಮವಿಲ್ಲ, ಸ್ವಯವುಂಟು ದಯವಿಲ್ಲ,**
**ಗುರಿಯುಂಟು ಗುರುವಿಲ್ಲ, ಚಲನವುಂಟು ಚಾರಿತ್ರ್ಯವಿಲ್ಲ !**
**ಆಚರಣೆಗಳುಂಟು ಆಚಾರವಿಲ್ಲ,**

**ತಂತ್ರಗಳುಂಟು ಸ್ವಾತಂತ್ರ್ಯವಿಲ್ಲ,**
**ಪ್ರತಿಷ್ಠೆಯುಂಟು ನಿಷ್ಠೆಯಿಲ್ಲ, ಪ್ರಮಾಣವುಂಟು ಪರಿಣಾಮವಿಲ್ಲ!**
**ಇಂತಪ್ಪ ಹತ್ತು ಹೆಡೆಯ ಹಾವ ಮೆಟ್ಟಿ**
**ಮೇಲೆದ್ದ ನಿನ್ನ ಕಲ್ಯಾಣ ರಾಜ್ಯದ**
**ಅಕಾಲ ಮೃತ್ಯುವಿಗೆ ಇದೆ ರಾಜಕಾರಣ!"**

(ಬಿ. ಆರ್. ಪೋಲೀಸಪಾಟೀಲ–ಪ್ರಕಟವಾಗಲಿರುವ ಕೃತಿಯಿಂದ)

ಸಮಾಜವಾದ, ಪ್ರಜಾವಾದ ಮೊದಲಾದವು ವಾದ ವಿವಾದದಲ್ಲಿ ಘಾಸಿಯಾದುವು ಹೊರತಾಗಿ ಸಾಧಿಸಬೇಕಾದ ಜನಕಲ್ಯಾಣವನ್ನು ಸಾಧಿಸದೆ ಹೋದುವು. ತಪ್ಪು ಈ ವಾದಗಳಲ್ಲ, ವಾದವನುಸುರಿಸುವ ಪಕ್ಷ ಮತ್ತು ಪ್ರಮುಖರಲ್ಲಿ ಇಮ್ಮುಖವುಂಟಲ್ಲದೆ ಒಮ್ಮುಖವಿಲ್ಲ, ಘೋಷಣೆಯುಂಟಲ್ಲದೆ ಆಚರಣೆಯಿಲ್ಲ!

ಬಸವಣ್ಣನ ಕಲ್ಯಾಣ ರಾಜ್ಯವಾಗಲಿ, ಗಾಂಧೀಜಿಯ ರಾಮರಾಜ್ಯವಾಗಲಿ ಸಕಲ ಜೀವಾತ್ಮರ ಲೇಸ ಬಯಸುವಂಥವು, ಅವು ಬರಿ ಕನಸಲ್ಲ, ನನಸುಗಳು! ಈ ನನಸನ್ನೂ ತಿರುಕನ ಕನಸನ್ನಾಗಿಸುವ ಕಿಡಿಗೇಡಿಗಳ ಸ್ವಾರ್ಥಬುದ್ಧಿಯಿಂದ ಕೊಡಬೇಕಾದ ಫಲವನ್ನು ಕೊಡಲಾರದೆ ವ್ಯರ್ಥವಾದರೆ, ಬಸವ–ಗಾಂಧೀಜಿಯವರ ಉದಾತ್ತ ತತ್ವಗಳ ತಪ್ಪಲ್ಲ! ಧರ್ಮದ ಹೆಸರಿನಲ್ಲಿ ಅಧರ್ಮವಾಚರಿಸುತ್ತಾರೆ, ಎಲ್ಲ ಧುರೀಣರಿಗೊಂದು ಗುರಿಯುಂಟು, ಗುರಿಮುಟ್ಟುವಂತೆ ಮಾರ್ಗದರ್ಶನ ಮಾಡಬಲ್ಲ ಸಮರ್ಥಗುರುವಿಲ್ಲ, ಕೈಕೊಳ್ಳುವ ಕಾರ್ಯಗಳು ಅಪ್ರಮಾಣವಾಗಿದ್ದರೂ, ಪರಿಣಾಮದಲ್ಲಿ ಸೋತು ಹೋಗುತ್ತವೆ.

ಇಲ್ಲಿ ಕಿಡಿಗೇಡಿಗಳೊಡ್ಡುವ ಕಂಟಕಗಳನ್ನು ಹಾವುಗಳಿಗೆ ಹೋಲಿಸಿದ್ದು ಅರ್ಥವತ್ತಾಗಿದೆ. ಇಂಥ ಮಾನವಕಲ್ಯಾಣಕ್ಕೆ ಮಾರಕವಾದ ಕಂಟಕಗಳನ್ನು ಹತ್ತಿಕ್ಕಿ, ಬಸವ–ಗಾಂಧೀ ತತ್ವಗಳು ಅಂದು ಯಶಸ್ಸನ್ನು ಸಾಧಿಸಿದರೂ, ಇಂದು ಅಂತಹ ಕಂಟಕರಿಂದಲೇ ವಿಫಲವಾಗುತ್ತಲಿವೆ!

**"ಕತ್ತೆಯ ದನಿ ಕೋಮಲವೆಂದರು ಒಬ್ಬರು,**
**ಗೂಗೆಯ ಕೂಗು ಮಂಗಳವೆಂದರು ಇನ್ನೊಬ್ಬರು,**
**ಸೂಳೆಗಳ ರಾಗ ಮಂಜುಳವೆಂದರು ಮತ್ತೊಬ್ಬರು,**
**ಬಡವ ಹೇಳಿದ; ಅಲ್ಲ ಹಾಗಲ್ಲವೆಂದು!**
**ಎಲ್ಲರೂ ಕೆರಳಿ ಹೊರಳಿ ನೋಡಿದರಯ್ಯಾ ಭಿನ್ನ ಮತೀಯನನು!**
**ತಮ್ಮದೇ ಹೌದೆಂದು ಕೊನೆಗೊಮ್ಮೆ ತೀರ್ಪನಿತ್ತರು ನೋಡಯ್ಯ!**
**ಪ್ರಜಾಪ್ರಭುತ್ವದಲ್ಲಿ ಬಹುಮತದ ನಿರ್ಣಯ ಮೀರುವುದೆಂತಯ್ಯ?**
**ಬಡವ ಒತ್ತಿಬಂದ ಕೆಮ್ಮನ್ನು ಹತ್ತಿಕ್ಕಿ**
**ನಕ್ಕು ಮೌನಿಯಾದ ಶ್ರೀ ಸಂಗಮನಾಥ!"**

('ವಚನತೀರ್ಥ'– ಸಂಗಮೇಶ ಹೊಸಮನಿ–೨೨೩)

ಇಂದಿನ ಪ್ರಜಾಪ್ರಭುತ್ವ ಒಂದು ಅಣಕವಾಡು ! ಕತ್ತೆಗೆ ಕುದುರೆಯೆಂದರೂ, ಬಹುಮತದ ನಿರ್ಣಯವನ್ನು ತಳ್ಳಿಹಾಕುವಂತಿಲ್ಲ.

"ತಲೆಯಿಲ್ಲದ ಅಟ್ಟೆಗೆ ವಟ್ಟವ ಕಟ್ಟುವ" (೭೨) ಕುರಿತು ಬಸವಣ್ಣ ತಮ್ಮದೊಂದು ವಚನದಲ್ಲಿ ಹೇಳಿದ ಮಾತು ಇಂದಿನ ಪ್ರಜಾಪ್ರಭುತ್ವದ ಒಂದು ಮುಖವನ್ನು ಎತ್ತಿ ತೋರಿಸಿದರೆ ಹೊಸಮನಿಯವರ ಈ ವಚನ ಇನ್ನೊಂದು ಮುಖವನ್ನು ಎತ್ತಿ ತೋರಿಸುತ್ತಿದೆ. ಎರಡೂ ವಚನಗಳಲ್ಲಿ– ಇಂದಿನ ರಾಜಕೀಯದ ವೈಪರೀತ್ಯವನ್ನು ವಿಡಂಬಿಸಲಾಗಿದೆ. ರುಂಡವಿಲ್ಲದ ಮುಂಡ ಬರಿ ಹೆಣ. ಅಂದರೆ ಬುದ್ಧಿಯಿಲ್ಲದ ವ್ಯಕ್ತಿ ಆಡಳಿತದ ವಿಷಯದಲ್ಲಿ ಹೆಣದ ಸಮಾನ.

ಇಂದಿನ ಪ್ರಜಾಪ್ರಭುತ್ವಕ್ಕೆ ಇದಕ್ಕಿಂತ ಪರಿಣಾಮಕಾರಿಯಾದ ಚಿತ್ರ ಬೇರೊಂದಿಲ್ಲವೆಂಬಂತೆ ಈ ವಚನ ಮೂಡಿ ಬಂದಿದೆ. ದಿನ ನಿತ್ಯದ ಉಪಮಾನದ ಮೂಲಕ ಪ್ರಜಾಪ್ರಭುತ್ವದ ಮೋಜಿನಾಟವನ್ನು ಅರ್ಥವತ್ತಾಗಿ ಚಿತ್ರಿಸುವಲ್ಲಿ ಯಶಸ್ವಿಯಾಗಿದೆ ಈ ವಚನ.

**"ಹುಡುಗತನದ ಹುಡುಗಾಟಕ್ಕೆ ಬಲಿಯಾದ ಮೂಕ ಪಶುಗಳೆ**
**ನಿಮ್ಮ ಆರ್ತ ಕೂಗನ್ನು ತುಂಬಿಸಿಕೊಳಲು ಈ ಹೃದಯಕ್ಕೆ ಸಾಲದು!**
**ರಕ್ಕಸರ ಪೈಶಾಚಿಕ ಪಿಪಾಸೆಗೆ ಸಿಕ್ಕು ಸೀಗುರಿಯಾಗಿ**
**ವಿಲಿವಿಲಿ ಒದ್ದಾಡುವ ತಾಯಿ ಕುಲವೆ,**
**ನಿಮ್ಮನ್ನು ಪಾರು ಮಾಡಲು ಈ ನೌಕರನ ಮುಷ್ಟಿಗೆ ಆಗದು**
**ಬೀದಿ ಭಿಕಾರಿಗಳಾಗಿ ಅಂಡಲೆವ ಭಿಕ್ಷುಕ ಕುಲವೆ,**
**ಈ ಬಡವನ ತುತ್ತು ರೊಟ್ಟಿಯಿಂದ ನಿಮ್ಮ ಹಸಿವೆ ಹಿಂಗದು**
**ತತ್ವಕಾಗಿ ಬಾಳಿ ಊದುಬತ್ತಿಯ ತೆರದಿ ಸುಟ್ಟು**
**ಸಣ್ಣಾಗುವ ಸಂಗಾತಿಗಳೆ,**
**ಈ ದುರ್ಬಲ ಗೆಳೆಯನಿಂದ ನಿಮ್ಮ ಬಯಕೆ ಈಡೇರದು !**
**ನೀವು ಅನಂತ ನಾನು ಅಂತ; ಕೊರಗು ಕೇಳಿ ಕೊರಗುವೆ**
**ಹಸಿವು ಕಂಡು ಮರುಗುವೆ !**
**ಈ ಮೂಕ ಪಶುವಿನ ಮೊರೆ ಕೇಳಿ**
**ಯುಗದ ಕಳವಳ ಕೊನೆಗಾಣಿಸೆಂಬೆ**
**ತಾಯ್ಗರುಳಿನ ಅನಾಥರ ತಂದೆ ಶ್ರೀ ಸಂಗಮನಾಥನಲ್ಲಿ !"**

(ವಚನತೀರ್ಥ–ಪುಟ ೨೦೦ ವ. ೪೪೦)

ಈ ಯುಗದ ಕರುಳ ಹಿಂಡುವ ಸ್ಥಿತಿಗೆ ಯಥಾರ್ಥವಾದ ಚಿತ್ರವಿಲ್ಲಿ ಈ ವಚನದಲ್ಲಿ ಮರ್ಮಕ್ಕೆ ಮುಟ್ಟುವಂತೆ ಮೂಡಿಬಂದಿದೆ. ಕವಿ ಅನಧಿಕೃತ ಶಾಸಕ, ಅಧಿಕೃತ ಶಾಸನಾಧಿಕಾರ ಆವನಿಗಿಲ್ಲ. ಪಾಪ ! ಮರುಗುವುದೊಂದೇ ಅವನ ಕರ್ಮ.

ಕವಿ ಮೊದಲಾದ ಹೃದಯವಂತಿಕೆಯ ಜೀವಿಗಳ ಅಸಹಾಯಕತೆಯ ಈ ಸತ್ಯಕಥೆ ಕರುಣರಸದ ಕಥೆಯಾಗಿದೆ ! ಕವಿ ಮೂಕ ಕಲ್ಲನ್ನೂ ಮಾತನಾಡಿಸಬಲ್ಲ. ಅದರಲ್ಲಿ ಜೀವ ತುಂಬಬಲ್ಲ. ಆದರೆ ಆತ ಸ್ವತಃ ಮೂಕ, ಬದುಕಿಯೂ ನಿರ್ಜೀವಿ ! ತನಗಾಗಿ ಅಲ್ಲ. ದುರ್ಬಲರಿಗಾಗಿ ಕವಿ ಸಂಗಮನಾಥನಲ್ಲಿ ಮೊರೆಯಿಡುವುದನ್ನು ಬಿಟ್ಟು ಮತ್ತೇನು ಮಾಡಬಲ್ಲ !!

**"ಸುಳ್ಳು ದೇವರ ಹುಟ್ಟಿಸಿ ನಿಜದ ದೇವರ ಮರೆಸುವ ಕಾಲವಿದಯ್ಯ,**
**'ನಾನೇ ದೇವರು ಭಗವಂತನ' ಎಂಬುವರ ಅವತಾರ ಕಾಲವಿದಯ್ಯ,**
**ನೂರು ದೇವರ ನೂಕಿ ಒಂದೆ ದೈವದ ನಂಬುಗೆಗೆ ತುಕ್ಕು ಹಿಡಿಸಿ,**
**ಶ್ರೀ ಸಾಮಾನ್ಯನ ಮೇಲೆ ಕುಣಿವ ಕೃತಕ ದೇವರ ಲೀಲಾಕಾಲವಿದಯ್ಯ**
**ನೀತಿಯ ತೊಬೆತ್ತಿ ಕಾಲುವೆಯಲ್ಲಿ ಕೊಳಚೆಯ ಹರಿಸುವ ಕಾಲವಿದಯ್ಯ !**
(ತುಂತುರು ೨೭–ಭೈರವಮೂರ್ತಿ ಕೆ.)

ಧರ್ಮವಿರುವುದು ಅನ್ಯಾಯಕ್ಕೆ ಒಳಗಾದ ಬಡಪಾಯಿಗಳಿಗೆ ನ್ಯಾಯವೊದಗಿಸಿ ಕಾಯುವುದಕ್ಕಾಗಿ, ದೇವರು ಇರುವುದು ಎಲ್ಲ ದಿಕ್ಕಿನ ದಾರಿಗಳು ಮುಚ್ಚಿ, ಎಲ್ಲಿ ಹೋಗಬೇಕೆಂಬ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಾಗ ಮನುಷ್ಯನಿಗೆ ಒಂದು ದಾರಿ ತೋರಿ ಕಾಯುವುದಕ್ಕಾಗಿ, ಧರ್ಮ ದೇವರುಗಳ ಅಗತ್ಯವಿರುವುದು ಆರ್ತರ ಮೊರೆ ಕೇಳಿ ಉಳಿಸುವುದಕ್ಕಾಗಿ. ದೇವರ ಸದಾಶಯವೆ ಧರ್ಮವೆನ್ನಬಹುದು. ಧರ್ಮ ಮಾನವ ಕುಲಕ್ಕೆ ಒಳ್ಳೆಯದನ್ನು ಬಯಸುವುದಲ್ಲದೆ ಕೇಡನ್ನಲ್ಲ.

ಆದರೆ, ಈ ಧರ್ಮ, ದೇವರು ಎಂಬವರು ಮನುಷ್ಯನ ಸ್ವಾರ್ಥ ಲೋಭದ ಕೈಯಲ್ಲಿಯ ಆಯುಧವಾಗಿವೆ. ಇವು ಕಂಟಕರನ್ನು ಎದುರಿಸಿ, ಸಂಕಟದೊಳಗಿರುವ ಜನತೆಯನ್ನು ರಕ್ಷಿಸುವ ಆಯುಧವಾಗದೆ, ಅವರ ಕತೆಯನ್ನೇ ಕೊನೆಗೊಳಿಸುವ ಅಥವಾ ಮುಗಿಸುವ ಆಯುಧವಾಗಿವೆ. ಅದಕ್ಕಾಗಿ, ಮನುಷ್ಯನ ದುರಾಶೆ ಸುಳ್ಳು ದೇವರನ್ನು ಸೃಷ್ಟಿಸಿ, ನಿಜವಾದ ದೇವರನ್ನು ನಿಷ್ಕ್ರಿಯಗೊಳಿಸುವಷ್ಟು ಬಲಿಷ್ಠವಾಗಿದೆ ! 'ನಾನೇ ದೇವರು' ಎನ್ನುವ ಮಟ್ಟಕ್ಕೂ ಮನುಷ್ಯನ ನಿರ್ದಯ ಸ್ವಾರ್ಥ ಮುಂದುವರಿದಿದೆ. ವರ ಕೊಟ್ಟವರಿಗೇ ತಿರುಗಿ ನಿಲ್ಲುವ ಭಸ್ಮಾಸುರವಾಗಿದ್ದಾನೆ ಇಂದು ಮನುಷ್ಯ. ಶ್ರೀಸಾಮಾನ್ಯರ ಆಶೋತ್ತರಗಳ ಕತ್ತು ಹಿಸುಕಿ ಅವರೆದೆಯ ಮೇಲೆ ಅಟ್ಟಹಾಸದಿಂದ ಕುಣಿದಾಡುವ ಮನುಷ್ಯನ ಅಹಂಕಾರಕ್ಕೆ ಏನೆನ್ನಬೇಕು ? ನೀತಿಯ ತೊಬೆತ್ತಿದ ಮೇಲೆ ಕಾಲುವೆಯಲ್ಲ ಕೊಳಚೆ ನೀರು ! ಇಲ್ಲಿ ವಚನಕಾರರು ಕಾಲವೇ ಇಂಥದು ಬಂದಿದೆ ಎಂದು ಹೇಳುತ್ತಾರೆ. ನಾವು ಮನುಷ್ಯರಾಗಿ ಇಂಥ ಅಮಾನುಷ ಹೀನ ಕೆಲಸಕ್ಕೆ ಕೈ ಹಾಕಿ ದಿಕ್ಕಿಲ್ಲದವರ ಬದುಕಿಗೆ ಪ್ರಳಯ ತರುವಷ್ಟು ಕಂಟಕರಾದರೆ ಕಾಲವೇನು ಮಾಡೀತು ? ತಪ್ಪು ತಪ್ಪಿದ ಮನುಷ್ಯನದು, ಕಾಲದ್ದಲ್ಲ !!

**"ನೀನೊಮ್ಮೆ ಸೆಟ್ಟಿಯಾಗು,**
**ನ್ಯಾಯದ ಬೆಲೆ ಸರಕು ದೊರೆಯುವಂತಾಗಲಿ**
**ನೀನೊಮ್ಮೆ ಸರಪಂಚನಾಗು,**
**ಪಕ್ಷಪಾತಾತೀತ ನ್ಯಾಯ ದೊರೆಯುವಂತಾಗಲಿ"**

(ದೇವ ಭಿನ್ನಪ ೧೩೩—ಅನಂತರಾಮು ಕೆ.)

(ಭೈರವ ಮೂರ್ತಿಯವರ ಮತ್ತು ಅನಂತರಾಮು ಅವರ ವಚನಗಳನ್ನು '೨೦ ನೇ ಶತಮಾನದ ವಚನ ಸಾಹಿತ್ಯ-ಒಂದು ಅಧ್ಯಯನ' ಗ್ರಂಥದಿಂದ ಆಯ್ದು ಕೊಳ್ಳಲಾಗಿದೆ.)

ಇಂದು ಭ್ರಷ್ಟಾಚಾರವೆ ಜನಜೀವನದ ಸುಖ-ಸೌಕರ್ಯಗಳನ್ನು ಕಬಳಿಸುತ್ತಲಿದೆ. ನ್ಯಾಯವೆಂಬುದು ಎಲ್ಲ ಬಗೆಯ ವ್ಯವಹಾರಗಳಲ್ಲಿ ತಿರುಕನ ಕನಸಾಗಿದೆ. ವ್ಯಾಪಾರ, ನಗರಪಾಲಿಕೆ, ಕೋರ್ಟು-ಕಚೇರಿ, ಸರಕಾರದ ಆಡಳಿತೆ -ಹೀಗೆ ಎಲ್ಲ ರಂಗಗಳಲ್ಲಿ ಲಂಚವೆಂಬುದು ತಾಂಡವವಾಡುತ್ತಲಿದೆ. ಅನಂತರಾಮು ಅವರು ಜಿಗುಪ್ಸೆಗೊಂಡು ಈ ವಚನ ರಚಿಸಿದಂತೆ, ಮನುಷ್ಯ ಮನುಷ್ಯನಿಗೆ ಕಂಟಕವಾಗಿ ಪರಿಣಮಿಸುತ್ತಿದೆ. ಸಾಮಾನ್ಯರ ಬದುಕು ಉಸಿರುಗಟ್ಟಿದೆ.

ತನ್ನ ಶಕ್ತಿ ಪೂರ್ಣ ಸೋತ ಬಳಿಕ ಮನುಷ್ಯ ಮೊರೆಯಿಡುವುದು ದೇವರಿಗೆ. ದೇವರೆಂಬವನು ಮನುಷ್ಯನಿಂದಲೇ ಸೃಷ್ಟಿಯಾದವನೊ, ದೇವರಿಂದಲೆ ಈ ಜನ ಸೃಷ್ಟಿಯಾದುದೊ -ಆ ಮಾತು ಬೇರೆ. ಆದರೆ ಅಸಹಾಯಕರಿಗೆ ಕೊನೆಗೆ ರಕ್ಷಣೆ ನೀಡುವಾತ ಈ ದೇವರು. ಅದಕ್ಕಾಗಿ ಸೆಟ್ಟಿಯಾಗಿ ನ್ಯಾಯ ಬೆಲೆಯಲ್ಲಿ ಪಡಿ ಪದಾರ್ಥ ಸಿಕ್ಕುವಂತಾಗಲಿ ಎಂದು, ಸರಪಂಚನಾಗಿ ಪಕ್ಷಪಾತವಿಲ್ಲದಂತೆ ನ್ಯಾಯ ದೊರೆಯು ವಂತಾಗಲಿ -ಎಂದು ದೇವರಿಗೆ ಮೊರೆಯಿಡುವಲ್ಲಿ -ಇಂದಿನ ಯುಗದ ಹದಗೆಟ್ಟ ಸ್ಥಿತಿಗತಿಯ ಚಿತ್ರವಿದೆ !

**"ರೂವಾರಿಯ ಕೌಶಲದಲ್ಲಿ ಶಿಲ್ಪವಾಗಿ ಅರಳದಿದ್ದರೆ**
**ಆ ಶಿಲೆಯಿಂದೇನು ಪ್ರಯೋಜನವಯ್ಯ ?**
**ಅಕ್ಕಸಾಲಿಯಲ್ಲಿ ಒಪ್ಪವ ಒಡವೆಯಾಗದಿದ್ದರೆ**
**ಆ ಸುವರ್ಣದಿಂದೇನು ಪ್ರಯೋಜನವಯ್ಯ ?**
**ಕವಿಯ ಅನುಭವದಲ್ಲಿ ಕಾವ್ಯವಾಗಿ ಮೂಡದಿದ್ದರೆ**
**ಆ ಶಬ್ದ ಸಂಯೋಜನೆಯಿಂದೇನು ಪ್ರಯೋಜನವಯ್ಯ ?**
**ಅನುಭಾವಿಯಲ್ಲಿ ಅರಿವು ಹುಟ್ಟಿ ಮನದ ಜಂಜಡ ಕಳೆಯದಿದ್ದರೆ**
**ಆ ಅನುಭಾವದಿಂದೇನು ಪ್ರಯೋಜನವಯ್ಯ ?**

**ಉಳ್ಳವರ ಮನೆಯು ಭಾಗ್ಯಲಕ್ಷ್ಮಿ ಇಲ್ಲದವರ ಬಗೆಗೆ**
**ಅಂತಃಕರಣ ಲಕ್ಷ್ಮಿಯಾಗದಿದ್ದರೆ**
**ಆ ಲಕ್ಷ್ಮಿಯಿಂದೇನು ಪ್ರಯೋಜನವಯ್ಯ ?**
**ಪ್ರಜಾತಂತ್ರದಲಿ ಪ್ರಜಾಕೋಟಿಯ ಸರ್ವೋದಯವಾಗದಿದ್ದರೆ**
**ಆ ಪ್ರಜಾತಂತ್ರದಿಂದೇನು ಪ್ರಯೋಜನವಯ್ಯ ?"**

('ಬಿಂಬ' –ಬ. ಗಿ. ಯಲ್ಲಟ್ಟಿ ಪುಟ ೮೦, ವಚನ ೫೨)

ಜಗತ್ತಿನಲ್ಲಿ ಒಂದೊಂದು ವಸ್ತು ಒಂದೊಂದು ವಿಚಾರ ಒಂದೊಂದು ಪ್ರಯೋಜನವನ್ನು ನೀಡಬಲ್ಲುವು. ಅವುಗಳಿಂದ ಆ ಪ್ರಯೋಜನ ದೊರೆಯದಿದ್ದರೆ ಆ ವಸ್ತುವಿನ ಮೇಲಿನ ಆಸೆ ಹಿಂಗಬಹುದು. ಉಪಯುಕ್ತವಾಗುವ ಅನುಭವ-ಅನುಭಾವ ಸಹ ನಿರುಪಯುಕ್ತವೆನಿಸಬಹುದು. ಅಭಿರುಚಿಯ ಪೂರ್ತಿಯೆ ಸಂತೋಷಕ್ಕೆ ಮೂಲ ! ಆ ಅಭಿರುಚಿ ಈಡೇರದಿದ್ದರೆ ಆ ಅಭಿರುಚಿ ಕೊಡುವ ವಸ್ತುವೆ ವ್ಯರ್ಥವೆನಿಸಬಹುದು.

ಶಿಲೆ, ಸುವರ್ಣ, ಅನುಭವ, ಅರಿವು, ಲಕ್ಷ್ಮಿ (ಹಣ), ಪ್ರಜಾತಂತ್ರ –ಇವು ರೂಪುಗೊಂಡು ಉದ್ದಿಷ್ಟ ಫಲ ನೀಡಿದಾಗ ಮಾತ್ರ ಆಪ್ಯಾಯಮಾನವೆನಿಸುತ್ತವೆ. ಇಲ್ಲದಿದ್ದರೆ ವ್ಯರ್ಥವೆನಿಸುತ್ತವೆ. ಉದಾಹರಣಾರ್ಥವಾಗಿ, ಒಬ್ಬರಲ್ಲಿಯೆ ಹಣ ಸಂಗ್ರಹವಾಗಿ ಉಳಿದವರ ಪಾಲಿಗೆ ಕಂಟಕವಾದರೆ, ಅಂಥ ಸಿರಿವಂತಿಕೆಯ ಬಗೆಗೆ ಸಮುದಾಯ ಸುಮ್ಮನಿರುವುದುಂಟೆ ? ಪ್ರಜೆಗಳ ಹಿತ ಸಾಧಿಸದೆ, ಭ್ರಷ್ಟಾಚಾರಕ್ಕಿಳಿದರೆ ಆ ಪ್ರಜಾತಂತ್ರ ಯಾರಿಗೆ ಬೇಕು ? ಎಂದು ಅಶಾಂತಗೊಂಡ ಜನತೆ ಸಹಿಸಿಕೊಳ್ಳಲುಂಟೆ ?

**"ಕಾಲ ಯಾವುದೆ ಇರಲಿ, ಒಳಗೆ ಬರಲು ಹೇಳಾ;**
**ಯುಗವು ಯಾವುದೆ ಇರಲಿ, ಹೆಗಲು ಕೊಡು ಧೀರಾ !**
**ಹಾಡಿ ಬರಲಿ ತಲಕಂಠವಾಗಿ**
**ಅಪಶಕುನ ತರಲಿ ಗೂಬೆಯಾಗಿ**
**ಬೊಗಳಿ ಬರಲಿ ನಾಯಿಯಾಗಿ**
**ಮೇಲೆರಗಿ ಬರಲಿ ಗಿಡುಗವಾಗಿ ಒಳಗೆ ಬರಲು ಹೇಳಾ !**
**ಕುರುಡು ಇರಲಿ ಕುಂಟು ಇರಲಿ, ಗೆಜ್ಜೆಕಟ್ಟಿ ಕುಣಿದಾಡಿ ಬರಲಿ**
**ಒಳಗೆ ಬರಲು ಹೇಳಾ !**
**ಕಾಲಗತಿಗೆ ಗತಿಯಾಗಿ ಸಾಗಿ**
**ಜಗದ ಮಿಡಿತಕ್ಕೆ ನಾಡಿಯಾಗಿ**
**ಯುಗದ ದನಿಗೆ ಅಭಿವ್ಯಕ್ತಿಯಾಗಿ**

**ಮುಳುಗದಂತೆ ಹಿಜರಿಯದಂತೆ ತೇಲಿ ಹೋಗು ಧೀರಾ !**
**ಬಸವಗುರು ಶರಣ ಬಸವ ದಾರಿಯಲಿ ಶ್ರದ್ಧೆಯಲ್ಲಿ ಸಾರಿ !!"**

(ಬ. ಗಿ. ಯಲ್ಲಟ್ಟಿ –ಮುಂಬರುವ ವಚನ ಸಂಕಲನದಿಂದ)

ಕಾಲ ಹೀಗೆಯೆ ಇರುವುದೆಂದು ಹೇಳಲು ಬರುವುದಿಲ್ಲ. ಯುಗದ ಸ್ಥಿತಿಗತಿಗೆ ಹೆಗಲು ಕೊಡದೆ ಬೇರೆ ದಾರಿಯಿಲ್ಲ. ಕಾಲಗತಿಯಲ್ಲಿ ಹೆಜ್ಜೆಯೂರದೆ ಪಯಣ ಸಾಗುವಂತಿಲ್ಲ.

ಕಾಲಗತಿಯೆ ಒಮ್ಮೆ – ಅಪಶಕುನದಂಥ ಭಯವೊಡ್ಡುವ ಗೂಬೆಯಾಗ ಬಹುದು, ಕಾರಣವಿಲ್ಲದೆ ಕಿರಿಕಿರಿ ಕೊಡುವ ನಾಯಿಯಾಗಬಹುದು, ಬಡಹಕ್ಕಿಯ ಮೇಲೆರಗುವ ಗಿಡುಗವಾಗಬಹುದು, ಮುಂದಾಲೋಚನೆಯನ್ನೆ ಕುರುಡಾಗಿಸಬಹುದು, ಆಸೆಯ ಕಾಲನ್ನೆ ಕುಂಟಾಗಿಸಬಹುದು ! ಆದರೆ, ಕಾಲ ಕಣ್ತೆರೆದರೆ, ಹಿಂದಿನದನ್ನು ಮರೆಯಿಸಿ ಹಾಡಿ ಮನರಂಜಿಸುವ ಕೋಗಿಲೆಯಾಗಬಹುದು. ಅಷ್ಟೇ ಏಕೆ ! ಗೆಜ್ಜೆ ಕಟ್ಟಿ ಸ್ವತಃ ಕುಣಿದಾಡಿ ಮೈಮನಗಳನ್ನು ಪುಳಕಗೊಳಿಸಬಹುದು. ಆದರೆ, ಆತಂಕದ ತೆರೆಯ ಮೇಲೆ ತೇರಿ ಏರಿಬಂದಾಗ, ಪ್ರವಾಹದಲ್ಲಿ ಈಸಿ ಜಯಿಸುವ ಧೀರನಾಗ ಬೇಕಲ್ಲದೆ, ಅಂಜಿ ಸಾಯುವ ಭೀರುವಾಗಬಾರದು !!

೧೯.

# ವಚನ ಸಾಹಿತ್ಯ, ಅಂದು–ಇಂದು !

---

ಯಾವುದೆ ಪ್ರಕಾರದ ಸಾಹಿತ್ಯ ಕಾಲ ಗತಿಯ ಧ್ವನಿಯಾಗಿ ಮೂಡಿ ಬರುವಂಥದು. ಹಾಗೆ ಬಂದರೆ ಅದು ನಿಜವಾದ ಸಾಹಿತ್ಯ. ಆ ರೀತಿಯ ಸಾಹಿತ್ಯ ನಿತ್ಯಕಾಲೀನ ಸತ್ಯವನ್ನು ಹಾಗೂ ಸತ್ತ್ವವನ್ನು ಮೈಗೂಡಿಸಿಕೊಂಡಿದ್ದರೆ ತೀರ ಚೆನ್ನ. ಈ ಮಾತಿಗೆ ಬಸವಕಾಲೀನ ವಚನ ಸಾಹಿತ್ಯವೂ ಶ್ರೇಷ್ಠ ಮಟ್ಟದ ಕಾವ್ಯವೂ ನಿದರ್ಶನವಾಗಿವೆ. ಬಸವಯುಗದಲ್ಲಿಯ ಕೆಲವು ರೀತಿ ರಿವಾಜುಗಳು, ಮೂಢ ನಂಬಿಕೆ, ಸಂಪ್ರದಾಯಗಳು ಇಂದಿಗೂ ಉಳಿದಿರುತ್ತವೆ. ಸಂಪ್ರದಾಯವಾದಿಗಳು ಅವುಗಳನ್ನು ಆರಾಧಿಸುವುದುಂಟು. ವಿಚಾರವಾದಿಗಳು ವಿರೋಧಿಸುವದುಂಟು. ಈ ಆರಾಧನೆ, ವಿರೋಧ ಎಲ್ಲ ಪ್ರಕಾರದ ಸಾಹಿತ್ಯದಲ್ಲಿ ಮೂಡಿಬರುವುದು ಸ್ವಾಭಾವಿಕ.

ಇನ್ನು ವಚನಸಾಹಿತ್ಯಕ್ಕೂ ಉಳಿದ ಸಾಹಿತ್ಯಕ್ಕೂ ಒಲವು ನಿಲವಿನಲ್ಲಿ ಒಂದಿಷ್ಟು ಭಿನ್ನತೆಯಿದೆ. ಮೈಕಟ್ಟಿನಲ್ಲಿ, ಒಳಗುಟ್ಟಿನಲ್ಲಿ ಈ ಭಿನ್ನತೆಯನ್ನು ಗುರುತಿಸಬಹುದು. ಹನ್ನೆರಡನೆಯ ಶತಮಾನದ ವಚನಗಳಲ್ಲಿ ಮತ್ತು ಇಂದಿನ ವಚನಗಳಲ್ಲಿಯೂ ಬೇರೆ ತೆರನಾದ ಭಿನ್ನತೆಯಿದೆ–ಧ್ಯೇಯ ಧೋರಣೆಯಲ್ಲಿ ಅಂದಿನ ವಚನದ ಗಮನ ಅರಿವಿನತ್ತ ಸಾಗಿದರೆ ಇಂದಿನ ವಚನ ಹಾಗೂ ಇತರ ಸಾಹಿತ್ಯದ ಗಮನ ಇರವಿನತ್ತ ತುಡಿಯುತ್ತದೆ. ಕಾಲದ ತುಡಿತ ಹೀಗಿರುವಾಗ, ಕಾಲದ ಉಸಿರಾದ ಸಾಹಿತ್ಯ ಮತ್ತು ವಚನಗಳಲ್ಲಿ ಈ ತುಡಿತ ಇರುವುದು ಸಹಜವಾಗಿದೆ. ಅಂದರೆ ಅಂದಿನ ವಚನಕಾರರು ಇರವನ್ನು ಕಡೆಗಣಿಸಿದರೆಂದಾಗಲಿ, ಬರಿ ಅಧ್ಯಾತ್ಮವನ್ನು ಅಪ್ಪಿ ಕೊಂಡರೆಂದಾಗಲಿ ಅಲ್ಲ. ಬದುಕನ್ನು ಭದ್ರಗೊಳಿಸಿದಲ್ಲದೆ ಶುದ್ಧಗೊಳಿಸಿದಲ್ಲದೆ ಅಧ್ಯಾತ್ಮ ಅಂಕುರಿಸುವಂಥದಲ್ಲ. ಕಳೆ–ಕಸವನ್ನು ಕಿತ್ತಿ, ಭೂಮಿಯನ್ನು ಹದ ಗೊಳಿಸಿದಲ್ಲದೆ ಉತ್ತಿ ಬಿತ್ತುವಲ್ಲಿ ಪ್ರಯೋಜನ ಇಲ್ಲವೆಂಬುದು ಅಂದಿನ ಶರಣರು ಅರಿಯದವರಲ್ಲ. ಅವರ ವಚನಗಳೆ ಇದಕ್ಕೆ ದೃಷ್ಟಾಂತವಾಗಿವೆ.

ಬರೆಯಬೇಕೆಂಬ ಛಲದಿಂದ ಬರೆದವರಲ್ಲ ಅಂದಿನ ವಚನಕಾರರು. ಸಮಗ್ರ ಜನಸಮುದಾಯವನ್ನು ಪುನರುಜ್ಜೀವನಗೊಳಿಸಿದ ಕ್ರಾಂತಿಯ ಉಸಿರಾಗಿ ಸ್ಫುರಿಸಿ ಬಂದುದು ಅಂದಿನ ವಚನ. ಅಷ್ಟೇ ಅಲ್ಲ, ಈ ಕ್ರಾಂತಿಗೆ ಪ್ರೇರಕ ಹಾಗು ಮಾರ್ಗದರ್ಶಕ ಶಕ್ತಿಯಾಗಿಯೂ ಪಾತ್ರವಹಿಸಿರುವುದುಂಟು. ವಚನವೆಂದರೆ ಬರಿ ಮಾತು ಅಲ್ಲ, ಶಬ್ದ ಸಂಯೋಜನೆಯಲ್ಲ, ಮಾತು ಜ್ಯೋತಿರ್ಲಿಂಗವಾದರೆ,

ಅದು ವಚನ. ಅಂಗದ ಅವಗುಣ ನೀಗಿ ಲಿಂಗದ ಸದ್ಗುಣ ಪಡೆದವರಿಂದ ಅಂಥ ಮಾತು ಬರುವುದುಂಟು. ಅಂದರೆ ಆತ್ಮವಿಮರ್ಶೆ, ಆತ್ಮಸಂಸ್ಕಾರ ಆತ್ಮಶುದ್ಧಿಯಿಂದಲೆ ಅಂಥ ಮಾತು ವಚನವಾಗಿ ಪರಿಣಮಿಸುವುದುಂಟು. ಉಳಿದ ಪ್ರಕಾರದ ಸಾಹಿತ್ಯಸೃಷ್ಟಿಗೆ ಅನುಭವ, ಅಧ್ಯಯನ, ಪ್ರತಿಭೆ ಕಾರಣವಾದರೆ. ವಚನ ಸೃಷ್ಟಿಗೆ ಆತ್ಮಾನುಭವ ಕಾರಣವಾಗುವುದು. ಅಷ್ಟೇ ಅಲ್ಲ, ಆತ್ಮಾನುಭವವೆ ವಚನಕ್ಕೆ ಮೂಲದ್ರವ್ಯ ! ಆತ್ಮಮಥನದ ಆಳದಿಂದ ಉದ್ಭವವಾದುದು ಈ ವಚನಾಮೃತ !!

**"ನುಡಿದರೆ ಮುತ್ತಿನ ಹಾರದಂತಿರಬೇಕು**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು**
**ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು**
**ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು,**
**ನುಡಿಯೊಳಗಾಗಿ ನಡೆಯದಿದ್ದರೆ**
**ಕೂಡಲ ಸಂಗಮದೇವನೆಂತೊಲಿವನಯ್ಯ ?"**

ವಚನವೆಂದರೆ ಹೀಗೆ ಇರಬೇಕು ಎನ್ನುವುದಕ್ಕೆ ಬಸವಣ್ಣನ ಈ ವಚನ ಪ್ರಮಾಣವಾಗಿದೆ. ನುಡಿ ಅಥವಾ ನಾವಾಡಿದ ಮಾತು ಹಿಡಿಸಬಹುದು ಹಿಡಿಸಲಿಕ್ಕಿಲ್ಲ, ಆದರೆ, ವಚನ ಮಾತ್ರ ಎಲ್ಲರಿಗೆ ಹಿಡಿಸುವಂಥದು. ಸ್ವಾತಿಯ ಬಿಂದು ಮುತ್ತಾಗಿ ಪರಿಣಮಿಸಿದ ಮೇಲೆ ಆ ಮುತ್ತು ಸರ್ವರಿಗೂ ಇಷ್ಟ–ಅದಕ್ಕಿರುವ ಮೌಲ್ಯದಿಂದಾಗಿ. ಹಾಗೆಯೆ ಮಾತು. ಲಿಂಗಕ್ಕೆ (ಅಂತಃಸಾಕ್ಷಿಗೆ) ಒಪ್ಪಿತವಾದ ಮೇಲೆ, ಆ ಮಾತು. ವಚನವಾಗಿ ಪರಿಣಮಿಸುವುದಂಟು. ಲಿಂಗ ಅಹುದಹುದೆನ್ನುವಂತೆ ನುಡಿದ ಮಾತು ವಚನವಲ್ಲದೆ ಮತ್ತೇನು !

'ವಿಪ್ರ ಮೊದಲು ಅಂತ್ಯಜ ಕಡೆಯಾಗಿ' ಒಂದೆ ಎಂದು ಪರಿಗಣಿಸುವ ಮತ್ತು ಹಾಗೆ ನುಡಿದಂತೆ ಭೇದವಿಲ್ಲದ ಸಮಗ್ರ ಜನಸಮುದಾಯವನ್ನು ಪುನರುಜ್ಜೀವನಗೊಳಿಸಿರುವುದು ಕ್ರಾಂತಿಯೆ ಸರಿ ! ಅಂದಿನ ವಚನದ ಧ್ಯೇಯ ಧೋರಣೆ–ಸಕಲರ ಸರ್ವಮುಖ ಉದಾತ್ತೀಕರಣ ಹೊಂದುವಂತೆ ಮಾಡುವುದು, ಹೀಗೆ ಸಾಮಾನ್ಯರನ್ನು ಅಸಾಮಾನ್ಯರನ್ನಾಗಿ, ಪ್ರಕೃತಿಯನ್ನು ಸಂಸ್ಕೃತಿಯನ್ನಾಗಿ ರೂಪಿಸುವುದೇ ಕ್ರಾಂತಿ ! ಬಸವಾದಿ ವಚನಕಾರರ ನಡೆ–ನುಡಿ ಆ ನಿಟ್ಟಿನಲ್ಲಿಯೆ ಸಾಗಿರುವುದನ್ನು ಪರಿಶೀಲಿಸಬಹುದು. ಅವರ ಏಕೋಭಾವವುಳ್ಳ ನಡಯೆ ನುಡಿಯಾಗಿ, ಆ ನುಡಿ ವಚನವಾಗಿ ಮಾಣಿಕ್ಯದ ದೀಪ್ತಿಯಾಗಿ ಬೆಳಗಿರುವುದುಂಟು !

"ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ, ಸಾಕ್ಷಾತ್ ಶಿವನೆಂದು ವಂದಿಸಿ" ಪೂಜಿಸಬೇಕೆಂಬ ಬಸವ ವಿಚಾರ ಬರಿ ಮಾತಿನಲ್ಲಿ ಮುಳುಗದೆ ಆಚಾರವಾಗಿ ಅನುಷ್ಠಾನದಲ್ಲಿ ಬಂದಿರುವುದೇ ಅಂದಿನ ಕ್ರಾಂತಿಗೆ ಸಾಕ್ಷಿಯಾಗಿದೆ.

ಇಂದಿಗೂ ಈ ಕ್ರಾಂತಿ ಫಲಪ್ರದವಾಗದಿರುವುದನ್ನು ಇಲ್ಲಿ ಗಮನಿಸಬಹುದು. ಮೀಸಲಾತಿಯ ಮಾಧ್ಯಮದಲ್ಲಿ ಇಂದು ನಡೆದಿರುವ ಸುಧಾರಣೆಯ ಹಿಂದೆ (ಇದು ಕ್ರಾಂತಿಯಲ್ಲ) ರಾಜಕೀಯ ಸ್ವಾರ್ಥ, ಅಧಿಕಾರದ ಲಾಲಸೆ ವಿಜೃಂಭಿಸುತ್ತಿರುವುದಲ್ಲದೆ ಮತ್ತೇನು ಅಲ್ಲ. ಒಮ್ಮನವಿಲ್ಲದೆ ಇಮ್ಮನದಲ್ಲಿ ಮಾಡುವ ಯತ್ನ ಹೇಗೆ ಫಲಕಾರಿ ಯಾಗಬಹುದು ? ಮಡಿವಾಳನಾಗಿದ್ದ ಮಾಚಯ್ಯ, ಸಮಗಾರನಾಗಿದ್ದ ಹರಳಯ್ಯ, ಮಾದಾರನಾಗಿದ್ದ ಚನ್ನಯ್ಯ, ಸಚಿವನೆಂಬ ಹಮ್ಮಿನಲ್ಲಿದ್ದ ಮಧುವರಸ- ಪರಿವರ್ತನೆ ಹೊಂದಿ ಶುದ್ಧ ಶರಣರಾಗಿ ಬೆಳಗಲಿಲ್ಲವೆ ? ಅಸ್ಪೃಶ್ಯನಾಗಿದ್ದ ಪೆದ್ದಿಯೊಬ್ಬ ಉರಿಲಿಂಗ ಪೆದ್ದಿಯಾಗಿ ಶರಣನಾಗಿ ವಚನಕಾರನಾಗಿ ಶೋಭಿಸಲಿಲ್ಲವೆ? ಇದು ಅಂದಿನ ವಚನಕಾರರ ವಚನ ರಚನೆಯ ಉದಾತ್ತ ಧ್ಯೇಯವಾಗಿತ್ತೆಂಬುದನ್ನು ಮರೆಯಲಾಗದು. ಹರಿಜನ ರೊಬ್ಬರು ಭಾಲ್ಕಿಯ ಚನ್ನಬಸವ ಪಟ್ಟದ್ದೇವರ ಪ್ರಸಾದೀಕರಣ ಪ್ರಯತ್ನದಿಂದ ಬೆಲ್ದಾಳ ಶರಣರಾಗಿ, ಗ್ರಂಥಕರ್ತರಾಗಿ ಇಂದಿಗೂ ಜ್ಞಾನದಾಸೋಹ, ನಡೆಸುತ್ತಿರುವಲ್ಲಿ ಅಂದಿನ ಬಸವಕ್ರಾಂತಿ ಇಂದಿಗೂ ಜೀವಂತವಾದುದನ್ನು ತಿಳಿಸುತ್ತದೆ. ಚಿತ್ತರಗಿಯ ವಿಜಯ ಮಹಾಂತೇಶ್ವರ ಪೀಠಕ್ಕೆ (ಸುಸಂಸ್ಕೃತ) ದಲಿತರೊಬ್ಬರನ್ನು ತರಬೇಕೆಂಬ ಆ ಪೀಠದ ಪೂಜ್ಯ ಮಹಾಂತ ಸ್ವಾಮಿಗಳವರ ಪ್ರಯತ್ನ ಆ ಕ್ರಾಂತಿಯ ಮುನ್ನಡೆಯ ಸಂಕೇತವೆಂಬುದನ್ನು ಒಪ್ಪಲೇಬೇಕು.

ಇಂದಿನ ಕ್ರಾಂತಿಯ ಮುನ್ನಡೆಯ ಹಿನ್ನೆಲೆ ಅಂದಿನ ಅಪೂರ್ವ ಕ್ರಾಂತಿಯೆ ಕಾರಣ. ಅದನ್ನೀ ಸಿದ್ಧರಾಮೇಶ್ವರನ ವಚನದಿಂದ ಮನವರಿಕೆ ಮಾಡಿಕೊಳ್ಳಬಹುದು:

**"ಶರಣನ ನಡೆ ಅಂತಿಂತೆನಬೇಡ**
**ಶರಣ ಮಾದರ ಚನ್ನಯ್ಯನ ನಡೆ ಯಾವ ಆಗಮದಲ್ಲಿ ಹೇಳಿತ್ತು ?**
**ಶರಣ ಡೋಹರ ಕಕ್ಕಯ್ಯನ ನಡೆ ಯಾವ ವೇದದಲ್ಲಿ ಹೇಳಿತ್ತು ?**
**ನಡೆದ ಆಚರಣೆಯೆ ಸಚ್ಛೀಲ !**
**ನುಡಿದ ವಾಕ್ಯವೆ ಮೋಕ್ಷಪ್ರದಾಯಕ ನೋಡಾ !!**
**ಕಪಿಲಸಿದ್ಧ ಮಲ್ಲಿಕಾರ್ಜುನಾ."**

ಇವರಿಬ್ಬರೂ ದಲಿತ ವರ್ಗಕ್ಕೆ ಸೇರಿದವರು, ಮಾನವ ಕುಲದ ಅಂತಸ್ತಿನಲ್ಲಿ ತೀರ ಕನಿಷ್ಟರು, ನಿಕೃಷ್ಟರು ! ಇವರಲ್ಲದೆ ಇನ್ನೂ ಇಂಥ ಅನೇಕ ದಲಿತರು ಮಹಾ ಶರಣರಾಗಿ ಬೆಳಗಿದ್ದು ಮಾನವೋದ್ಧಾರದ ಕ್ರಾಂತಿಯು ಇತಿಹಾಸದಲ್ಲಿಯೆ ಅದ್ವಿತೀಯ! ಇದರಲ್ಲೇನು ಪವಾಡವಿಲ್ಲ. ಅವರ ಸಚ್ಚಾರಿತ್ರ್ಯ ಸನ್ನಡತೆಯೆ ಶರಣತ್ವದ ಶಿಖರಕ್ಕೆ ಏರಲು ಕಾರಣವಾಯಿತೆಂಬುದನ್ನು ಅಲ್ಲಗಳೆಯಲಾಗದು. ಸನ್ನಡತೆಯಿಂದಾಗಿ- ಅವರ ನುಡಿ ಸನ್ನುಡಿಯಾಗಿ ಶರಣತ್ವಸ್ವಯವಾಗಿ (ಅದುವೆ) ಅವರ ಮೋಕ್ಷಕ್ಕೆ ಕಾರಣವಾಯಿತು. ಇಲ್ಲಿ ಮೋಕ್ಷವೆಂದರೆ ಹಿಂದಿನ ಹೀನ-ದೀನ ಸ್ಥಿತಿಯಿಂದ ಬಿಡುಗಡೆ ಹೊಂದಿದರು ಎಂದು ಅರ್ಥ. ಹೀಗೆ ಸನ್ನುಡಿ ಸನ್ನಡೆ ಅಧ್ಯಾತ್ಮದ ಆರೋಹಣಕ್ಕೆ

ಕಾರಣವಾದುವು. ಸನ್ನಡೆಯಲ್ಲಿಯೆ ಶರಣತ್ವವಿದೆ !! ಈ ಅಧ್ಯಾತ್ಮದ ಆರೋಹಣಕ್ಕೆ-ಷಟ್‌ಸ್ಥಲ. ಅಷ್ಟಾವರ್ಣ, ಪಂಚಾಚಾರಗಳು ನಿಚ್ಚಣಿಕೆಯ ಮೆಟ್ಟಲುಗಳಾಗಿರುತ್ತವೆ ! ಸಾಮಾನ್ಯರು ಅಸಾಮಾನ್ಯರಾದದ್ದು ನಿಕೃಷ್ಟರು ಉತ್ಕೃಷ್ಟರಾದದ್ದು, ಶೂದ್ರರು ಶರಣರಾದದ್ದು ಪವಾಡವಲ್ಲ, ಪರಿಶುದ್ಧ ಪ್ರಯತ್ನ !

ಆದರೆ, ಇಂದಿನ ಕಾಲಗತಿಯೆ ಬೇರೆ. ಜನರ ಆಶೋತ್ತರಗಳೇ ಬೇರೆ, ಶ್ರಮ ಬೇಡ ಸುಖ ಬೇಕು, ಸಚ್ಚಾರಿತ್ರ ಸಚ್ಛೀಲ ಬೇಡ ಉನ್ನತ ಸ್ಥಾನಮಾನ ಬೇಕು, ಈ ಅನುಚಿತ ನಡವಳಿಕೆಯಿಂದಾಗಿಯೆ ವಿಚಿತ್ರ ಸಮಸ್ಯೆಗಳು ಹುಟ್ಟಿಕೊಂಡಿವೆ. ಅಂದು ಸಮಸ್ಯೆಗಳಿರಲಿಲ್ಲವೆಂದಲ್ಲ. ಅವುಗಳ ರೀತಿಯೆ ಬೇರೆ. ಇವುಗಳ ರೀತಿಯೇ ಬೇರೆ. ಇಂದಿನವರೆ ಸಮಸ್ಯೆಗಳನ್ನು ಸೃಷ್ಟಿಸಿರುವರೊ ? ಅಥವಾ ಈ ಸಮಸ್ಯೆಗಳೆ ಇಂದಿನ ಜನಜೀವನವನ್ನು ರೂಪಿಸಿರುವವೊ ? ಯಾವುದು ಸತ್ಯ, ಯಾವುದು ಮಿಥ್ಯ ? ಒಂದು ಸಂಗತಿ ಮಾತ್ರ ಸತ್ಯ. ನಡೆ-ನುಡಿಯಲ್ಲಿ ಭ್ರಷ್ಟತೆ ತುಂಬಿ ತುಳುಕುತ್ತಿದೆ. ಈ ಭ್ರಷ್ಟತೆಯ ಮೋಹ ಜಾಲದಲ್ಲಿ ಸಿಕ್ಕು ಎಂಥೆಂಥವರೂ ತಮ್ಮನ್ನು ತಾವು ಕಳೆದುಕೊಂಡಿದ್ದಾರೆ.

ಅಂದು ಪ್ರತ್ಯಕ್ಷ ಬಸವಣ್ಣ ಕಂಡುಂಡು ಅನುಭವಿಸಿ ಬರೆದ ಈ ವಚನ ಇಂದಿಗೂ ಪ್ರಸ್ತುತವಾಗಿದೆ :

**ಗುರು ವಚನವಲ್ಲದೆ ಲಿಂಗವೆಂದೆನಿಸದು,**
**ಗುರು ವಚನವಲ್ಲದೆ ನಿತ್ಯವೆಂದೆನಿಸದು,**
**ಗುರು ವಚನವಲ್ಲದೆ ನೇಮವೆಂದೆನಿಸದು**
**ತಲೆಯಿಲ್ಲದ ಅಟ್ಟೆಗೆ ಪಟ್ಟವ ಕಟ್ಟುವ**
**ಉಭಯ ಭ್ರಷ್ಟರ ಮೆಚ್ಚುವನೆ ನಮ್ಮ ಕೂಡಲ ಸಂಗಮದೇವಾ ?**

**(ಬ. ವ. ೭೨)**

ಗುರುಮಾರ್ಗದರ್ಶನವಿಲ್ಲದೆ ಯಾವ ಸಾಧನೆ-ಸಿದ್ಧಿ ಸಾಧ್ಯವಿಲ್ಲ. ಒಬ್ಬ ಮಹೋನ್ನತ ವ್ಯಕ್ತಿಯ ಮಹತ್ತಿನ ಹಿಂದೆ ಒಬ್ಬ ಸಮರ್ಥ ಗುರುವಿನ ಸತ್ಪಥ ಸಲಹೆ ಇದ್ದೇ ಇರುತ್ತದೆ ! ಇಲ್ಲಿ 'ವಚನ' ಪದದ ಅರ್ಥವ್ಯಾಪ್ತಿಯನ್ನು ಗಮನಿಸಬೇಕು. ವಚನವೆಂದರೆ ಬೋಧೆ, ಅರಿವು, ಮಾರ್ಗದರ್ಶನ, ನುಡಿಗೂ ನಡೆಗೂ ಅಪಿರಳ ಅನುಬಂಧ ! ಇದನ್ನು ಮೈಗೂಡಿಸಿಕೊಂಡವನೆ ಗುರು, ಗುರುಬೋಧೆಯನ್ನು ಜೀವನದಲ್ಲಿ ಅಳವಡಿಸಿಕೊಂಡವನೆ ಶಿಷ್ಯ. ಆದರೆ ವಿವೇಕಾನಂದರಂತೆ ಗುರು ಸ್ವೀಕಾರದ ಮುನ್ನ ಸಾತ್ವಿಕ ಪರೀಕ್ಷೆ ಅಗತ್ಯ. ಇಬ್ಬರ ಮೇಳವಿದ್ದರೆ ಲಿಂಗ-ನೇಮ-ನಿತ್ಯ ಎಲ್ಲವೂ ಸ್ವಯವಾಗುವುದುಂಟು. ಈ ಮೇಳ ತಾಳಗೆಟ್ಟರೆ, ತಲೆಯಿಲ್ಲದ ಅಟ್ಟೆಗೆ ಪಟ್ಟ ಕಟ್ಟಿದಂತೆ ! ತಲೆಯಿಲ್ಲದ ಮುಂಡಕ್ಕೆ (ಅಟ್ಟೆಗೆ) ಪಟ್ಟ ಕಟ್ಟುವುದೂ ಒಂದೆ ! ಹೆಣಕ್ಕೆ ಪಟ್ಟ ಕಟ್ಟುವುದೂ ಒಂದೆ. ಇಲ್ಲಿ ತಲೆಯೆಂದರೆ ಪರಿಜ್ಞಾನ ಪರಿಣತಮತಿ. ಪರಿಜ್ಞಾನವಿಲ್ಲದ ಗುರು-ಶಿಷ್ಯರಿಂದ ಯಾರಿಗೆ ಯಾವ ಪ್ರಯೋಜನ

ವುಂಟು ? ಇಂಥ ಸಮಾಜ ವಿರೋಧ ಕ್ರಮವನ್ನಿಂದು- ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ನೋಡಬಹುದು. ಗುರು-ಶಿಷ್ಯರ ಹಿಂದೆ ಮುಂದಾಳು-ಹಿಂಬಾಲಕರ ಹಿಂದೆ ಕುತಂತ್ರ ಸ್ವಾರ್ಥ-ಹೊಂಚು ಹಾಕಿರುವ ಸಂಗತಿ ಸರ್ವರಿಗೂ ತಿಳಿದ ಮಾತು. ಈ ಇಬ್ಬರನ್ನು ಉಭಯ ಭ್ರಷ್ಟರೆಂದು ಬಸವಣ್ಣ ಕರೆದದ್ದು ಉಚಿತವಾಗಿದೆ. ಇಂಥ ಭ್ರಷ್ಟರನ್ನು ಯಾವ ಸಮಾಜವಾಗಲಿ, ದೇಶವಾಗಲಿ, ಅಷ್ಟೇ ಏಕೆ ದೇವರು ಸಹ ಮೆಚ್ಚುವುದಿಲ್ಲ. ಹೀಗೆ ಈ ವಚನ ಇಂದಿಗೂ ಪ್ರಸ್ತುತ ವಾಗಿದ್ದು, ಎಲ್ಲರಿಗೂ ಎಲ್ಲ ಕಾಲಕ್ಕೂ ಮಾರ್ಗದರ್ಶಕವಾಗಿದೆ !

ವಚನ ಬರಿ ಬುದ್ಧಿಯ ಕಸರತ್ತಲ್ಲ. ಅನುಭಾವ ಹಡೆದ ಅಮೃತ ಬಿಂದು ! ವಚನದ ಆಶಯ ಸಕಲ ಜೀವಕುಲ-ಕಲ್ಯಾಣ !! ಈ ಸದಾಶಯವನ್ನು ಇಂದಿನ ವಚನಕಾರರ ರಚನೆಯಲ್ಲಿಯೂ ಕಾಣಬಹುದು. ಇಂದಿನ ಆಗು-ಹೋಗುಗಳು ಪರಿಹಾರಕ್ಕೂ ನಿಲುಕದ ಸಂಕೀರ್ಣ ಸಮಸ್ಯೆಯಾಗಿವೆ. ಇಂಥ ಸಮಸ್ಯೆಗಳನ್ನು ಅರ್ಥವತ್ತಾಗಿ ಚಿತ್ರಿಸುತ್ತ, ಜನಕಲ್ಯಾಣದತ್ತ ಆಶಯವನ್ನು ಆಶಿಸುತ್ತ ಇಂದಿನವರು ವಚನಗಳನ್ನು ರಚಿಸುತ್ತಿದ್ದಾರೆ. ಇದು ಉಚಿತವೂ ಆಗಿದೆ. ಇಲ್ಲಿ ವಿಡಂಬನೆ, ಅಪಹಾಸ್ಯ, ವ್ಯಂಗ್ಯ -ಇವೆಲ್ಲವೂ ಪಾತ್ರವಹಿಸುತ್ತಿವೆ. ಹೀಗೆ ಇಂದಿನ ವಚನಗಳಾಗಲಿ ಬೇರೆ ಪ್ರಕಾರದ ಸಾಹಿತ್ಯವಾಗಲಿ, ಇಂದಿನ ಕಾಲಗತಿಯನ್ನು ಅನುಸರಿಸಿ ಸೃಷ್ಟಿಯಾಗುತ್ತಲಿವೆ.

ಬಸವಾದಿ ಶರಣರ, ತೋಂಟದಾರ್ಯರ, ಅಖಂಡೇಶ್ವರರ- ವಚನಗಳೆ ನಿಜವಾದ ವಚನಗಳು ಹೊರತಾಗಿ ಇಂದಿನವು ವಚನಗಳಲ್ಲ ಎನ್ನುವ ವಾದವೂ ಉಂಟು. ಅಂದು ಪಾರಮಾರ್ಥಿಕ ದರ್ಶನದತ್ತ, ಆತ್ಮೋನ್ನತಿಯತ್ತ ಗಮನ ಆ ಶರಣರದಾಗಿತ್ತು. ಆದರೆ ಅವರೇನು ಲೌಕಿಕವನ್ನು ಕಡೆಗಣಿಸಿದವರಲ್ಲ, ಲೌಕಿಕವನ್ನು ತಿದ್ದುತ್ತ ಶುದ್ಧೀಕರಿಸುತ್ತ ಅಲೌಕಿಕದತ್ತ ಅವರು ಪ್ರಾಮಾಣಿಕ ಪ್ರಯತ್ನ ಮಾಡಿರುವುದುಂಟು. ಲೌಕಿಕದ ಶುದ್ಧಿಯಲ್ಲಿಯೆ ಪಾರಮಾರ್ಥವನ್ನು ಹುಟ್ಟುಹಾಕಿದವರು ಆ ಶರಣರು. ಇಂದು ಬರಿ ಪಾರಮಾರ್ಥ ಎಂದು ಜಪಿಸುತ್ತ ಕುಳಿತರೆ ಬದುಕಿನ ಬಂಡಿ ಸಾಗುವುದು ಹೇಗೆ ? ಹೊಟ್ಟೆಗಿಲ್ಲದವರಿಗೆ ತತ್ತ್ವಜ್ಞಾನ ಹಿಡಿಸುವುದಿಲ್ಲ. ಮೊದಲು ನೆಮ್ಮದಿ, ಆಮೇಲೆ ನೀತಿಪಾಠ !

ಜನಜೀವನದ ಒಲವು ನಿಲವುಗಳಿಗೆ ಸ್ಪಂದಿಸಿ ಬಂದುದು ಸಾಹಿತ್ಯ. ಹಾಗೆ ಬಂದರೆ ಅದು ಸಾಹಿತ್ಯ. ಈ ಮಾತು ವಚನಕ್ಕೂ ಅನ್ವಯಿಸುತ್ತದೆ. ಈ ನಿಟ್ಟಿನಲ್ಲಿ ಇಪ್ಪತ್ತನೆಯ ಶತಮಾನದ ವಚನಗಳ ಒಲವು-ನಿಲವನ್ನು ನೋಡೋಣ :

**‘‘ಮರಿಯು ಮರೆತು, ಮರ್ಕಟ ಮರಮರಕೆ ಜಿಗಿದರೂ,**

**ತಾಯತಬ್ಬಿದ ಮರಿಯು ತನ್ನ ತಾ ರಕ್ಷಿಸಿಕೊಂಬುದಯ್ಯಾ !**

**ಒಡಲ ಗಿಡದಲಿ ಕರಣಂಗಳ ರೆಂಬೆ ಕೊಂಬೆಯನೇರಿ**
**ಮನವೆಂಬ ಮರ್ಕಟ ಜಿಗಿದಲ್ಲಿ**
**ಮೃಡ ನಿನ್ನ ಧೃಢವಾಗಿ ಹಿಡಿದಪ್ಪ ಮರ್ಕಟನ**
**ಮರಿಯ ಮಾಡಿ ಎನ್ನ ಬದುಕಿಸಯ್ಯಾ !''**

(ಮಹದೇವ ಬಣಕಾರರ ವಚನಗಳು - ೨೩೩)

ಈ ವಚನ ಲೌಕಿಕದ ದೃಷ್ಟಾಂತದ ಮೂಲಕ ಅಲೌಕಿಕದತ್ತ ಸಾಗುವ ಪರಿಯನ್ನು ಮನಂಬುಗುವಂತೆ ಚಿತ್ರಿಸುವಲ್ಲಿ ಸಫಲವಾಗಿದೆ. ಇಲ್ಲಿ ಬಳಸಿಕೊಂಡ ಉಪಮಾನ ಉಪಮೇಯಗಳು ಸಮರ್ಥವಾಗಿವೆ. ಆತ್ಮೋನ್ನತಿಯತ್ತ ಸಾಗುವಾಗ ನಡುವೆ, ಜಾರಿಬೀಳದಂತೆ ಮಾಡಬೇಕೆಂದು ಶಿವನಲ್ಲಿ ಜೀವಾತ್ಮ ಬೇಡಿಕೊಳ್ಳುತ್ತಿದೆ. ಶಿವನ ಮೇಲೆ ನಂಬಿಗೆಯಿರಿಸಿದ ಜೀವಾತ್ಮನಲ್ಲಿ ಆತ್ಮವಿಶ್ವಾಸ ದೃಢವಾಗಿರುತ್ತದೆ. ಮಂಗ ಚಂಚಲ ಸ್ವಭಾವದಿಂದಾಗಿ ತನ್ನ ಮರಿಯನ್ನು ಮರೆಯುವುದುಂಟು. ಆದರೆ, ಮರಿ ಆತ್ಮವಿಶ್ವಾಸದಿಂದಾಗಿ ತನ್ನನ್ನು ತಾನು ರಕ್ಷಿಸಿಕೊಳ್ಳುತ್ತದೆ. ಹಾಗೆಯೆ ಜೀವಾತ್ಮ ಪರಮಾತ್ಮನಲ್ಲಿ ನಂಬುಗೆಯಿರಿಸಿ, ಆತ್ಮವಿಶ್ವಾಸ ಪಡೆದು ತನ್ನನ್ನು ತಾನು ರಕ್ಷಿಸಿಕೊಳ್ಳಬೇಕೆಂಬ ಆಶಯ ಇಲ್ಲಿ ವ್ಯಕ್ತವಾಗಿದೆ. ಪರಮಾತ್ಮನನ್ನು ನಂಬಿದವರಲ್ಲಿ ಅಂಥ ಆತ್ಮವಿಶ್ವಾಸ ದೃಢವಾಗಿರುತ್ತದೆ! ಮರೆವಿನಿಂದ ಅರಿವಿನತ್ತ ಸಾಗಬೇಕಾದರೆ, ದಯಾಘನನ ಮೇಲೆ ನಂಬುಗೆಯೂ ಬೇಕು, ಆತ್ಮವಿಶ್ವಾಸವೂ ಬೇಕು ! ಪರಮಾತ್ಮನ ಮೇಲಿನ ನಂಬುಗೆ ಜೀವಾತ್ಮನಿಗೆ ಆತ್ಮವಿಶ್ವಾಸವಾಗಿ ಪರಿಣಮಿಸುವುದು.

**''ನೌಕರಿಯೆ ಗುರಿಯಾಗಿ ಪದವಿಯ ಪಡೆಯೆ ಬಂದರಯ್ಯ**
**ಸಂಪಾದನೆಯೆ ಗುರಿಯಾಗಿ, ಪದವಿಯ ಪಡೆಯೆ ಬಂದರಯ್ಯ**
**ಒಣ ಹೆಮ್ಮೆಯೆ ಗುರಿಯಾಗಿ, ಪದವಿಯ ಪಡೆಯೆ ಬಂದರಯ್ಯ**
**ಜ್ಞಾನವೇ ಗುರಿಯಾಗಿ, ಪದವಿಯ ಪಡೆಯೆ**
**ಬಂದವರಾರನೂ ಕಾಣೆನಯ್ಯ ಸದಾಶಿವಗುರು !"**

(ಎಸ್. ವಿ. ಪರಮೇಶ್ವರಭಟ್ಟ 'ಉಂಬರ' ೩೧-೬೧)

ಇಂದಿನ ಸಾಮಾಜಿಕ ಸ್ಥಿತಿಗತಿ, ಒಲವು-ನಿಲವು ಯಾವ ದಿಕ್ಕಿನತ್ತ ಸಾಗಿದೆ ಎಂಬುದನ್ನು ಈ ವಚನ ಮಾರ್ಮಿಕವಾಗಿ ಚಿತ್ರಿಸಿದೆ. ಪದವಿಯೆಂಬುದು ಉದರ ಪೋಷಣೆಯ, ಹಣ ಶೋಷಣೆಯ ಮಾಧ್ಯಮವಾಗಿದೆ. ಸರಳ ನಿರೂಪಣೆಯಲ್ಲಿಯೇ ಈ ವಚನದ ಮೇಲ್ಮೆ ಮೈಗೂಡಿಕೊಂಡಿದೆ. ಪರಮೇಶ್ವರ ಭಟ್ಟರು ಒಬ್ಬ ಶ್ರೇಷ್ಠ ಮಟ್ಟದ ವಚನಕಾರರು.

"ತನ್ನನ್ನು ಅಪ್ಪನೆಂದರೆ ತಂದೆಗೆ ದುಃಖ
ಡ್ಯಾಡಿ ಎಂದರೆ ಸುಮ್ಮಾನ !
ತನ್ನನ್ನು ಅವ್ವನೆಂದರೆ ತಾಯಿಗೆ ದುಃಖ
ಮಮ್ಮಿ ಎಂದರೆ ಸುಮ್ಮಾನ"

(ಎಸ್. ವ್ಹಿ. ಪರಮೇಶ್ವರಭಟ್ಟ 'ಬಸವಪಥ' ಸಂಪುಟ ೧೬)

ಇಂದಿನವರಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಮೋಹ ಬೆಳೆಯುತ್ತಿದ್ದು ಭಾರತೀಯ ಸಂಸ್ಕೃತಿ ಅಳಿಯುತ್ತಿರುವುದನ್ನು ಈ ವಚನ ಮನೆ ಮನೆಯಲ್ಲಿ ನಿತ್ಯ ನಡೆಯುವ ದೃಷ್ಟಾಂತಗಳಿಂದ ಬೆರಳೆತ್ತಿ ತೋರಿಸುತ್ತಿದೆ. ತನ್ನ ತಾಯಿಯನ್ನು ಕಡೆಗಣಿಸಿ ಅನ್ಯ ತಾಯಿಯನ್ನು ಪ್ರೀತಿಸುವಲ್ಲಿ ಅರ್ಥವೇನಿದೆ ? ಇಂದಿನವರಲ್ಲಿ ಕಂಡು ಬರುವ ಹಲವಾರು ಹುಚ್ಚುಗಳಲ್ಲಿ ಇದೊಂದು ಹುಚ್ಚು.

"ಏನು ಗಳಿಸಿದೆನೆಂಬುದು ಮುಖ್ಯವಲ್ಲ
ಹೇಗೆ ಬಳಸಿದೆನೆಂಬುದು ಮುಖ್ಯವಯ್ಯ,
ಏನ ಕೇಳಿದೆವು ಹೇಳಿದೆನೆಂಬುದು ಮುಖ್ಯವಲ್ಲ
ಹೇಗೆ ಬಾಳಿದೆನೆಂಬುದು ಮುಖ್ಯವಯ್ಯ,
ಸ್ವತಂತ್ರ ಧೀರ ಸಿದ್ಧೇಶ್ವರಾ,
ಏನ ಗೆದ್ದೆನೆಂಬುದು ಮುಖ್ಯವಲ್ಲ
ಏನಾಗಿದ್ದೇನೆಂಬುದು ಮುಖ್ಯವಯ್ಯ!"

(ಸಿದ್ಧಯ್ಯ ಪುರಾಣಿಕ –'ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯ'
ಡಾ॥ ಪ್ರೀತಿ ಶುಭಚಂದ್ರ)

ಜೀವನದಲ್ಲಿ ಮನುಷ್ಯ ಸಾಗಬೇಕಾದ ದಾರಿ ಹಲವಾರು. ಆದರೆ ಯಾವ ದಾರಿ ನಮ್ಮ ಗುರಿಗೆ ಉಪಯುಕ್ತ, ಯಾವುದು – ನಿರುಪಯುಕ್ತವೆಂಬುದನ್ನು ಈ ವಚನ ಸರಳ ಮಾತಿನಲ್ಲಿ ಮನಮುಟ್ಟುವಂತೆ ತಿಳಿಸುವಲ್ಲಿ ಯಶಸ್ವಿಯಾಗಿದೆ. ಇಲ್ಲಿ ಯಾವುದೂ ಮುಖ್ಯವಲ್ಲ, ನಾಲ್ಕು ಮಂದಿ ಮೆಚ್ಚುವಂತೆ ಲಿಂಗಮೆಚ್ಚಿ ಅಹುದಹುದೆನ್ನುವಂತೆ ನಡೆಯುವುದು ಮುಖ್ಯ. ಏನು ಗಳಿಸಿದರೇನು, ಈಗ ಹೇಗೆ ಬಾಳುತ್ತಿದ್ದೇವೆ, ನಾವು ನಿಜವಾಗಿ ಏನಾಗಿದ್ದೇವೆ ಎಂಬ ಆತ್ಮ ವಿಮರ್ಶೆ ಅಗತ್ಯ.

"ನೋಟುಗಳ ಬೆಲೆ ಇಳಿಯುತ್ತಿದೆಯಯ್ಯಾ,
ಎಲ್ಲವೂ ತುಟ್ಟಿಯಾಗುತ್ತಿದೆ;
ಮನುಜ ಮಾತ್ರ ಅಗ್ಗವಾಗುತ್ತಲಿಹನಯ್ಯಾ !
ಭೂಮ್ಯಾಕಾಶಗಳ ನಡುವಣ ಅಂತರ ಕಡಿಮೆಯಾಗುತ್ತಿದೆ
ಮನುಜ ಮನುಜರ ನಡುವಣ ಅಂತರ ಹೆಚ್ಚುತ್ತಿದೆಯಯ್ಯಾ !"

(ಸಿದ್ಧಯ್ಯ ಪುರಾಣಿಕ–'ವಚನೋದ್ಯಾನ' ೪೪೩)

ಇಂದಿನ ಸಾಮಾಜಿಕ ವಸ್ತುಸ್ಥಿತಿಯು ವಿಪರ್ಯಾಸವನ್ನು ಈ ವಚನ ಸರಳ ಭಾಷೆಯಲ್ಲಿ ಸುಂದರವಾಗಿ ಪ್ರತಿಪಾದಿಸಿದೆ. ವಚನದಲ್ಲಿ ಕವಿತ್ವ ಮುಖ್ಯವಲ್ಲ, ಅನುಭವ ಮುಖ್ಯ. ಕಾಲದ ಆಟಪಾಟವನ್ನು ಒಡಿದಿರಿಸುವ ಭಾವಚಿತ್ರವಾಗ ಬೇಕಷ್ಟೆ. ಪರಿಣಾಮ ಬೀರುವಲ್ಲಿ ಕಲಾಕೌಶಲವೂ ಪಾತ್ರವಹಿಸಬೇಕಷ್ಟೆ. ಅದನ್ನಿಲ್ಲಿ ಈ ವಚನ ಸಾಧಿಸಿ ಸಾರ್ಥಕವಾಗಿದೆ.

"ನಮ್ಮಪ್ಪ ಆ ಬಾರಿಗೆ ಬರುತ್ತಾನಾಗಿ ನಾನು
ಅಲ್ಲಿಗೆ ಬರುವುದಿಲ್ಲನೆಂದು ನನ್ನ ಗೆಳೆಯನ ಮಾತು,
ನನ್ನಪ್ಪನೇ ! ನೀನಿಲ್ಲದ ಜಾಗವಾವುದು ?
ನಿನ್ನ ಕಣ್ಣು ಮರೆಸಿ ನಾನು ಏನನೂ ಮಾಡಲಾರೆನಾಗಿ
ನಾನು ಯಾವ ಬಾರಿಗೂ ಹೋಗಲು ಸಿದ್ಧ !
ಪ್ರಭೂ, ಇದು ನನ್ನ ಮಾತು"

(ಅಮಲಿನ ವಚನಗಳು-೧೬೨)

ಇಲ್ಲಿ 'ಬಾರ' ಪದ ಮಹತ್ವದ ಪಾತ್ರ ವಹಿಸಿದೆ. ಬಾರ ಶ್ಲೇಷಯ ಪಾತ್ರ ವಹಿಸಿದಂತಿದೆ. ೧) ಸೆರೆಯ ಅಂಗಡಿ ೨) ಸ್ಥಳ ಜಾಗ -ಹೀಗೆ ಭಾಷೆ ಸರಳ ವಾದರೂ ನಿರೂಪಣೆ ಶ್ಲೇಷಾಲಂಕಾರದ ಮೂಲಕ ಅರ್ಥವನ್ನು ಸ್ಫುಟಗೊಳಿಸುವಲ್ಲಿ ಕೃತಾರ್ಥವಾಗಿದೆ. ಗೆಳೆಯ ಕುಡುಕನ ಪಾತ್ರದಲ್ಲಿ ಚಿತ್ರಣಗೊಂಡರೆ, ವಚನಕಾರರು ಕನಕದಾಸರ ಪಾತ್ರ ನಿರ್ವಹಿಸಿದ್ದಾರೆ. ಎಲ್ಲಿ ನೋಡಿದಲ್ಲಿ ಪರಮಾತ್ಮನೆ ಕಂಡು ಬರುವಾಗ ಅವನ ಕಣ್ಣು ಮರೆಸಿ ಹಣ್ಣನ್ನು ತಿನ್ನದೆ ಹೋದೆನೆಂದು ಕನಕದಾಸರು ಅಂದು ಗುರುವಿಗೆ ಹೇಳಿದ ಮಾತು ಇಲ್ಲಿಯೂ ಅನ್ವಯಿಸುತ್ತದೆ. ಒಳ್ಳೆಯದಿರಲಿ ಕೆಟ್ಟದ್ದಿರಲಿ, ಮನುಷ್ಯ ಏನು ಮಾಡಿದರೂ, ಅದು ಆ ಸರ್ವವ್ಯಾಪಿಗೆ ಕಾಣಿಸದಿರದು. ನಾವು ಮಾಡುವ ಅನಾಚಾರ ಯಾರ ಕಣ್ಣಿಗೆ ಬೀಳದಿದ್ದರೂ, ಸದಾ ಕಣ್ಣು ತೆರೆದ ಪರಮಾತ್ಮನಿಗೆ ಕಾಣದಿರುವುದೆ? ಬಹುಶಃ ಎಲ್ಲರೂ ಅಭಿರುಚಿಯನ್ನು ವ್ಯಸನಾಸಕ್ತಿಗೆ ಮಾರಿಕೊಂಡಂತಿದೆ ಇಂದಿನ ಪರಿಸರ. ಎಲ್ಲಿಯೋ ಕೆಲವರು ಪರಮಾತ್ಮನನ್ನು ವಂಚಿಸಿ ಕುಕೃತ್ಯಕ್ಕೆ ಹೇಸುವವರೂ ಇದ್ದಾರೆ. ಇಷ್ಟೊಂದು ಅರ್ಥವ್ಯಾಪ್ತಿ ಈ ವಚನಕ್ಕಿದೆ.

"ಗಾಣದ ಸುತ್ತಲೂ ತಿರುಗುವ ಕೋಣಗಳೇನು
ಬಲ್ಲವಯ್ಯ ಸಾಹಿತ್ಯ ಸಂಸ್ಕೃತಿಯ ?
ಹಸುಳೆಯ ಹಾಲಿನಲ್ಲಿ ವಿಷವ ಬೆರೆಸುವ
ವಣಿಜರೇನು ಬಲ್ಲರಯ್ಯ ದಯಾ ಧರ್ಮವ ?
ಕಾಸಿನ ಚಕ್ರದಲಿ ಮುಳುಗೇಳುವ ರಣಹದ್ದುಗಳೇನು
ಬಲ್ಲವಯ್ಯ ಮಾನವತೆಯ ಶ್ರೀಗುರು ಸಿದ್ಧಲಿಂಗೇಶ್ವರಾ ?'

ಸಾಮಾಜಿಕ, ರಾಜಕೀಯ ವ್ಯವಹಾರದಲ್ಲಿ ನಡವಳಿಕೆಯಲ್ಲಿ ಅಂದು ಕಂಡು ಬಂದ ನೀತಿ ಪ್ರಾಮಾಣಿಕತೆ ಇಂದು ಎಲ್ಲೆಲ್ಲಿಯೂ ಕಂಡು ಬರುವುದೇ ಇಲ್ಲ. ಜನತೆಯಲ್ಲಿ ಅಧಿಕಾರಿಗಳಲ್ಲಿ ಮಂತ್ರಿ ಮಾನ್ಯರಲ್ಲಿ ಸ್ವಾರ್ಥ, ಲೋಭ, ದುರಾಶೆ ತುಂಬಿರುವುದರಿಂದ ದೇಶದ ಗತಿ ಹದಗೆಟ್ಟಿದೆ. ಜನಜೀವನದಲ್ಲಿ ಅಸಮಾಧಾನ ಹೊಗೆಯಾಡುತ್ತಲಿದೆ ! ಶ್ರೀ ಅನ್ನದಾನಯ್ಯ ಪುರಾಣಿಕ ಅವರು ಈ ವಚನದಲ್ಲಿ ಇಂದಿನ ದುರವಸ್ಥೆಯನ್ನು ಮನಂಬುಗುವಂತೆ ಚಿತ್ರಿಸಿದ್ದಾರೆ. ಈ ವಚನ ಕಾಲಗತಿಗೆ ಹಿಡಿದ ಕನ್ನಡಿಯಾಗಿದೆ !

**"ಚುನಾವಣೆಯ ಮದುವೆಯಲಿ**
**ಮತದಾರ ಮದುವಣಿಗನಾದರೆ,**
**ಉಮೇದುವಾರನೆ ಮದುಮಗಳು !**
**ಶಾಸಕ ಸಚಿವರು ಅತ್ತೀ ಮಾವರಾದರೆ,**
**ರಾಜಕಾರಣಿಗಳು ಅಡ್ಡ ನಿಬ್ಬಣಿಗರು !**
**ಮತದಾನವೆಂಬ ತಾಳಿ ಕಟ್ಟುವವರೆಗೆ**
**ಹಳೆ ನಾಯಿಗಳಿಗೂ ಬೇಡವೆಂದ ಕುಮಾರ ಕಕ್ಕಯ್ಯಾ !"**

(ಕುಮಾರ ಕಕ್ಕಯ್ಯನ ವಚನಗಳು)

ಪ್ರತಿಮೆಯ ಮುಖದಲ್ಲಿ ಅಭಿವ್ಯಕ್ತವಾದ ಈ ವಚನ ಚುನಾವಣೆಯ ಹಗರಣವನ್ನು ಚಿತ್ರಿಸುವಲ್ಲಿ ಕಲಾತ್ಮಕವಾಗಿದೆ. ವ್ಯಂಗ್ಯ ವಿಡಂಬನೆ ವಹಿಸಿದ ಪಾತ್ರ ಅನನ್ಯ ! ಇಂದಿನ ರಾಜಕೀಯ ಹಳೆಯ ನಾಯಿಗೂ ಬೇಡವೆನ್ನುವುದು ಬಿರುನುಡಿಯಾದರೂ ಸರಿನುಡಿಯಾಗಿದೆ.

**"ಹೌದಪ್ಪನ ಚಾವಡಿಯಲ್ಲಿ ಹೌದಪ್ಪಗಳು**
**ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪಗಳು ಅಧಿಕವಯ್ಯಾ !**
**ಬಲ್ಲಪ್ಪಗಳೆ ಅಲ್ಲದಾಟದ ಚಲ್ಲಾಟದಲ್ಲಿ ಹಲ್ಲುಕಿರಿದು,**
**ಜೊಲ್ಲು ಸುರಿಸುತ್ತ ಬದಕುವ ಸಮಯ ಸಾಧಕರ ಹಿಡಿತಂದು**
**ಗಲ್ಲಕ್ಕೆ ಗುಲ್ಲು ಒತ್ತಬೇಕೆಂದನಂಬಿಗರಕುಮಾರ ಚೌಡಯ್ಯಾ !"**

('ಬಸವ ಬೆಳಗು' ಸಂಪುಟ ೯ ಸಂ. ೧—ಎಂ. ಬಿ. ಹಾದಿಮನಿ)

ಶ್ರೀ ಎಂ. ಬಿ. ಹಾದಿಮನಿಯವರು ಆಧುನಿಕ ವಚನಕಾರರಲ್ಲಿ ಒಬ್ಬರು. ಅಲ್ಲಿ ಲಾಭವೊ— ಆಚೆ ಮನಿ ಪವ್, ಇಲ್ಲಿ ಲಾಭವೊ, ಈಚೆ ಮನಿ ಪವ್–ಹೀಗೆ ಅರಿವಿಲ್ಲದ ಮಕ್ಕಳ ಆಟವನ್ನು ಅರಿತವರೂ ಆಡುತ್ತಿರುವುದು ತಮಾಷೆಯಾಗಿದೆ. ಇಲ್ಲಿಯ 'ಅಲ್ಲಪ್ಪಗಳು' 'ಬಲ್ಲಪ್ಪಗಳು' 'ಅಲ್ಲದಾಟ' 'ಚಲ್ಲಾಟ'— ಈ ದೇಸಿ ಪದಗಳ ಸೊಗಡು ಆ ಮೂಲಕ ಹೊರಹೊಮ್ಮುವ ಅರ್ಥವಂತಿಕೆ ಈ ವಚನದ ಆಶಯವನ್ನು ಅರ್ಥವತ್ತಾಗಿ ಅಭಿವ್ಯಕ್ತಗೊಳಿಸಿದೆ !

"ರಾಜಕಾರಣದಲ್ಲಿ ಒಂದುಂಟು ಒಂದಿಲ್ಲ
ಮಾತು ಉಂಟು, ಜ್ಯೋತಿ ಇಲ್ಲ !
ಎದೆಯುಂಟು ಹೃದಯವಿಲ್ಲ !
ದಾನವುಂಟು ಧರ್ಮವಿಲ್ಲ, ಸ್ವಯವುಂಟು ದಯವಿಲ್ಲ,
ಗುರಿಯುಂಟು ಗುರುವಿಲ್ಲ, ಚಲನವುಂಟು ಚಾರಿತ್ರ್ಯವಿಲ್ಲ !
ಆಚರಣೆಗಳುಂಟು ಆಚಾರವಿಲ್ಲ, ತಂತ್ರಗಳುಂಟು ಸ್ವಾತಂತ್ರ್ಯವಿಲ್ಲ,
ಪ್ರತಿಷ್ಠೆಯುಂಟು ನಿಷ್ಠೆಯಿಲ್ಲ, ಪ್ರಮಾಣವುಂಟು ಪರಿಣಾಮವಿಲ್ಲ,
ಇಂತಪ್ಪ ಹತ್ತು ಹೆಡೆಯ ಹಾವ ಮೆಟ್ಟಿ
ಮೇಲೆದ್ದ ನಿನ್ನ ಕಲ್ಯಾಣ ರಾಜ್ಯದ
ಅಕಾಲ ಮೃತ್ಯುವಿಗೆ ಇದೆ ರಾಜ್ಯಕಾರಣ !"
(ಬಿ. ಆರ್. ಪೋಲೀಸಪಾಟೀಲ – ಪ್ರಕಟವಾಗಲಿರುವ ಕೃತಿಯಿಂದ)

ರಾಜಕಾರಣ, ಧಾರ್ಮಿಕ ಕಾರ್ಯ, ಸಾಮಾಜಿಕ ಕಾರ್ಯ, ಯಾವುದೇ ಇರಲಿ, ಈ ರಂಗಗಳಲ್ಲಿ ಪೋಷಕವಾಗಬಹುದಾದ ಕಾರ್ಯತತ್ಪರತೆ ಇರುವುದಿಲ್ಲ. ಬೇಡವಾದುದು ಇದ್ದು ಬೇಕಾದುದು ಇರುವುದಿಲ್ಲ. ಆಡಂಬರ ಬಡಿವಾರವೆ ವೇದಿಕೆಯ ಮೇಲೆ ವಿಜೃಂಭಿಸುತ್ತದೆ. ಆದರೆ ಸತ್‌ಪರಿಣಾಮ ಶೂನ್ಯ. ಮಾತು ಇದ್ದು ಅರ್ಥವಿಲ್ಲ. ಕೃತಿಗಳಿಂದ ಕಾರಣ ವ್ಯರ್ಥ! ಹೃದಯವಂತಿಕೆ, ಧರ್ಮ, ದಯೆ, ಚಾರಿತ್ರ್ಯಶುದ್ಧಿ –ಮುಂತಾದುವು ಕಲ್ಯಾಣ ರಾಜ್ಯದ ಪರಿಕರಗಳು. ಆದರೆ, ಇದಕ್ಕೆ ವ್ಯತಿರಿಕ್ತವಾದ ನಿಷ್ಕ್ರಿಯೆ, ನಿರ್ದಯೆ, ಚಾರಿತ್ರ್ಯಹೀನತೆ ಮೊದಲಾದ ವಿಷಮತೆಗಳು ಸಮಾಜದಲ್ಲಿ ಹಾಸುಹೊಕ್ಕಾಗಿವೆ. ಇವುಗಳನ್ನಿಲ್ಲಿ ಈ ವಚನಕಾರರು ಹಾವಿನ ಹೆಡೆಗಳಿಗೆ ಹೋಲಿಸಿದ್ದು. ಇವುಗಳನ್ನು ಮೆಟ್ಟಿ ಮರ್ದನ ಮಾಡಿದಾಗ ಮಾತ್ರ ಕಲ್ಯಾಣ ರಾಜ್ಯೋದಯ ಸಾಧ್ಯ. ಈ ಸುಂದರ ಪ್ರತಿಮೆಯ ಮೂಲಕ ಈ ವಚನ, ಕಾಲಕ್ಕೆ ಪರಿಣಾಮಕಾರಿಯಾದ ಧ್ವನಿಯಾಗಿದೆ !

**"ಹುಡುಗತನದ ಹುಡುಗಾಟಕ್ಕೆ ಬಲಿಯಾದ ಮೂಕ ಪಶುಗಳೆ
ನಿಮ್ಮ ಆರ್ತ ಕೂಗನ್ನು ತುಂಬಿಸಿಕೊಳ್ಳಲು ಈ ಹೃದಯಕ್ಕೆ ಸಾಲದು!
ರಕ್ಕಸರ ಪೈಶಾಚಿಕ ಪಿಪಾಸೆಗೆ ಸಿಕ್ಕು ಸೀಗುರಿಯಾಗಿ
ವಿಲಿವಿಲಿ ಒದ್ದಾಡುವ ತಾಯಿ ಕುಲವೆ
ನಿಮ್ಮನ್ನು ಪಾರುಮಾಡಲು ಈ ನೌಕರನ ಮುಷ್ಟಿಗೆ ಆಗದು !
ಬೀದಿ ಭಿಕಾರಿಗಳಾಗಿ ಅಂಡಲೆವ ಭಿಕ್ಷುಕ ಕುಲವೆ
ಈ ಬಡವನ ತುತ್ತು ರೊಟ್ಟಿಯಿಂದ ನಿಮ್ಮ ಹಸಿವೆ ಹಿಂಗದು !
ತತ್ತ್ವಕ್ಕಾಗಿ ಬಾಳಿ ಊದುಬತ್ತಿಯ ತೆರದಿ ಸುಟ್ಟು
ಸಣ್ಣಾಗುವ ಸಂಗಾತಿಗಳೆ,**

ಈ ದುರ್ಬಲ ಗೆಳೆಯನಿಂದ ನಿಮ್ಮ ಬಯಕೆ ಈಡೇರದು !
ನೀವು ಅನಂತ, ನಾನು ಅಂತ ! ಕೊರಗು ಕೇಳಿ ಕೊರಗುವೆ,
ಹಸಿವು ಕಂಡು ಮರುಗುವೆ !
ಈ ಮೂಕ ಪಶುವಿನ ಮೊರೆಯ ಕೇಳಿ ಯುಗದ ಕಳವಳ
ಕೊನೆಗಾಣಿಸೆಂಬೆ
ತಾಯ್ಗರುಳಿನ ಅನಾಥರ ತಂದೆ ಶ್ರೀ ಸಂಗಮನಾಥನಲ್ಲಿ !"
(ಸಂಗಮೇಶ ಹೊಸಮನಿ – 'ವಚನತೀರ್ಥ' ವಚನ ೪೪೦)

ಕರುಳ ಹಿಂಡುವಂಥ ಇಂದಿನ ಸ್ಥಿತಿಗೆ ಯಥಾರ್ಥ ಚಿತ್ರ —ಈ ವಚನದಲ್ಲಿ ಮರ್ಮಕ್ಕೆ ಮುಟ್ಟುವಂತೆ ಮೂಡಿಬಂದಿದೆ. ಕವಿ ಅನಧಿಕೃತ ಶಾಸಕ, ಆದರೆ, ಅಧಿಕೃತ ಶಾಸನಾಧಿಕಾರ ಅವನಿಗಿಲ್ಲ. ಪಾಪ ! ಮರುಗುವುದೊಂದೆ ಅವನ ಕರ್ಮ. ಕವಿಯಂಥ ಹೃದಯವಂತಿಕೆಯ ಜೀವಿಗಳ ಅಸಹಾಯಕತೆಯ ಕರುಣರಸದ ಸತ್ಯ ಕಥೆ ಇದಾಗಿದೆ. ಕವಿ ಕಲ್ಲಿನಲ್ಲಿ ಜೀವ ತುಂಬಬಲ್ಲ. ಆದರೆ, ಮನುಷ್ಯನಾಗಿ ಮೂಕ ದುರ್ಬಲರಿಗಾಗಿ ಕವಿ ಹೊಸಮನಿಯವರು ಸಂಗಮನಾಥನಲ್ಲಿ ಮೊರೆಯಿಡುವುದನ್ನು ಬಿಟ್ಟು ಮತ್ತೇನು ಮಾಡಬಲ್ಲರು !

"ಶರೀರದ ಪ್ರಯೋಜನ
ಪರಹಿತಾರ್ಥಗೈದ ಪ್ರಮಾಣದಿಂದಲ್ಲದೆ
ಸೈಯ ಗಾತ್ರದಿಂದಲ್ಲ
ಸಿರಿವಂತಿಕೆಯ ಪ್ರಯೋಜನ
ಆಪತ್ತಿಗೊದಗಿದ ಪ್ರಮಾಣದಿಂದಲ್ಲದೆ
ವೈಭವಾಡಂಬರದ ಬುಡುಬುಡಿಕೆಯಿಂದಲ್ಲ !
ಪಾಂಡಿತ್ಯದ ಪ್ರಯೋಜನ
ಜ್ಞಾನ ದಾಸೋಹಗೈದ ಪರಿಣಾಮದಿಂದಲ್ಲದೆ
ಪಾಂಡಿತ್ಯ ಪ್ರದರ್ಶನದ ಮೋಡಿಯಿಂದಲ್ಲ
ಭೂಮಿ ಸೀಮೆಯ ಪ್ರಯೋಜನ
ಹಸಿದ ಹೊಟ್ಟೆಯ ತಣಿಸಿದ ಪ್ರಮಾಣದಿಂದಲ್ಲದೆ
ತುಂಬಿ ತುಳುಕಿದ ಕಣಜದಿಂದಲ್ಲ
ಪೀಠಾಧಿಕಾರದ ಪ್ರಯೋಜನ
ಲೋಕೋದ್ಧಾರ ಗೈದ ಅಂತಃಸಾಕ್ಷಿಯಿಲ್ಲದೆ
ಪುರಾತನ ಕಾಲದ ಪರಾಕಿನಿಂದಲ್ಲ !

ಬಸವಗುರು ಶರಣಬಸವ ತಂದೆಯು ಪ್ರಾಜಿಸಿದ ಪ್ರಯೋಜನ
ತ್ರಿಕರಣ ಶುದ್ಧಿಯಿಂದ ಗೈದ ದಾಸೋಹದಿಂದಲ್ಲದೆ
ಷೋಡಶೋಪಚಾರದ ಆರಾಧನೆಯಿಂದಲ್ಲ !!''
(ಬ. ಗಿ. ಯಲ್ಲಟ್ಟಿ— 'ಬಿಂಬ' ಪುಟ ೮೦, ವಚನ ೫೩)

ಮನುಷ್ಯ ಪರಮಾತ್ಮನಿಂದ ಪಡೆದಂಥ ವಸ್ತುಗಳು ಬಹಳ. ಅವುಗಳನ್ನೆಲ್ಲ ಆತ ವರವನ್ನಾಗಿ ಪರಿಗಣಿಸಬೇಕಲ್ಲದೆ ಸಾರ್ಜಿತ ಗಳಿಕೆಯೆಂದಲ್ಲ. ಈ ದೃಷ್ಟಿಯಿಂದ ತಾನು ಪಡೆದುಕೊಂಡ ವಸ್ತುವನ್ನಾಗಲಿ, ಶಕ್ತಿಯನ್ನಾಗಲಿ ತನಗಾಗಿ ಮಾತ್ರ ಉಪಯೋಗಿಸುವುದಷ್ಟೇ ಗುರಿಯಾಗಿರಬಾರದು, ಪರಹಿತಾರ್ಥಕ್ಕೂ ಉಪಯೋಗವಾಗುವ ನಿಲುವು ತಾಳಬೇಕು.

ಶರೀರ, ಸಿರಿವಂತಿಕೆ, ಪಾಂಡಿತ್ಯ, ಭೂಮಿ, ಪೀಠಾಧಿಕಾರ, ಪೂಜೆ –ಮುಂತಾದುವು ಪರಹಿತಾರ್ಥಕ್ಕಾಗಿ ವಿನಿಯೋಗವಾದಲ್ಲಿ ಪ್ರಯೋಜನವುಂಟು. ಆದರೆ, ಮೈಯ ಗಾತ್ರ, ಒಣ ಆಡಂಬರ, ಪಾಂಡಿತ್ಯ ಪ್ರದರ್ಶನ, ಕಣಜ, ಜೈಪರಾಕು, ಷೋಡಶೋಪಚಾರ ಇವುಗಳಿಂದ ಸಾರ್ಥಕವೆನಿಸಲಾರವು. ಪ್ರಯೋಜನವೆಂದರೆ, ಸದುಪಯೋಗ– ತನಗೂ ಲೋಕಕ್ಕೂ !

ಈ ವಚನದಲ್ಲಿ ಲೌಕಿಕಾರ್ಥವನ್ನು ಸದುಪಯೋಗಪಡಿಸಿಕೊಂಡು ಪಾರಮಾರ್ಥವನ್ನು ಸಾಧಿಸಿಕೊಳ್ಳಬೇಕೆಂಬ ವಿಚಾರ ಎಲ್ಲ ಕಾಲಕ್ಕೂ ಪ್ರಸ್ತುತವಾಗಿದೆ.

''ಬೇರು ಕೆಸರಲ್ಲಿ ಕಾಲೂರಿದ ಮೇಲಲ್ಲವೆ
ಹೂ–ಹಣ್ಣು ತಳೆದು ಗಿಡವು ನಳನಳಿಸುವುದು ?
ತಳಪಾಯ ಭಾರಹೊತ್ತ ಮೇಲಲ್ಲವೆ
ಗುಡಿ ಗೋಪುರ ಮಂದಿರ ಭದ್ರವಾಗಿ ನಿಂದು ಕಂಗೊಳಿಸುವುದು ?
ಕಾರ್ಮಿಕರು ಅವಿಶ್ರಾಂತವಾಗಿ ದುಡಿದ ಮೇಲಲ್ಲವೆ
ಗಿರಣಿ ಕಾರ್ಖಾನೆ ಕಾರ್ಯ ನಿರ್ವಹಿಸುವುದು ?
ಬೇರಿಂಗೆ ನೀರೆರೆಯದಿದ್ದರೆ
ಗಿಡ ಬದುಕದೆಂಬ ಬುದ್ಧಿ– ನೆಟ್ಟ ಧಣಿಗೆ ಬಾರದೇಕಯ್ಯ ?
ತಳಪಾಯವ ಭದ್ರಗೊಳಿಸದಿದ್ದರೆ
ಗುಡಿ ಗೋಪುರ ಕುಸಿಯಬಹುದೆಂಬ ಅರಿವು
ಶಿಲ್ಪಿಗೇಕೆ ಮೂಡದಯ್ಯ ?
ದುಡಿವ ಹೊಟ್ಟೆ ಶಾಂತವಾಗದಿದ್ದರೆ
ಅಸಂತೋಷ ಕಿಚ್ಚಾಗುವುದೆಂಬ ವಿಚಾರ
ಒಡೆಯನಿಗೇಕೆ ಹೊಳೆಯದಯ್ಯ ?

**ಮೂಲವ ಕಡೆಗಣಿಸಿ ಮೇಲಣಕ್ಕೆ ಮಣೆಹಾಕುವ**
**ಲೋಕದ ವಿಪರೀತಕ್ಕೆ ನಗುವನಯ್ಯ ನಾನು**
**ಬಸವಗುರು ಶರಣಬಸವ ತಂದೆ ಕೇಳಯ್ಯ !!''**

(ಬ. ಗಿ. ಯಲ್ಲಟ್ಟಿ— 'ಬಿಂಬ' ಪುಟ ೪೭, ವಚನ ೧)

ಸಂಪನ್ಮೂಲಗಳೆಲ್ಲ ಸಂಪದ್ಭರಿತವಾಗಲು ಶ್ರಮದಾನ ಅಗತ್ಯವಿದೆ. ಮಂದಿರ, ಮಹಲು ಭದ್ರವಾಗಿ ನಿಲ್ಲಬೇಕಾದರೆ ಅಡಿಪಾಯ ಭದ್ರವಾಗಬೇಕು. ಗಿಡ, ಹೂವು, ಹಣ್ಣುಗಳಿಂದ ಸಮೃದ್ಧವಾಗಬೇಕಾದರೆ ಬೇರಿಗೆ ನೀರೆರೆಯಬೇಕು. ಕಾರ್ಖಾನೆ ಕಾರ್ಯೋನ್ಮುಖವಾಗಬೇಕಾದರೆ ದುಡಿವ ಕಾರ್ಮಿಕರ ಹೊಟ್ಟೆ ನೆತ್ತಿ ಶಾಂತವಾಗಿರಬೇಕು. ಭಾರ ಹೊತ್ತವರನ್ನು ಕಡೆಗಣಿಸಿ. ಹೆಗಲವೇರಿದವರನ್ನು ಹೊಗಳಿ ಪರಾಕು ಹೇಳುತ್ತ ಹೋದರೆ, ಸಮಾಜದಲ್ಲಿ ಅಶಾಂತಿ ಹೊತ್ತಿ ಕಿಚ್ಚಾಗಿ ಎಲ್ಲವನ್ನೂ ಆಹುತಿ ತೆಗೆದುಕೊಳ್ಳದೆ ಇರಲಾರದು. ಆದ್ದರಿಂದ ಮೇಲಿನವರಿಗೆ ಮೇಲಣಕ್ಕೆ ಅನವಶ್ಯಕ ಆದ್ಯತೆ ಕೊಡದೆ ಕೆಳಗಿನವರ ಸುಖದುಃಖದತ್ತ ಗಮನ ಹರಿಸುವುದು ಅಗತ್ಯವಾಗಿದೆ. ಇದನ್ನು ಮನದಂದು ಮುಖಂಡರು, ಸರಕಾರವು ದುಡಿವ ಜೀವಿಗಳ ಬದುಕು ಸಮಾಧಾನಕರವಾಗುವಂತೆ ನೋಡಿಕೊಳ್ಳುವುದನ್ನು ಪಾಲಿಸಬೇಕು. ಇಂದಿನ ದೇಶದಲ್ಲಿಯ ಕ್ಷೋಭೆ ದೂರವಾಗಬೇಕಾದರೆ ಇದೊಂದೇ ದಾರಿ ! ದೇಶ ಭದ್ರವಾಗಬೇಕಾದರೆ ಸಮಾಜ ಸ್ವಾಸ್ಥ್ಯದಲ್ಲಿ ನೆಲೆಸಬೇಕಾದರೆ ಭಾರಹೊತ್ತ ಜೀವಿಗಳು ಸ್ವಾಸ್ಥ್ಯದಲ್ಲಿ ಬದುಕಬೇಕು. ಈ ವಚನ ಇಂದಿನ ಸಮಾಜ ತಳೆದ ಧೋರಣೆಯ ಲೋಪ-ದೋಷಗಳನ್ನು ಸೂಕ್ತ ದೃಷ್ಟಾಂತಗಳ ಮೂಲಕ ಮನಂಬುಗುವಂತೆ ಎತ್ತಿ ತೋರಿಸಲಾಗಿದೆ.

ಅಂದಿನ ಮತ್ತು ಇಂದಿನ ವಚನಗಳಲ್ಲಿ ಅಂತರವಿರುವುದು- ತಂತ್ರದಲ್ಲಿ ಮತ್ತು ವಿಷಯದಲ್ಲಿ ಹಾಗು ನಿರೂಪಣೆಯಲ್ಲಿ, ಎರಡರ ಆಶಯ ಒಂದೆ- ಲೋಕಕಲ್ಯಾಣ ! ಜನಜೀವನದಲ್ಲಿಯ ಏರುಪೇರನ್ನು, ಅಸಮಾನತೆಯನ್ನು ಆಮೂಲಾಗ್ರವಾಗಿ ಕಿತ್ತೆಸೆದು, ಸಮಾನತೆಯ ಭೂಮಿಕೆಯ ಮೇಲೆ ಹೊಸ ಸಮಾಜ ವೃಕ್ಷವನ್ನು ನೆಟ್ಟು ಫಲವತ್ತಾಗಿ ಮಾಡುವ ಧೋರಣೆ ಬಸವಾದಿ ಶರಣರದಾಗಿತ್ತು. ಅಂತರಂಗವನ್ನು ಶುದ್ಧೀಕರಿಸುವುದು ಅಧ್ಯಾತ್ಮವನ್ನು ಬೆಳೆಸುವುದು ಮಾತ್ರ ಅವರ ಆಶಯವಾಗಿರಲಿಲ್ಲ. ಹಾಗಾಗಿದ್ದರೆ ಅಂದು ಸಮಗ್ರ ಕ್ರಾಂತಿಯಾಗುತ್ತಿರಲಿಲ್ಲ. ಬಹಿರಂಗವನ್ನು ಶುದ್ಧೀಕರಿಸುವುದೂ ಅವರ ಧೋರಣೆಯಾಗಿತ್ತು. ಒಳಗಿನ ಭಾಂಡ ಹಸನಾಗಿರುವಂತೆ ಹೊರಗಿನ ಭಾಗವೂ ಹಸನಾಗಿರಬೇಕು. ಒಳಗು ಹೊರಗು ಸಾಮಾಜಿಕತೆ, ಪಾರಮಾರ್ಥಿಕತೆ- ಎರಡರನ್ನೂ ಸಮಾನವಾಗಿ ಪರಿಗಣಿಸದವರು ಅವರು. ಸಾಮಾಜಿಕತೆಗೆ ಅಧ್ಯಾತ್ಮದ ಒಪ್ಪುಕೊಡುವುದು ಅಧ್ಯಾತ್ಮ ಸಾಮಾಜಿಕತೆಯನ್ನು ಅಪ್ಪಿಕೊಳ್ಳುವಂತೆ ಮಾಡುವುದು

ಅವರ ತುಡಿತವಾಗಿತ್ತು. ಈ ಉದ್ದೇಶಕ್ಕಾಗಿ ಅಂದಿನ ವಚನಕಾರರು ಷಟ್‌ಸ್ಥಲವನ್ನು ಮಾಧ್ಯಮವನ್ನಾಗಿ ಮಾಡಿಕೊಂಡರು. ಇದು ಅನುಷ್ಠಾನದಲ್ಲಿ ಒರುವಂತೆ ಸ್ವತಃ ಹಾಗೆ ತಮ್ಮ ಬದುಕನ್ನು ಸಾಗಿಸಿದರು. ಬರೆಯುವುದಕ್ಕಿಂತ ಅವರು ಪ್ರತ್ಯಕ್ಷ ಆಚರಿಸಿದ ಬದುಕು ಬೆಲೆಯುಳ್ಳದ್ದಾಗಿದೆ. ಆದ್ದರಿಂದ ಅಷ್ಟಾವರಣ, ಪಂಚಾಚಾರ ವನ್ನೊಳಗೊಂಡ ಷಟ್‌ಸ್ಥಲ ಮಾರ್ಗ– ಸಾಮಾಜಿಕತೆಗೂ ಪಾರಮಾರ್ಥಕ್ಕೂ ಪರುಷವಾಗಿ ಪರಿಣಮಿಸುವಂತಾಯಿತು !

ಅಷ್ಟೇ ಅಲ್ಲಿ, ಷಟ್‌ಸ್ಥಲವೇ ಅಂದಿನ ವಚನಕಾರರ ಕ್ರಾಂತಿಯ ಉಸಿರಾಯಿತು ! ಯಾರ ಪುನರುಜ್ಜೀವನಕ್ಕಾಗಿ ವಚನ ಸೃಷ್ಟಿಯಾಯಿತೊ, ಅದು ಅಂಥವರಿಗೆ ಅರ್ಥ ವಾಗಬೇಕು, ಅವರೂ ಅಂಥ ವಚನ ರಚಿಸಬೇಕು, ಕ್ರಾಂತಿಯ ಮುಂಚೂಣಿಯಲ್ಲಿ ನಿಲ್ಲಬೇಕು –ಇದು ಆ ಶರಣರ ಉದ್ದೇಶವಾಗಿತ್ತು. ಅದಕ್ಕಾಗಿ ಅವರು ಪಂಡಿತ ಭಾಷೆಯನ್ನು ಬಿಟ್ಟು ಜನರಾಡುವ ಭಾಷೆಯಲ್ಲಿ ವಚನಗಳನ್ನು ಹುಟ್ಟುಹಾಕಿದರು. ಅವರ ವಚನವೆಂದರೆ ಕ್ರಾಂತಿಯ ಉಸಿರು –ಮೂಲೆಗುಂಪಾದವರು ಮೇಲೆದ್ದು ಮುಖವೆತ್ತಿ ನಿಲ್ಲುವ ಉಸಿರು. ಅಂದಿನ ಶರಣರದು ನಿವೃತ್ತಿ ಮಾರ್ಗವಲ್ಲ, ಪ್ರವತ್ತಿ ಮಾರ್ಗ ! ಅಸ್ತಿ, ಸ್ವಸ್ತಿ, ಊರ್ಧ್ವಗತಿ ! ಊರ್ಧ್ವಗತಿಯೆಂದರೆ ಮುಕ್ತಸ್ವಾತಂತ್ರ್ಯ– ಸಾತ್ವಿಕ ಬದುಕಿನಲ್ಲಿ.

೨೦ನೆಯ ಶತಮಾನದ ವಚನಗಳು ಸಕಲರ ಸ್ವಾತಂತ್ರ್ಯಕ್ಕಾಗಿ ಸೃಷ್ಟಿಯಾಗು ತ್ತಿವೆ. ಅಂದಿನ ವಚನಗಳದು ನೇರ ನಿರೂಪಣೆಯಾಗಿದ್ದರೆ, ಇಂದಿನ ವಚನಗಳದು ವ್ಯಂಗ್ಯ–ವಿಡಂಬನೆಯಾಗಿದೆ. ಹಾಸ್ಯವೂ ವಿಡಂಬನೆಯ ಜೊತೆ ಕೈ ಕೂಡಿಸಿದಂತಿದೆ· ವಿಡಂಬನೆಯೆ ಆಧುನಿಕ ವಚನಗಳ ಜೀವಾಳ. ಅಂದಿನ ವಚನಗಳಲ್ಲಿ ಶಾಂತರಸ ಪ್ರಧಾನ ಪಾತ್ರ ವಹಿಸಿದೆ. ಶರಣರ ಭಾಷೆಯಲ್ಲಿ ಹೇಳಬೇಕೆಂದರೆ ನಿರಾಳರಸ ! ಇಂದಿನ ವಚನಗಳಲ್ಲಿ ಬೀಭತ್ಸ, ಹಾಸ್ಯರಸ ಮುಖ್ಯವಾಗಿದೆ. ಅಂದಿನ ಅಂಬಿಗರ ಚೌಡಯ್ಯನಂಥವರ ವಚನಗಳಲ್ಲಿ ಈ ಬೀಭತ್ಸರಸ ವಿಜೃಂಭಿಸಿದಂತಿದೆ. ಅಂತೂ ಇಬ್ಬರ ಆಶಯವು ಒಂದೆ – ಸ್ಫುಟವಾಗಿ ಅಭಿವ್ಯಕ್ತವಾಗಬೇಕು, ಪರಿಣಾಮ ಖಚಿತ ವಾಗಬೇಕು. ಅಂದಿನ ವಚನಗಳನ್ನು ಬಹುಶಃ ಎಲ್ಲರೂ ಓದಿ ಕೇಳಿ ಅರಿತವರಾದು ದರಿಂದ, ಅವುಗಳನ್ನು ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉಲ್ಲೇಖಿಸಿಲ್ಲ. ಇಂದಿನ ವಚನ ಗಳ ಮೋಡಿ ತಿಳಿಯಲೆಂದು ಹೆಚ್ಚಿಗೆ ಉಲ್ಲೇಖಿಸಲಾಗಿದೆ. ಆದರೂ ಬಹಳಷ್ಟು ಆಧುನಿಕ ವಚನಕಾರರ ವಚನಗಳನ್ನು ಸ್ಥಳಾವಕಾಶಕ್ಕೆ ಎಡೆಯಿಲ್ಲದ್ದರಿಂದ ಉದಾ ಹರಿಸಿಲ್ಲ. ಅಂಥವರ ಕ್ಷಮೆ ಕೋರುತ್ತೇನೆ.

# ೨೦.

# ಭಾವ ಬಯಲು - ಮಹಾಂತ ಜೋಳಿಗೆ

"ನಾವು ಸ್ವಾಮಿಗಳು ಇಲ್ಲಿಯವರೆಗೆ ನಿಮ್ಮಂಥ ಭಕ್ತರಿಂದ ಪಾದಪೂಜೆ ಮಾಡಿಸಿಕೊಳ್ಳುತ್ತ ಬಂದಿದ್ದೇವೆ. ಅದು ನಮಗಿಂದು ಸಾಕಾಗಿದೆ. ನಾವಿನ್ನು ನಿಮ್ಮ ಪಾದಪೂಜೆ ಮಾಡುವುದನ್ನು ಕಲಿಯಬೇಕಾಗಿದೆ." ಈ ಮಾತು ಕೇಳಿ ಪುಳಕಾಂಕುರ ವಾಯಿತೆನಗೆ. ಈ ಮಾತು ಹೇಳಿದವರು ಬೇರೆ ಯಾರೂ ಅಲ್ಲ. ಚಿತ್ರದುರ್ಗ ಶ್ರೀ ವಿಜಯ ಮಹಾಂತೇಶ್ವರ ಪೀಠದ ಪೂಜ್ಯ ಮಹಾಂತಸ್ವಾಮಿಗಳವರು.

ಅಂದು ದಿ. ೨೮-೮-೮೯ ಸೋಮವಾರ ಮುಂಜಾವು ಮೈಕೊಡವಿಕೊಂಡು ಮಧ್ಯಾಹ್ನಕ್ಕೆ ಅಡಿಯಿಡುವ ಸಮಯ. ಹರಿಜನಕೇರಿಯಲ್ಲಿ ಅಲ್ಲ, ಹಿರಿಯ ಮಾಹೇಶ್ವರರ ಕೇರಿಯಲ್ಲಿ ಸಹಸ್ರಾರು ಜನ ನೆರೆದಿದ್ದಾರೆ. ೧೨ನೆಯ ಶತಮಾನದ ಬಸವಕ್ರಾಂತಿಯ ಮರಿ ಬೆಳಕು ಚಕ್ಕನೆ ಹೊಳೆದಂತಾಯಿತು. ಮನುಷ್ಯನೊಳಗಣ ಮಮಕಾರವನ್ನು ಒಡಿದೆಬ್ಬಿಸಿ ಅಲ್ಲಿ ಸರ್ವಸಮಾನತೆಯ ಕ್ರಾಂತಿಯ ಬೀಜಾಕ್ಷರವನ್ನು ಬಿತ್ತಿದಂತಾಯಿತು. ಪಾದಪೂಜೆ ಮಾಡುವವರು ಪಾದಪೂಜೆ ಮಾಡಿಸಿಕೊಳ್ಳುವ ಮಟ್ಟಕ್ಕೆ ಏರಬೇಕೆಂಬ ಸದಾಶಯ ಸ್ವಾಮಿಗಳವರ ಮಾತಿನಲ್ಲಿ ಮಿಡಿಯುತ್ತಿರುವುದರ ಸಂಕೇತವಿದು. ಬಸವಕ್ರಾಂತಿ ವಿಫಲವಾಗಿದೆ ಎಂಬ ಅಪಸ್ವರಕ್ಕೆ ಕೊಡಲಾರದೆ ಕೊಟ್ಟ ಉತ್ತರದಂತಿದು. ಆಡಿದವರಿಗೆ ಆಡಿತೋರಿಸುವುದಕ್ಕಿಂತ ಮಾಡಿ ತೋರಿಸು ವಲ್ಲಿ ಮಹಾನುಭಾವರ ಲಕ್ಷಣವಿದೆ. ಮುಗಿಲು ಮುಗಿಲಾಗಿ ನಿಲ್ಲದೆ ಪಾತಾಳಕ್ಕಿಳಿದು ಅದನ್ನು ತನ್ನೊಂದಿಗೆ ಮೇಲಿತ್ತಿ ಹಿಡಿಯುವಲ್ಲಿ ಮುಗಿಲಿನ ಮಹತ್ತಿದೆ.

ಸಭಾಂಗಣದಲ್ಲಿ ಜನ ಕಿಕ್ಕಿರಿದು ತುಂಬಿದ್ದಾರೆ, ಜನರು ಮೈಯೆಲ್ಲ ಕಣ್ಣಾಗಿ ನೋಡುತ್ತಿದ್ದಾರೆ. ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದಾರೆ. ಮಹಾಂತ ಜೋಳಿಗೆ ಮಧ್ಯದಲ್ಲಿ ಕಂಗೊಳಿಸುತ್ತಲಿದೆ. ಮಹಾಂತ ಜೋಳಿಗೆ ಬರಿ ಜೋಳಿಗೆಯಲ್ಲ, ಬಸವ ದಾಸೋಹದ ಲಾಂಛನವಿದು. ಅಥಣಿ ಶಿವಯೋಗಿಗಳು ಮೃತ್ಯುಂಜಯಪ್ಪಗಳಿಗೆ ಅನುಗ್ರಹಿಸಿದ ಜೋಳಿಗೆಯಿದು. ಈ ಜೋಳಿಗೆಯಿಂದಲೆ ಮೃತ್ಯುಂಜಯಪ್ಪಗಳು ಧಾರವಾಡದಲ್ಲಿ ಮುರುಘಾಮಠ ಕಟ್ಟಿ, ಅನ್ನ-ಜ್ಞಾನ-ದಾಸೋಹದಿಂದ ಯುವ ಜನಾಂಗವನ್ನು ಮಹಾಜನವನ್ನಾಗಿ ಬೆಳೆಸಿದ್ದು ಎಲ್ಲರಿಗೂ ಗೊತ್ತು. ಇದನ್ನು ಹಿಡಿಯುವವರು ಕೈತೊಳೆದುಕೊಂಡು ಹಿಡಿಯಬೇಕು, ಮನತೊಳೆದುಕೊಂಡು ಮುಟ್ಟಬೇಕು. ಭಾವ ಬಯಲಾದಲ್ಲಿ ಜಗವೆ ತುಂಬಿಕೊಳ್ಳುವುದಲ್ಲಿ.

ಹೀಗೆ ಭಾವಬಯಲ ಜೋಳಿಗೆ ನೋಡು ನೋಡುತ್ತ ತುಂಬಿ ಹೋಗುತ್ತದೆ. ಜನ ಒಬ್ಬೊಬ್ಬರಾಗಿ ಸಭಾಂಗಣಕ್ಕೆ ಬರುತ್ತಾರೆ. ವ್ಯಸನ, ದುರ್ವ್ಯಸನ, ದುರ್ಗುಣ, ದೌರ್ಜನ್ಯ, ವಾಸನೆ, ವಿಕಾರ ಮೊದಲಾದ ದೈಹಿಕ ಮಾನಸಿಕ ಕಾಳಿಕೆಯನ್ನೆಲ್ಲ ಮಹಾಂತ ಜೋಳಿಗೆಯಲ್ಲಿ ಅರ್ಪಿಸುತ್ತಾರೆ. ಸೆರೆ ಸಿಂದಿ ಗಾಂಜಿ, ಅಫು, ತಂಬಾಕು ಇವುಗಳ ಪ್ರತೀಕಾರವಾಗಿ ಬಾಟಲಿ, ಚಿಲುಮೆ, ಚಂಚಿ ಮೊದಲಾದವುಗಳಿಂದ ಜೋಳಿಗೆ ಭಾರವಾಗುತ್ತದೆ. ಅರ್ಪಿಸಿದವರ ಮನಸ್ಸು ಹಗುರವಾಗುತ್ತದೆ. ವ್ಯಸನಿಕರು ನಿರ್ವ್ಯಸನಿಕರಾಗಿ ನಿಜ ಮನುಷ್ಯರಾಗಿ, ಬಸವಪಥದತ್ತ ಹೆಜ್ಜೆಯಿರಿಸುವ ಆತ್ಮವಿಶ್ವಾಸವನ್ನು ಮೈಗೂಡಿಸಿಕೊಳ್ಳುತ್ತಾರೆ.

ಅಂದಿನ ಘಟನೆಯಿಂದ ಹಿಂದಿನ ಘಟನೆಯೊಂದು ನೆನಪಿಗೆ ಬರುತ್ತದೆ. ಬಸವ ಪುರಾಣದ ನಿಮಿತ್ತವಾಗಿ ಅಥಣಿ ಶಿವಯೋಗಿಗಳು ಇಂಗಳಗಾವಿಯಲ್ಲಿ ತಂಗಿದ ಕಾಲವದು. ಎಂದಿನಂತೆ ಮುಂಜಾವು ಲಿಂಗಾರ್ಚನೆ ಮಾಡಿಕೊಂಡು ಶಿವಯೋಗಿಗಳು ಬಸವೇಶ್ವರ ದೇವಾಲಯಕ್ಕೆ ಬರುತ್ತಲಿದ್ದಾರೆ. “ಓಹೋ! ಶಿವಾ ಬಂದ, ಶಿವಾಬಂದ ಕರೀರೆಪಾ” ಎಂದು ಜನರಿಗೆ ಹೇಳುತ್ತ ಥಟ್ಟನೆ ಶಿವಯೋಗಿಗಳು ಒಬ್ಬ ಸ್ವಾಮಿಯ ಕಾಲು ಹಿಡಿದುಕೊಳ್ಳುತ್ತಾರೆ. ಆ ಸ್ವಾಮಿಯ ಮೈಯೆಲ್ಲ ಬೆವರುತ್ತದೆ. ಬೆವರಿನಗುಂಟ ಅವಗುಣವೆಲ್ಲ ಹರಿದುಹೋಗುತ್ತದೆ. ಬಾಗಿದ ಮುಖ ಮೇಲೆತ್ತಲಿಲ್ಲ. ಶಿವಯೋಗಿಗೆರಗಿ ಕಣ್ಣು ಪಾದಾಭಿಷೇಕಪೆರೆಯುತ್ತದೆ. ಶಸ್ತ್ರ ಹಿಡಿಯದೆ ಗಾಯ ಮಾಡದೆ ಶಸ್ತ್ರಕ್ರಿಯೆ ಮಾಡಿ, ರೋಗ ನಿವಾರಿಸುವ ಕ್ರಮ ಮಹಾತ್ಮರದು. ಇದು ಬಸವ ತುಳಿದ ದಾರಿ. ಶಿವಯೋಗಿಗಳು ಹೆಜ್ಜೆ ಇರಿಸಿದ ದಾರಿ. ಮಹಾಂತಪ್ಪಗಳು ಈಗ ಮುನ್ನಡೆಯುತ್ತಿರುವ ದಾರಿ!! ಅಶಕ್ತನಿಗೆ ಊರುವುದಕ್ಕೊಂದು ಕೋಲುಬೇಕು. ಜಾರುತ್ತಿರುವವನು ಜಾರದಂತೆ ಮಾಡಲೊಂದು ತ್ಯಾಗದ ದಂಡಬೇಕು, ಚಾರಿತ್ರ್ಯ ಶುದ್ಧಿ ಹಾಗು ಕ್ರಿಯಾಶೀಲ ಮೇಳಗೂಡಿದಲ್ಲಿ— ಮನೆಯೊಡೆಯನಿಂದ ಮನೆ ಬೆಳಗುತ್ತದೆ, ನಾಡಿನ ದೊರೆಯಿಂದ ನಾಡು ಸಮೃದ್ಧವಾಗುತ್ತದೆ. ಮಠಾಧೀಶರಿಂದ ಜನಾಂಗ ಉದ್ಧಾರವಾಗುತ್ತದೆ !

ದೀರ್ಘಾವಧಿಯಿಂದ ಕಾಯಿದೆ ಕಾನೂನುಗಳಿಂದ ನಿಯಂತ್ರಿಸಲಾಗದ ಕೆಲಸ ಒಂದೆರಡು ಗಳಿಗೆಯಲ್ಲಿ ಹೇಗೆ ಆಗುತ್ತದೆ? ಇದೇ ರಾಜದಂಡಕ್ಕೂ ಯೋಗ ದಂಡಕ್ಕೂ ಇರುವ ಅಂತರ; ಶಾಸನಕ್ಕೂ ಅಂತಃಕರಣಕ್ಕೂ ಇರುವ ಅಂತರ! ಇಂಥ ಅಸಾಧ್ಯ ಕೆಲಸ ಅಲ್ಪ ಸಮಯದಲ್ಲಿ ಫಲಕಾರಿಯಾಗುವಲ್ಲಿ— ಅದರ ಹಿಂದೆ ದೀರ್ಘ ತಪಸ್ಸು ಇರುವುದೆಂಬುದನ್ನು ಮರೆಯಬಾರದು. ಚಾರಿತ್ರ್ಯಶುದ್ಧಿಯೆ ಆ ತಪಸ್ಸು. ಚಾರಿತ್ರ್ಯ ಘನವಾದಷ್ಟು ಕ್ರಿಯಾಶಕ್ತಿಗೊಂದು – ಪವಾಡಶಕ್ತಿ

ಬರುವುದು ! ಈ ಶಕ್ತಿಯಿಂದಲ್ಲದೆ ಬೇರಾವ ಕಸರತ್ತಿನಿಂದ ವರದಕ್ಷಿಣೆ, ಪಾನ-ಪ್ರತಿಬಂದದಂಥ ಸಮಸ್ಯೆಗಳು ಪರಿಪೂರ್ಣವಾಗಿ ಪರಿಹಾರವಾಗಲಾರವು.

ವ್ಯಸನಾದಿಗಳಿಂದ ಮನುಷ್ಯ ಕೆಡುವುದನ್ನು ಕಂಡು, ನೊಂದು ಈ ರೀತಿ ಹೇಳಿದ್ದಾರೆ ಬಸವಣ್ಣ :

**"ಕೂಡಲಸಂಗಮದೇವರನೊಲಿಸಬಂದ ಪ್ರಸಾದ ಕಾಯವ ಕೆಡಿಸಲಾಗದು."**

ಅಂದು ಈ ತತ್ವವನ್ನು ಬಸವಣ್ಣ ಸ್ವಂತಕ್ಕೆ ಪ್ರಯೋಗಿಸಿಕೊಂಡು ಲೋಕವನ್ನು ಎಚ್ಚರಿಸುತ್ತಾನೆ. ಪರಮಾತ್ಮನನ್ನು ಒಲಿಸಲು ಬಂದ ಕಾಯ-ಪ್ರಸಾದ ಕಾಯವಿದು. ಜೀವಾತ್ಮ ಪರಮಾತ್ಮನಾಗಲು ಸಾಧ್ಯಮಾಡಿ ತೋರಿಸುವಂಥ ಪ್ರಸಾದ ಕಾಯವಿದು. ಪ್ರಸಾದ ಕಾಯ ರಸಾತಳಕ್ಕೆ ಇಳಿದರೆ ಮಾನವ ಜೀವನವೂ ರಸಾತಳಕ್ಕಿಳಿವುದು. ಮನುಷ್ಯರ ಬಗೆಗೆ ಬಸವಣ್ಣನಲ್ಲಿ ಮಿಡಿದ ಮಾನವೀಯ ಅಂತಃಕರಣದ ಪರಿಣಾಮವಾಗಿ ಈ ಮಾತು ಮೂಡಿ ಬಂದಿದೆ. ಸ್ವಂತ ಜೀವನ ವ್ಯರ್ಥವಾದಾಗ ಆಗಬಹುದಾದ ಅನುತಾಪ-ಜನರ ಜೀವನ ವ್ಯರ್ಥವಾದಾಗಲೂ ಉಂಟಾಗುವುದೆಂದರೆ, ಹಾಗೆ ಅನುಭವಿಸುವಾತ ನಿಜವಾಗಿ ಸಕಲ ಜೀವಾತ್ಮರ ಹಿತಚಿಂತಕ. ಮನುಷ್ಯ ಸ್ತರದಿಂದ ಮನುಷ್ಯ ಇಳಿಯಬಹುದಾದ ಅಪಾಯವನ್ನು ತಪ್ಪಿಸುವವರೆ ನಿಜವಾದ ಹಿತಚಿಂತಕರು. ಕೊರಕಲು (ಇಳಿಜಾರು) ಬಂದಾಗ ಒಗ್ಗಾಲಿ ಹಿಡಿದರೆ, ಮುಂದೆ ಬಂಡಿ ನಿರಾತಂಕವಾಗಿ ಸಾಗಿ ತನ್ನ ಜಾಗ ಮುಟ್ಟಬಹುದು. ಮನುಷ್ಯತ್ವ ಕಳೆದು ಹೋಗದಂತೆ ಉಳಿಸಿ ಕೊಟ್ಟರೆ ಮುಂದೆ ಆ ಮನುಷ್ಯ ತನ್ನ ಗುರಿಯನ್ನು ಸುಗಮವಾಗಿ ಮುಟ್ಟುತ್ತಾನೆ.

ಆದರೆ, ಮನುಷ್ಯ ವ್ಯಸನಾಧೀನನಾಗಿ ಕಾಮಕ್ರೋಧಾದಿಗಳಿಗೆ ಒಳಗಾಗಿ, ಪ್ರಸಾದಕಾಯವನ್ನೂ ಕೆಡಿಸಿಕೊಳ್ಳುವ ಅಪಾಯವೇ ಹೆಚ್ಚು. ಮನುಷ್ಯ ಏರಬೇಕಾದ ಎತ್ತರವನ್ನು ಏರಲು ಸಾಧ್ಯವಾಗುವುದು ಈ ದೇಹದಿಂದಲೇ. ಈ ದೇಹದಲ್ಲಿಯ ಮನಸ್ಸು, ಬುದ್ಧಿ, ಹೃದಯ, ಆತ್ಮ -ಎಲ್ಲ ನೆಲೆಸಿರುವುದುಂಟು. ಈ ಕಲ್ಪನೆ ಮನುಷ್ಯನಿಗೆ ಹೊಳೆಯದಿದ್ದರೆ ಹೇಗೆ ? ಹೊಳೆದ ಮೇಲೆಯೂ ಇದನ್ನು ಕೆಡಸಿ ಕೊಂಡರೆ ಹೇಗೆ ? ಹಾಗೆ ಕೆಡವುದನ್ನು ತಡೆದು ನಿಲ್ಲಿಸಬೇಕೆಂದು ಮಹಾಂತ ಜೋಳಿಗೆ ಹುಟ್ಟಿಕೊಂಡಿದೆ. ಮನುಷ್ಯ ವ್ಯಸನದಿಂದಾಗಿ ವೃಥಾ ಕೆಟ್ಟು ಹೋಗ ಬಾರದೆಂದು ಮಹಾಂತಪ್ಪಗಳಲ್ಲಿ ಕುದಿದೆದ್ದ ಮಾನವೀಯ ಅನುಕಂಪವೇ ಮಹಾಂತ ಜೋಳಿಗೆಯಾಗಿ ಮಾನವಕುಲೋದ್ಧಾರ ಕೈಕೊಳ್ಳುತ್ತಲಿದೆ. ಇದು ಬಸವತತ್ವದ ಹೊಸ ರೂಪ, ಬಸವಪಥದಲ್ಲಿ ಮುಂದುವರಿಯುತ್ತಿರುವ ಹೊಸ ಹೆಜ್ಜೆ !

ಮಾನವೀಯ ಹಕ್ಕುಗಳನ್ನು ಕಳೆದುಕೊಂಡು ಮೂಲೆಗುಂಪಾದವರನ್ನೂ ಮೇಲೆತ್ತಿ ಹಿಡಿಯುವುದು ಸುಲಭವಲ್ಲ, ಆಕಾಶದಲ್ಲಿ ನಿಂತು ಪಾತಾಳದಲ್ಲಿ ಬಿದ್ದವರನ್ನು ಮೇಲೆತ್ತಿ ಹಿಡಿಯುವುದು ಸಾಧ್ಯವಿಲ್ಲ. ಇದನ್ನರಿತ ಬಸವಣ್ಣ ಹೀಗೆ ಆಲೋಚಿಸುತ್ತಾನೆ :

"ಕೀಳಾಗಲೊಲ್ಲದೆ ಮೇಲಾಗಲೊಲ್ಲೆನು
ಕೀಳಿಂಗಲ್ಲದೆ ಹಯನು ಕರೆಯದು"

ಇದು ಸಮಾಜೋದ್ಧಾರಕ್ಕಾಗಿ ಬಸವಣ್ಣ ಆರಿಸಿಕೊಂಡ ದಾರಿ. ಮಾನವಸೇವೆಗಾಗಿ ಚಿಂತಿಸುವ ಬುದ್ಧಿ. ಸಕಲರೂ ಬದುಕಲೆಂಬ ಅಂತಃಕರಣ ಎರಡೂ ಕೈ ಕೂಡಿಸಿದಾಗ ಇಂಥ ಅಗಾಧವಾದ ಕೆಲಸ ಸಾಧ್ಯವಾಗುತ್ತದೆ. "ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯ" ಎಂಬ ಭಾವ ಎರಡಿಲ್ಲದ ಭಾವದಲ್ಲಿ ಬದುಕುವಾತ ಅನ್ಯರ ನೋವನರ್ಥಮಾಡಿಕೊಳ್ಳಬಲ್ಲ. ಅನ್ಯರ ನೋವು ತನ್ನ ನೋವೆಂದು ನೋಯಬಲ್ಲ. ನೋವು ನಿವಾರಣೆಗಾಗಿ ದಾರಿ ಹುಡುಕಬಲ್ಲ. ಆ ದಿಸೆಯಲ್ಲಿ ಮಹಾಂತಪ್ಪಗಳು ಹುಡುಕಿದ್ದು ಈ ದಾರಿಯನ್ನು. ದಾರಿ ತಪ್ಪಿದವರ, ನೊಂದವರ ನೇರ ಜೀವನಕ್ಕೆ ಈ ಮಹಾಂತ ಜೋಳಿಗೆ ದಿಕ್‌ಸೂಚಿ, ದಿವ್ಯ ಔಷಧಿ ! ಋಷಿ ಏನನ್ನು ನೆನೆಯುವನೊ ಅದುವೆ ಆಗಿ ಪರಿಣಮಿಸಬಲ್ಲ. ಕವಿ ಯಾವುದನ್ನು ಕುರಿತು ಚಿಂತನೆ ಮಾಡುವನೋ ಅದುವೆ ಆಗಿ ಕಾವ್ಯ ಬರೆಯಬಲ್ಲ. ಹಿತಚಿಂತಕ (ಸಮಾಜ ಸುಧಾರಕ) ಯಾವ ನೋವನ್ನು ಕಂಡು ಮಿಡುಕುವನೋ ಆ ನೋಯುವ ಜೀವಿ ತಾನೇ ಆಗಿ ಇಂಥ ಲೋಕೋದ್ಧಾರ ಕೈಕೊಳ್ಳಬಲ್ಲ ! ಮಹಾಂತ ಜೋಳಿಗೆ ಈವರೆಗೆ ಸಾಧಿಸಿದ ಯಶಸ್ಸಿನ ಹಿನ್ನೆಲೆಯಲ್ಲಿ ಲೋಕಹಿತಚಿಂತನ (ತಪಸ್ಸು) ಮಹಾಂತಪ್ಪಗಳಲ್ಲಿ ನಡೆದಿರಲೇಬೇಕು.

ಪರಿವರ್ತನವೆಂಬುದು ಕ್ರಾಂತಿಯ ದಾರಿ. ಕ್ರಾಂತಿಯ ದಾರಿ ಕೆಂಡದ ದಾರಿ. ಅಂಗಾಲು ಸುಟ್ಟರೇನು ಗತಿ ಎಂದಳುಕುವವರು ಈ ದಾರಿಗಿಳಿಯಲಾರರು. ಸುಟ್ಟರೆ ಸುಡಲಿ ಎಂದವರು ಮಾತ್ರ ಅನ್ಯರ ಕುದಿಯನ್ನು ಶಾಂತಗೊಳಿಸಬಲ್ಲರು ! ತನ್ನೆತ್ತರಕ್ಕೆ ಬೆಳೆಯಲವಕಾಶಕೊಟ್ಟು ಹಾಗೆ ಬೆಳೆದು ನಿಂತವರನ್ನು ಬಸವಣ್ಣ ಬೊಪ್ಪನೆಂದ, ಅಪ್ಪನೆಂದ. ಈ ಮಹಾನುಭಾವವುಳ್ಳವರಿಂದ ಕತ್ತಲೆ ಬೆಳಕಾಗಬಲ್ಲುದು. ವಿಷ ಅಮೃತ ವಾಗಬಲ್ಲುದು. ಈ ಬಸವ ತತ್ವಕ್ಕೆ ತಮ್ಮನ್ನು ಅರ್ಪಿಸಿಕೊಂಡಿರುವುದರಿಂದಲೆ ಮಹಾಂತಪ್ಪಗಳು ಜನತೆಯ ಪಾದಪೂಜೆ ಮಾಡಬೇಕೆಂದು ಹೇಳಿದ್ದು. ಅವರ ಆಶಯವನ್ನು ಅನುಷ್ಠಾನದಲ್ಲಿ ತರುವಲ್ಲಿ ಅವರಿಗೆ ಸಂಗಾತಿಯಾದದ್ದು ಈ ಮಹಾಂತ ಜೋಳಿಗೆ. ಅವರು ಹಿಡಿದದ್ದು ಒಂದು ಜೋಳಿಗೆಯಲ್ಲ. ಬೇಡುವುದು ಅದರ

ಉದ್ದೇಶವಲ್ಲ, ಕೊಡುವುದೂ ಅದರ ಧೋರಣೆಯಲ್ಲ. ಜಗವೇ ತಾನಾಗಿ ನಿಂತವನಿಗೆ ಕೊಡುವುದೂ ಇಲ್ಲ, ಬೇಡುವುದೂ ಇಲ್ಲ. ತನಗೆ ತಾನೆ ಕೊಟ್ಟುಕೊಂಡಂತೆ, ತನ್ನ ನೋವಿಗೆ ತಾನೇ ಅತ್ತು, ತಾನೆ ಉಪಚರಿಸಿ, ತಾನೆ ವಾಸಿಮಾಡಿಕೊಂಡಂತೆ, ಸಕಲ ಜೀವಾತ್ಮರ ಲೇಸು ಸಾಧಿಸುವುದು ಇಂಥ ಏಕೋಭಾವದಿಂದ. ಮಹಾಂತ ಜೋಳಿಗೆ ಏಕೋಭಾವದ ಸಂಕೇತ !! ಹುಸಿ ಸುಖದ ವ್ಯಾಮೋಹಕ್ಕೊಳಗಾಗಿ ಮಾನವ ಜನ್ಮದ ಮಹತ್ವಾದ ಫಲ ಮಿಡಿಯಿರುವಾಗಲೆ ಮುರುಟಿ ಹೋಗಬಾರದೆಂದು ಮಹಾಂತ ಜೋಳಿಗೆಗಿರುವ ಮುಖ್ಯ ಕಾಳಜಿ !!

## ೨೧.

# ಎರಡು ವಿಭಿನ್ನ ಚಿತ್ರಗಳು !

---

ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೆ ?
ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕರ ? (೭೫೨)

ಆನೆಯನೇರಿಕೊಂಡು ಹೋದಿರೆ ನೀವು
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ !
ಸತ್ಯದ ನಿಲವನರಿಯದೆ ಹೋದಿರಲ್ಲಾ ?
ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ ?
ಅಹಂಕಾರವೆಂಬ ಸದಮದಗಜವೇರಿ
ವಿಧಿಗೆ ನೀವು ಗುರಿಯಾಗಿ ಹೋದಿರಲ್ಲಾ ? (೬೩೨)

ಈ ಎರಡು ಚಿತ್ರಗಳನ್ನು ಕಂಡು, ತಮಗಾದ ಪರಿಣಾಮವನ್ನಿಲ್ಲಿ ಬಸವಣ್ಣನವರು ಚಿತ್ರಿಸಿದ್ದಾರೆ. ಇಬ್ಬರೂ ಆನೆಯನೇರಿ ಸಾಗಿದವರು. ಆದರೆ, ಇಬ್ಬರೂ ತಳೆದ ಒಲವು-ನಿಲವುಗಳಲ್ಲಿ ಎಷ್ಟೊಂದು ಅಂತರ ? ಒಬ್ಬ ಊರ್ಧ್ವಮುಖಿ, ಇನ್ನೊಬ್ಬ ಅಧೋಮುಖಿ. ಒಬ್ಬ (ಕೂಡಲ ಸಂಗಯ್ಯನನ್ನು) ಪರಮಾತ್ಮನನ್ನು ನಂಬಿನಡೆದವ. ಮತ್ತೊಬ್ಬ ಅಧಿಕಾರದ ಅಹಂಭಾವದಲ್ಲಿ ಮುಳುಗಿದವ. ಆತ ದಾಸೋಹಂಭಾವಿಯಾದರೆ, ಈತ ಅಹಂಭಾವಿಯಾಗಿ ಸತ್ಯದ ನಿಲವನ್ನರಿಯದೆ ಹೋಗಿ, ಜೀವನವನ್ನು ವ್ಯರ್ಥಗೊಳಿಸಿಕೊಂಡವ. ಮೊದಲಿನ ಚಿತ್ರದಲ್ಲಿ ಪರಮೋನ್ನತ ಕಾರ್ಯದತ್ತ ಸಾಗಿದವನ ಪ್ರತೀಕವಿದೆ. ಎರಡನೆಯ ಚಿತ್ರದಲ್ಲಿ ಪ್ರತ್ಯಕ್ಷ ಮದವೇರಿದ ಆನೆಯ ಮೇಲೆ ಸಾಗಿದವನ ಉಲ್ಲೇಖವಿದೆ.

ಈ ಇಬ್ಬರ ಬಗೆಗೆ ಲೋಕ (ಜನರು) ತಾಳಿದ ದೃಷ್ಟಿ ಬಹು ವಿಚಿತ್ರ. ಮೊದಲಿನವನ ಔನ್ನತ್ಯವನ್ನು ಕಂಡು ಸಹಿಸದೆ ನಾಯಿ ಬೊಗಳಲು ಆರಂಭಿಸುತ್ತದೆ. ಅದನ್ನು ಕಂಡು ಉಳಿದ ನಾಯಿಗಳೂ ಬೊಗಳುತ್ತ ಬೆನ್ನು ಹತ್ತುತ್ತವೆ. ಇಲ್ಲಿಯ ನಾಯಿ ಮತ್ಸರವನ್ನು ಧ್ವನಿಸುತ್ತಿದೆ. ಎರಡನೆಯವನ ವೈಭವಾಡಂಭರಕ್ಕೆ ಮಾರು ಹೋಗಿಯೋ, ಆತನ ಅಧಿಕಾರ ದರ್ಪಕ್ಕೆ ಅಂಜಿಯೋ ಅವನಿಗೆ ಅಡ್ಡಬೀಳುತ್ತಾರೆ, ಹೊಗಳುತ್ತಾರೆ. ಆದರೆ, ಆನೆಯನೇರಿದವನೂ ಅವನ ಬೆಂಬತ್ತಿದವರು ಒಮ್ಮೆ ವಿಧಿಗೆ ಗುರಿಯಾಗಿ ಹೋಗುತ್ತಾರೆ.

ಇನ್ನೂ ಇಂಥ ಭಿನ್ನ ಮನೋಧರ್ಮದ ಎರಡು ಚಿತ್ರಗಳನ್ನು ಲೋಕದಲ್ಲಿ ಕಾಣಬಹುದು. ಭಾರತೀಯ ಸಂಸ್ಕೃತಿಯಲ್ಲಿ ಜೋಳಿಗೆ ಮಹತ್ವದ ಪಾತ್ರ ವಹಿಸುತ್ತದೆ. ಹೊಟ್ಟೆ ಪಾಡಿಗಾಗಿ ಹಿಡಿದ ತಿರುಪೆಯ ಜೋಳಿಗೆಯೊಂದು. ಈ ಜೋಳಿಗೆ ದುಡಿಯಲಾರದವನ ಮೈಗಳ್ಳತನವನ್ನೋ ಅಥವಾ ಅಸಹಾಯಕ ಸ್ಥಿತಿಯನ್ನೋ ಸಂಕೇತಿಸುತ್ತದೆ. ಇನ್ನೊಂದು ಬಗೆಯ ಜೋಳಿಗೆಯನ್ನು ಹಿಡಿದವರೂ ಉಂಟು. ಧಾರವಾಡದ ಮೃತ್ಯುಂಜಯಪ್ಪಗಳು ಹಿಡಿದಂಥ ಜೋಳಿಗೆಯ ಮನೋಧರ್ಮವೇ ಬೇರೆ. ಅಥಣಿ ಶಿವಯೋಗಿಗಳ ಆಶೀರ್ವಾದವನ್ನು ಹೊತ್ತುಕೊಂಡು ಬಂದ ಜೋಳಿಗೆ ತ್ಯಾಗದ ಘನೋದ್ದೇಶವನ್ನು ಹೊಂದಿರುವಂಥದು ! ಆ ಜೋಳಿಗೆಯ ಮಹಿಮೆಯಿಂದಾಗಿ ಮುಳ್ಳು–ಕೊಂಪೆಯ ಜಾಗ ಮಠವಾಗಿ ರೂಪುಗೊಂಡಿತು. ವಿದ್ಯಾರ್ಥಿಲೋಕಕ್ಕಾಗಿ ಪ್ರಸಾದ ನಿಲಯವಾಗಿ ಪರಿಣಮಿಸಿತು. ಮೊದಲಿನ ಜೋಳಿಗೆ ಸ್ವಾರ್ಥಪರವಾಗಿದ್ದರೆ, ಎರಡನೆಯದು ಪರಾರ್ಥಪರವಾಗಿದೆ ! ಬಟ್ಟೆ (ಅರಿವೆ)ಯಿಂದ ತಯಾರಾದ ಜೋಳಿಗೆಯಾದರೂ ಶಿವ ಬಟ್ಟೆಯಲ್ಲಿ (ಶಿವ ಮಾರ್ಗದಲ್ಲಿ) ಮುನ್ನಡೆಯುವಂಥದು. ಇಲಕಲ್ಲ ಮಹಾಂತಪ್ಪಗಳು ಹಿಡಿದದ್ದು ಇದೇ ಮನೋಧರ್ಮದ ಜೋಳಿಗೆಯನ್ನು. ಇದು ಚಿತ್ತರಗಿ ಪೀಠದ ವಿಜಯ ಮಹಾಂತೇಶನ ಆಶೀರ್ವಾದವನ್ನು ಪಡೆದಂಥ ಜೋಳಿಗೆ !

ಮಹಾಂತ ಜೋಳಿಗೆಯೆಂದು ಖ್ಯಾತಿವೆತ್ತ ಈ ಜೋಳಿಗೆ ಬಸವಪಥದಲ್ಲಿ ಮುನ್ನಡೆಯುವ ಜೋಳಿಗೆ, ದುರ್ವ್ಯಸನಿಗಳನ್ನು ನಿರ್ವ್ಯಸನಿಗಳನ್ನಾಗಿ ಮಾಡಿ ಅವಗುಣಿಗಳನ್ನು ಸದ್ಗುಣಿಗಳನ್ನಾಗಿ ಮಾಡಿ, ಕಳ್ಳರನ್ನು ಸುಳ್ಳರನ್ನು ಸುಶೀಲರನ್ನಾಗಿ ಮಾಡಿ, ಮೂಲೆಗುಂಪಾದ ದಲಿತರನ್ನು ಮೇಲೆತ್ತಿ ಹಿಡಿದು ನವನಾಗರಿಕರನ್ನಾಗಿ ಮಾಡಿರುವುದೊಂದು ಪಾಪಕರ್ಮವೆ ? ಜಗತ್ತಿಗೆ ಅಕಲ್ಯಾಣವಾಗುವಂಥ ಯಾವ ಕಾರ್ಯವನ್ನೂ ಈ ಜೋಳಿಗೆ ಕೈಕೊಂಡಿಲ್ಲ. ಅದರ ಉದ್ದೇಶವೂ ಅದಲ್ಲ. ಒಣ ಪ್ರತಿಷ್ಠೆಗಾಗಿ ಹಿಡಿದ ಜೋಳಿಗೆಯೂ ಅಲ್ಲ. ಕೆಳವರ್ಗದವರಾದ ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ, ಮಾದಾರ ಚೆನ್ನಯ್ಯ, ಹರಳಯ್ಯ ಹಾಗು ಸೂಳೆ ಸಂಕವ್ವ ಮೊದಲಾದವರನ್ನು ಶರಣ ಶರಣೆಯರನ್ನಾಗಿ ರೂಪಿಸಿದಂಥ ಬಸವಕ್ರಾಂತಿಯ ಜೋಳಿಗೆಯಿದು.

ಮಹೋದ್ದೇಶ ಹಮ್ಮಿದ ಈ ಕಾರ್ಯವನ್ನು ಅಧರ್ಮವೆಂದು ಆಡಿಕೊಂಡು ಹುಯ್ಯಲೆಬ್ಬಿಸಿದವರು ಆಗಲೂ ಇದ್ದರು, ಈಗಲೂ ಇದ್ದಾರೆ. ಒಳ್ಳೆಯ ಕೆಲಸಕ್ಕೆ ಯಾವಾಗಲೂ ಆಂತಕ ಬಹಳ. ಹಾಗೆಂದು ಅದನ್ನು ನಡುವೆ ಕೈಬಿಡಬಹುದೆ ! ಈ ಮಹಾಂತ ಜೋಳಿಗೆ ಕೈಕೊಂಡದ್ದು ಮಾನವೀಯ ಕಾರ್ಯ, ಜೀವಕುಲ ದಾಸೋಹಕ್ಕಾಗಿ (ಸೇವೆಗಾಗಿ) ದುಡಿಯುವ ಶಿವಧರ್ಮಕಾರ್ಯ ! ಬಸವಪಥದಲ್ಲಿ ಸಾಗಿದ ಈ ಜೋಳಿಗೆ ತಳೆಯಬೇಕಾದದ್ದು ಬಸವ ನಿಲವನ್ನಲ್ಲದೆ ಮತ್ತೊಂದನ್ನಲ್ಲ.

ಬಸವಣ್ಣನವರು ಕಂಡುಕೊಂಡಂಥ ಹಾಗು ನಾವಿಂದು ಕಾಣುತ್ತಿರುವಂಥ ಎರಡು ಬಗೆಯ ಚಿತ್ರಗಳು. ಇಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿಯ ಸಂಕೀರ್ಣ – ಸಂದಿಗ್ಧ ಸ್ಥಿತಿಗತಿಯ ಮೇಲೆ ಒಂದು ಬೆಳಕನ್ನು ಚೆಲ್ಲುತ್ತವೆ. ಬಸವಣ್ಣ ಎದುರಿಸಿದಂಥ ಅಡ್ಡಿ ಆತಂಕಗಳು ನಮಗೂ ಎದುರಾಗಿ ನಿಂತು ತಲ್ಲಣಗೊಳಿಸಬಹುದು. ಆದರೆ, ಬಸವಣ್ಣ ಮುತ್ಸದ್ದಿಯಾದುದರಿಂದ, ಧೀರೋದಾತ್ತನಾದುದರಿಂದ, ಆತ್ಮಬಲ ಸಂಪನ್ನನಾದುದರಿಂದ ಅಂಥ ಎಡರುಗಳನ್ನೆದುರಿಸಿ ಗೆಲ್ಲುವಲ್ಲಿ ಸಮರ್ಥರಾಗುತ್ತಾರೆ. ಬಸವಾನುಭವವನ್ನು ಆಧರಿಸಿ, ನಾವೂ ಅಂಥ ಎಡರುಗಳನ್ನು ಎದುರಿಸಿ ಸಫಲರಾಗುವಲ್ಲಿ ಸಮರ್ಥರಾಗಬಹುದು. ಮನುಷ್ಯನೊಳಗಣ ಶಿವಶಕ್ತಿಗೆ ಯಾವುದು ಅಸಾಧ್ಯ ?

೧) ಅವರಿವರ ಅಪವಾದ ಅವಹೇಳನಕ್ಕೆ ತಲ್ಲಣಗೊಳ್ಳದೆ ತಾವು ಹಮ್ಮಿಕೊಂಡ, ಸಕಲ ಜೀವ ಕುಲಕ್ಕೆ ಲೇಸ ಬಯಸುವ ಉದಾತ್ತ ಧ್ಯೇಯವನ್ನು ಸಫಲಗೊಳಿಸುವತ್ತ ಗಮನಹರಿಸುವುದು.

೨) ದೇವರ ಅನುಗ್ರಹವನ್ನು ನಂಬಿ ಯಾರು ನಿಂದಿಸಿ ನಮ್ಮನೇನು ಮಾಡುವರೆಂದು ಧೀರೋದಾತ್ತ ಹೆಜ್ಜೆಯಲ್ಲಿ ಮುಂದೆ ಸಾಗುವುದು.

೩) ಅಸೂಯೆಯಿಂದ ನಮ್ಮನ್ನು ನಿಂದಿಸುವುದರಿಂದ ನಿಂದಕರಿಗೆ ಸಂತೋಷವಾಗುವಂತಿದ್ದರೆ ನಿಂದಿಸಲಿ ಎಂದು ನಿರಾಳಮನ ತಾಳುವುದು.

ನಮ್ಮ ಗುರಿ ಸಫಲವಾಗಬೇಕಾದರೆ, ಈ ಸೂತ್ರಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವತ್ತ ಯತ್ನಿಸುವುದೊಳ್ಳಿತು. ಏಕೆಂದರೆ, ನಿಂದೆ, ನೋವು ಬೆನ್ನು ಬಿಡಲಾರದ ಒಡನಾಡಿ ಎಂದು ಭಾವಿಸಿ, ಮಾರಕವಾದುದನ್ನು ಪೋಷಕವಾಗುವಂತೆ ಬಸವಣ್ಣ ಪ್ರಸಾದೀಕರಿಸಿಕೊಂಡ ಬಗೆಯಿದು !

ಈ ಪ್ರಸಾದೀಕರಣ ಬಸವ ತತ್ತ್ವವೆ. ತಮಂಧ (ಕತ್ತಲು) ತುಂಬಿದ ನರವಿಂಧ್ಯದಲ್ಲಿ ಸಾಗುವವರಿಗೆ ಬೆಳಕಾಗಬಲ್ಲದು ! ಉದಾತ್ತ ಧ್ಯೇಯವನ್ನು ಜೀವನ ವಿಧಾನವನ್ನಾಗಿ ಆರಿಸಿಕೊಂಡವರಿಗೆ ಬಸವ ದಾರಿಯಲ್ಲದೆ ಬೇರೆ ದಾರಿಯಿಲ್ಲ !!

# ಹಿನ್ನುಡಿ

'ಬ. ಗಿ.' ಎಂದರೆ 'ಬದ್ಧತೆಯ ಗಿರಿ'. ಮಾಡುವ ಪ್ರತಿಕೆಲಸದಲ್ಲೂ ಆತ್ಮವನ್ನು ಆತ್ಮಸಾಕ್ಷಿಯನ್ನು ತೊಡಗಿಸಿ ಕೆಲಸಕ್ಕೆ ಜೀವ ಕೊಡುತ್ತಾರೆ ಯಲ್ಲಟ್ಟಿಯವರು. ಎಪ್ಪತ್ತಾರರ ಇಳಿವಯಸ್ಸಿನಲ್ಲೂ ಎಳೆಯರ ಹುಮ್ಮಸ್ಸು, ತಿಳಿನಗೆ ಧರಿಸಿ ಕ್ರಿಯಾಶೀಲರಾಗಿರುವ ಇವರಿಗೆ ಚಿಂತೆಗಳು ಹಾಸಲುಂಟು ಹೊಸೆಯಲುಂಟು. ಹೀಗಿದ್ದಾಗ್ಯೂ 'ಬರ್ರಿ ಮತ್ತೇನ ಬರದೀರಿ ? ಓದರಿ ನೋಡೋಣ' ಎಂದು ನನ್ನಂಥ ಕಿರಿಯರ ಬರಹಗಳನ್ನು ಓದಿಸಿ ಕೇಳಿ ಹಿರಿಹಿರಿ ಹಿಗ್ಗುವ ಹಿರಿಯ ಜೀವ ಇದು. ನಿವೃತ್ತರಾಗಿ ಇಪ್ಪತ್ತು ವರ್ಷ ಗತಿಸಿಹೋದರೂ, ಒಪ್ಪತ್ತು ಊಟ ಮಾಡಿದರೂ, ಇಪ್ಪತ್ತು ಕೃತಿಗಳ ತಂದೆ ಎಂದರೆ ಸಾಮಾನ್ಯವೆ ? ನಾಲ್ಕು ಕವನ ಸಂಕಲನಗಳು, ಮುನ್ನೂರಕ್ಕೂ ಮಿಕ್ಕಿ ವಚನಗಳು, ಮೂರು ವಚನ ಚಿಂತನ ಗ್ರಂಥಗಳು, ಲಲಿತ ಪ್ರಬಂಧಗಳು ಮೂರು ಜೀವನ ಚರಿತ್ರೆಗಳು, 'ಮಹಾ ಮಾನವ'ದಂಥ ಪ್ರಬುದ್ಧ ಗ್ರಂಥ ಹೊರಬಂದದ್ದು ಹೊರಲಾಗದ ಸಂಕಷ್ಟಗಳ ಹೊರೆ ಎಂದರೆ ಯಾರಿಗೆ ಅಚ್ಚರಿಯಾಗುವುದಿಲ್ಲ ?

ಈಗ ಯಲ್ಲಟ್ಟಿ ಅವರ ಬದುಕೇ ವಚನ. ವಚನ-ಮಂತ್ರವೇ ಅವರ ಆಹಾರ. ಕುಂತರೆ ನಿಂತರೆ ಎದ್ದರೆ ವಚನ. 'ಬಿದ್ದರೂ ಬಿಡಲಾರೆನು ವಚನ' ಎನ್ನುತ್ತ 'ವಚನ ಮುಖದಲ್ಲಿ ಶರಣ ದರ್ಶನ'ದ ಮೂಲಕ ವಚನಕಾರರ ಅನುಭಾವದಡಿಗೆಯನ್ನು ಉಣಲಿಕ್ಕಿದ್ದಾರೆ. ಆತ್ಮಚಾರಿತ್ರ್ಯ, ಆತ್ಮ ವಿಮರ್ಶೆ, ಆತ್ಮ ಸಂಸ್ಕಾರ ಇವುಗಳ ಆವಿಷ್ಕಾರಕ್ಕೋಸ್ಕರಗಾಗಿ ಪರಿಷ್ಕಾರಗೊಂಡು ಬಂದ ಆತ್ಮಾನುಭವ ಈ ವಚನ' ಎಂದು ವ್ಯಾಖ್ಯಾನಿಸಿರುವ ಇವರು- ವಚನ ಹಾಗೂ ವಚನೇತರ ಸಾಹಿತ್ಯದ ಅಂತರವನ್ನು ಹೀಗೆ ವಿಶ್ಲೇಷಿಸುತ್ತಾರೆ- "ಇತರ ಸಾಹಿತ್ಯದ ಗಮನ ಇರವಿನತ್ತ ಸಾಗಿದರೆ, ವಚನದ ಗಮನ ಅರಿವಿನತ್ತ ಸಾಗುತ್ತದೆ. ಏಕೆಂದರೆ ಮಾತಿನಂದತ್ತತ್ತ ಈ ವಚನ. ಈ ವಚನದ ಪರಿಣಾಮ ಚಿರಂತನವಾದುದು". "ಮಾತು ಲಿಂಗ ನಡೆಯಲ್ಲಿ ವಚನವಾಗುವುದು, ಆದರೆ ಆ ವಚನ ಮತ್ತೆ ಮಾತಾಗದು. ಸ್ವಾತಿಯ ಬಿಂದು ಮುತ್ತಾಗಬಹುದು. ಮತ್ತೆ ಆ ಮುತ್ತು ನೀರಾಗದು" ಹೀಗೆ ಮಂತ್ರದಂತೆ ಪಠಿಸಬಲ್ಲ ಸಾವಿರಾರು ಸದೃಶ ಉಕ್ತಿಗಳನ್ನು ಈ ಪುಸ್ತಕದೊಳಗಿನ ಇಪ್ಪತ್ತೊಂದು ಲೇಖನಗಳಲ್ಲಿ ಕಾಣಬಹುದು. ತಿಳಿಯಲಾಗದ ತಿಳಿಗೇಡಿಗೂ ತಿಳಿಯುವಂತೆ ತೊಳೆ ತೊಳೆಯಾಗಿ ಬಿಡಿಸಿ ಹೇಳುವ ಅಗಾಧ ಕಲೆ ಬ. ಗಿ. ಅವರಿಗೆ ಕರಗತವಾಗಿದೆ. ಬಸವ ಧರ್ಮ, ಬಸವ ತತ್ವ, ಬಸವ ದೈವ ಎಂಬುದು ಈ ಬರಹಗಳ ಸ್ಥಾಯಿ ಹಾಗೂ ಸಂಚಾರಿ ಭಾವ ಎರಡೂ ಆಗಿವೆ. ಬಸವ ತತ್ವವೆಂದರೆ ಪ್ರಸಾದ, ತಮಂಥ ತುಂಬಿದ ನರೆ

ವಿಂಧ್ಯದಲ್ಲಿ ಸಾಗುವವರಿಗೆ ಬೆಳಕಾಗಬಲ್ಲ ದೀವಿಗೆ ಎಂಬುದನ್ನು ವೈವಿಧ್ಯಮಯವಾದ ಈ ಎಲ್ಲ ಲೇಖನಗಳಲ್ಲಿ ಮನಗಾಣಿಸಿದ್ದಾರೆ.

"ಮನಗಂಡಲ್ಲದೆ ಕಾಣಲಾಗದು
ಮನವುಂಡಲ್ಲದೆ ಉಣಲಾಗದು
ಮನಬೇಡಿದಲ್ಲದೆ ಬೇಡಲಾಗದು
ಆಸೆಯು ಹಂಗ ಹರಿಯಲಾಗದು
ಮರುಳೆ ತಿದ್ದು ಮನವನ್ನು
ತೀಡು ಮನವನ್ನು
ನಮ್ಮ ಸದ್ಗುರು ಬಸವಲಿಂಗನ
ಅಡಿದಾವರೆಗರ್ಪಿಸಿ ಕೊಡಗ ಮನವ ನಿರಾಳವಾಗಿಸಿ
ನಿರಾಳವಾಗಿ ಧನ್ಯನಾಗು ಸಾಕು ಸಾಕೆನ್ನು,
ಲಿಂಗಮಾನ್ಯನಾಗು ಎಲೆ ಜೀವವೆ"

ಶ್ರೀ ಬ. ಗಿ. ಯಲ್ಲಟ್ಟಿ ಅವರ ಸತ್ಸಂಗದಿಂದ ಹುಟ್ಟಿದ ವಚನ 'ಬೇಕು ಬೇಕು' ಎನ್ನುತ್ತ ಸುತ್ತುತ್ತಿರುವ ಕೊಳ್ಳಿ ದೆವ್ವಗಳಿಗೆ 'ಸಾಕು ಎನ್ನುವ ಮಂತ್ರಬೋಧೆ ಮಾಡುವ ಬಸವರಾಜ ಯಲ್ಲಟ್ಟಿ ಅವರದು ನಿಲವು. ಗಳಿಗೆಗೊಮ್ಮೆ ಕೈಕೊಡುವ ಆರೋಗ್ಯಕ್ಕೆ ಆಹ್ವಾನ ನೀಡಿ, ಮುದ ಮನಕ್ಕೆ ಲೇಖನ ಕಲೆಯು ಸಂಜೀವಿನಿಯನ್ನೂಡಿ ಬರೆದ ಈ ಇಪ್ಪತ್ತೊಂದು ಗಳು ವಸ್ತು ವೈವಿಧ್ಯ, ನಿರೂಪಣಾ ವಿಧಾನ, ಸಾಧಿಸುವ ಪರಿಣಾಮಗಳ ತುಂಬ ಎತ್ತರದ ಸ್ಥಾನಗಳಿಸಿಕೊಳ್ಳುತ್ತವೆ. ಬಸವಪಥ, ಬಸವ ಬೆಳಗು ಹಲವು ಸಂಭಾವನಾ ಗ್ರಂಥಗಳಲ್ಲಿ ಈಗಾಗಲೇ ಪ್ರಕಟಗೊಂಡ ಈ ಲೇಖನಗಳ ಕಟ್ಟಲಾಗದು. ಇದೊಂದು ಪಾರಮಾರ್ಥ ಹಾಗು ವಚನಾನುಭಾವ ಕ್ಷೇ ವಿಶಿಷ್ಟ ಕಾಣ್ಕೆ ಎಂಬುದು ನಿರ್ವಿವಾದ ! ಬಸವಾಭಿಮಾನಿಗಳಿಗೆ ಇದೆ ಆತ್ಮನೈವೇದ್ಯ ಎನ್ನುವುದೇ ಸೂಕ್ತ !!

'ವಾತ್ಸಲ್ಯ', ಬನಹಟ್ಟಿ — ಬಿ. ಆರ್. ಪೋಲೀಸಪಾ
೧-೯-೧೯೯೭



ಅರಿವು–ಆಚಾರ–ಅನುಭಾವಗಳನ್ನು ಅಂಗವಿಸಿಕೊಂಡು, ಮಾನವತ್ವದಿಂದ ಮಹಾಮಾನವತ್ವಕ್ಕೆ ಅಂದರೆ ಶರಣತ್ವಕ್ಕೆ ಏರಿರುವ ಹಿರಿಯ ಅನುಭಾವಿ, ಶರಣ, ಬಸವಭಕ್ತ, ಶ್ರೀ ಬ. ಗಿ. ಯಲ್ಲಟ್ಟಿ ಯವರು "ವಚನಮುಖದಲ್ಲಿ ಶರಣ ದರ್ಶನ" ಎಂಬ ಗ್ರಂಥ ರಚಿಸಿದ್ದಾರೆ.

ಈ ಗ್ರಂಥದ ಹೆಸರೇ ಹೇಳುವಂತೆ 'ವಚನಗಳಲ್ಲಿ ಶರಣರ ದರ್ಶನ'ವನ್ನು ಈ ಶರಣಜೀವಿ ಯಲ್ಲಟ್ಟಿಯವರು ನಮಗೆಲ್ಲಾ ಮಾಡಿಸಿದ್ದಾರೆ. ಶ್ರೀಯುತರ ಈ ಪುಸ್ತಕದಲ್ಲಿ ೨೧ ಲೇಖನಗಳಿವೆ. ಒಂದೊಂದು ಲೇಖನವೂ ಶ್ರೀ ಯಲ್ಲಟ್ಟಿ ಶರಣರ ಪಕ್ವ ಹೃದಯದ, ಪರಿಶುದ್ಧ ಮನಸ್ಸಿನ, ಬಸವತತ್ತ್ವ ಕಳಕಳಿಯ ಪರಿಚಯ ಮೂಡಿಸುತ್ತದೆ.

'ವಚನ' ಇದು ಬರಿ ಅಕ್ಷರಗಳ ಜೋಡಣೆಯಲ್ಲ, ಬರಿ ಮಾತೂ ಅಲ್ಲ. ಅರಿವು-ಆಚರಣೆಯಲ್ಲಿ ಬಂದಾಗ, ಆಚರಣೆಯಿಂದ ಅನುಭವವಾದಾಗ ಅನುಭವವೇ–ಅನುಭಾವವಾಗಿ ಹೊರಹೊಮ್ಮಿದ ಶರಣ ಹೃದಯದ ನುಡಿಗಡಣವೇ ವಚನಗಳಾಗಿವೆ. 'ವಚನ' ಈ ಪದದ ಅಕ್ಷರಗಳನ್ನು ವಿಶ್ಲೇಷಿಸಿದಾಗ– 'ವ' ಎಂದರೆ ವಚಿಸು, 'ಚ' ಎಂದರೆ ಚರಿಸು, 'ನ' ಎಂದರೆ ನಯನಿಸು ಎಂದು ಅನುಭಾವವಿರುವುದು ತಿಳಿದು ಬರುತ್ತದೆ. ಆದ್ದರಿಂದ ಶರಣನು ವಚಿಸಿದ್ದು, ಶರಣನು ರಚಿಸಿದ್ದು, ಶರಣನು ನಯನಿಸಿದ್ದು, ಈ ಒಟ್ಟು ಅನುಭಾವದ ವಾಣಿಯೇ 'ವಚನ'ವಾಗಿವೆ.

ಇಂತಹ ಬಸವಾದಿ ಶರಣರ ವಚನಗಳನ್ನು ಅನುಭಾವ ಮಾಡುತ್ತಾ ಆ ವಚನಗಳ ಮುಖದಲ್ಲಿ ಶರಣರ ದರ್ಶನ ಅಂದರೆ ಶರಣರ ತತ್ತ್ವಂಗಳ ದರ್ಶನ ಮಾಡಿಸುತ್ತಾರೆ ಶರಣ ಬ. ಗಿ. ಯಲ್ಲಟ್ಟಿಯವರು. ಶ್ರೀಯುತರ ಈ ಬಿಡಿ–ಬಿಡಿ ಲೇಖನಗಳಲ್ಲಿ ವೈವಿಧ್ಯತೆ ಇದೆ, ಜೊತೆಗೆ ಬಸವತತ್ತ್ವದ ಏಕತಾನತೆ ಇದೆ. ಶಿವಶರಣರ ಜೀವನ–ಸಾಧನೆ–ಸಿದ್ಧಾಂತಗಳ ದರ್ಶನವಿದೆ.

ಶರಣ ಬ. ಗಿ. ಯಲ್ಲಟ್ಟಿಯವರಂತಹ ಅನುಭಾವಿಗಳಿಂದ ಇನ್ನೂ ಅನೇಕ ಗ್ರಂಥಗಳು ಹೊರಬರುವಂತಾಗಲಿ, ವಿಶ್ವಗುರು ಬಸವಣ್ಣನವರ, ಚಿತ್ತರಗಿ ಶ್ರೀ ವಿಜಯಮಹಾಂತ ಶಿವಯೋಗಿಗಳವರ ಕರುಣೆ ನಿರಂತರವಾಗಿರಲಿ ಎಂದು ಹೃದಯಾರೆ ಶುಭ ಹಾರೈಸುತ್ತೇವೆ.

ಶರಣು–ಶರಣಾರ್ಥಿಗಳು.

**—ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳು**
ಇಳಕಲ್ಲ

---

ಕವರ : ಅಲ್ಲಮ